ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ
ಮುಕ್ತಗಂಗೋತ್ರಿ, ಮೈಸೂರು-೫೭೦ ೦೦೬



KARNATAKA STATE OPEN UNIVERSITY
Mukthagangotri, Mysuru-570 006

# ಇತಿಹಾಸ

## ಎಂ.ಎ. (ಅಂತಿಮ)

## ಭಾರತದ ಸ್ವಾತಂತ್ರ್ಯ ಚಳುವಳಿಯ ಇತಿಹಾಸ (1885–1947)



ಪಟೇಲ್



ಗಾಂಧಿ



ನೆಹರೂ

**ಕೋರ್ಸ್-IX**

**ಬ್ಲಾಕ್-1 ರಿಂದ 7**

# ಕರಾಮುವಿ ರಾಷ್ಟ್ರೀಯ ಅಂತಾರಾಷ್ಟ್ರೀಯ ಮಾನ್ಯತೆ




- ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವು ಜೂನ್ ೧, ೧೯೯೬ ರಂದು ಸರ್ಕಾರಿ ಆದೇಶ ಸಂಖ್ಯೆ : ED1/UOV/dated 12th February 1996 (Karnataka State Open University Act - 1992) ರ ಪ್ರಕಾರ ಕರ್ನಾಟಕ ರಾಜ್ಯಪಾಲರ ಅನುಮೋದನೆಯೊಂದಿಗೆ ಪೂರ್ಣಪ್ರಮಾಣದ ವಿಶ್ವವಿದ್ಯಾನಿಲಯವಾಗಿ ಸ್ಥಾಪನೆಗೊಂಡಿತು. ರಾಜ್ಯದ ಶೈಕ್ಷಣಿಕ ಪದ್ಧತಿಯಲ್ಲಿ 'ದೂರ ಶಿಕ್ಷಣ ಪದ್ಧತಿ'ಯನ್ನು ಆರಂಭಿಸುವ ಮತ್ತು ಉತ್ತೇಜಿಸುವ ದೃಷ್ಟಿಯಿಂದ ಈ ಮುಕ್ತ ವಿಶ್ವವಿದ್ಯಾನಿಲಯವನ್ನು ಅಧಿನಿಯಮದ ಮೂಲಕ ಸ್ಥಾಪಿಸಲಾಯಿತು.
- ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಅಧಿನಿಯಮ ೧೯೯೨ ರಂತೆ ಈ ವಿಶ್ವವಿದ್ಯಾನಿಲಯವು ಕರ್ನಾಟಕ ರಾಜ್ಯದ ಒಳಗೆ ಸಂಸ್ಥೆಗಳನ್ನು, ಕಾಲೇಜುಗಳನ್ನು, ಪ್ರಾದೇಶಿಕ ಕೇಂದ್ರಗಳನ್ನು ಮತ್ತು ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವ, ನಿರ್ವಹಿಸುವ ಮತ್ತು ಮಾನ್ಯತೆ ಕೊಡುವ ಅಧಿಕಾರವನ್ನು ಹೊಂದಿದೆ. ಅಗತ್ಯವಿದ್ದ ಸಂದರ್ಭಗಳಲ್ಲಿ ಕರ್ನಾಟಕ ರಾಜ್ಯದ ಹೊರಗಿನ ಸ್ಥಳಗಳಲ್ಲೂ ಪ್ರಾದೇಶಿಕ ಕೇಂದ್ರ ಮತ್ತು ಅಧ್ಯಯನ ಕೇಂದ್ರಗಳನ್ನು ತೆರೆಯಲು ಅಧಿಕಾರವನ್ನು ಪಡೆದಿದೆ.
- ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಎಲ್ಲಾ ಶೈಕ್ಷಣಿಕ ಕಾರ್ಯಕ್ರಮಗಳು 'ದೂರ ಶಿಕ್ಷಣ ಮಂಡಳಿ' (DEC), ಮಾನವಸಂಪನ್ಮೂಲ ಅಭಿವೃದ್ಧಿ ಸಚಿವಾಲಯ (MHRD), ನವದೆಹಲಿಯ ಮಾನ್ಯತೆಯನ್ನು ಪಡೆದಿವೆ.
- ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವು ೧೯೯೯ರಿಂದ ನವದೆಹಲಿಯಲ್ಲಿರುವ 'ಭಾರತೀಯ ವಿಶ್ವವಿದ್ಯಾನಿಲಯಗಳ ಸಂಘ'ದ (AIU) ಖಾಯಂ ಸದಸ್ಯತ್ವವನ್ನು ಹೊಂದಿದೆ.
- ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವು ೧೯೯೯ರಿಂದ 'ಕಾಮನ್‌ವೆಲ್ತ್ ವಿಶ್ವವಿದ್ಯಾನಿಲಯಗಳ ಸಂಘ' (ACU), ಲಂಡನ್, ಯುನೈಟೆಡ್ ಕಿಂಗ್‌ಡಮ್‌ನ ಶಾಶ್ವತ ಸದಸ್ಯ ಸಂಸ್ಥೆಯಾಗಿದೆ. ಸದಸ್ಯತ್ವದ ಸಂಖ್ಯೆ : ZKASOPENUINI.
- ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವು ೧೯೯೯ ರಿಂದ 'ಏಷಿಯಾದ ಮುಕ್ತ ವಿಶ್ವವಿದ್ಯಾನಿಲಯಗಳ ಸಂಘ' (AAOU), ಬೀಜಿಂಗ್, ಚೀನಾ – ಇದರ ಶಾಶ್ವತ ಸದಸ್ಯ ಸಂಸ್ಥೆಯಾಗಿದೆ.
- ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವು 'ಕಾಮನ್‌ವೆಲ್ತ್ ಆಫ್ ಲರ್ನಿಂಗ್' (COL) ಕೆನಡ, ಇದರ ಸಹಯೋಗವನ್ನು ೨೦೦೩ ರಿಂದ ಹೊಂದಿದೆ. 'ಕಾಮನ್‌ವೆಲ್ತ್ ಆಫ್ ಲರ್ನಿಂಗ್' ಎನ್ನುವುದು ದೂರ ಶಿಕ್ಷಣದಲ್ಲಿ ಮುಕ್ತಕಲಿಕಾ ತಿಳಿವಳಿಕೆ, ಸಂಪನ್ಮೂಲಗಳು ಮತ್ತು ತಂತ್ರಜ್ಞಾನಗಳ ಅಭಿವೃದ್ಧಿ ಮತ್ತು ಹಂಚುವಿಕೆಗಳನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಕಾಮನ್‌ವೆಲ್ತ್ ದೇಶಗಳ ಸರ್ಕಾರಗಳಿಂದ ನಿರ್ಮಾಣಗೊಂಡ ಅಂತಾರಾಷ್ಟ್ರೀಯ ಸರ್ಕಾರಿ ಸಂಸ್ಥೆಯಾಗಿದೆ.

**ಉನ್ನತ ಶಿಕ್ಷಣ ಎಲ್ಲರಿಗೂ ಎಲ್ಲೆಡೆ**



# ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

ಮುಕ್ತಗಂಗೋತ್ರಿ, ಮೈಸೂರು – 570 006.

## ಎಂ.ಎ., ಇತಿಹಾಸ (ಅಂತಿಮ)

## ಪತ್ರಿಕೆ – 09 : ಭಾರತದ ಸ್ವಾತಂತ್ರ್ಯ ಚಳುವಳಿಯ ಇತಿಹಾಸ (1885–1947)

## ಪಠ್ಯಕ್ರಮ ವಿನ್ಯಾಸ ಮತ್ತು ಸಂಪಾದಕ ಮಂಡಳಿ

**ಪ್ರೊ. ಎಂ. ಜಿ. ಕೃಷ್ಣನ್**
ಕುಲಪತಿಗಳು ಮತ್ತು ಅಧ್ಯಕ್ಷರು
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

**ಪ್ರೊ. ಟಿ. ಡಿ. ದೇವೇಗೌಡ**
ಡೀನ್ (ಶೈಕ್ಷಣಿಕ) ಸಮಾವೇಶಕರು (ಪ್ರಭಾರ)
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

***ಪ್ರೊ. ಎ. ಸೋಮಶೇಖರ್*** — **ವಿಷಯ ಸಂಯೋಜಕರು**
ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು
ಇತಿಹಾಸ ಅಧ್ಯಯನ ಮತ್ತು ಸಂಶೋಧನಾ ವಿಭಾಗ,
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು

## ಪಠ್ಯಕ್ರಮ ನಿರೂಪಕರು

| ಪಠ್ಯಕ್ರಮ ನಿರೂಪಕರು | | ಘಟಕಗಳು |
|---|---|---|
| ***ಪ್ರೊ. ಎ. ಸೋಮಶೇಖರ್*** | ಬ್ಲಾಕ್–1 | 01 ರಿಂದ 03 |
| ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು | ಬ್ಲಾಕ್–2 | 04 ರಿಂದ 07 |
| ಇತಿಹಾಸ ಅಧ್ಯಯನ ಮತ್ತು ಸಂಶೋಧನಾ ವಿಭಾಗ | | |
| ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು | | |
| ***ಡಾ. ಸುಗೀತಾ ಸುವರ್ಣ*** | ಬ್ಲಾಕ್–3 | 08 ರಿಂದ 11 |
| ನಿವೃತ್ತ ಇತಿಹಾಸ ಪ್ರಾಧ್ಯಾಪಕರು, | | |
| ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. | | |
| ***ಪ್ರೊ. ಎ. ಸೋಮಶೇಖರ್*** | ಬ್ಲಾಕ್–4 | 12 ರಿಂದ 16 |
| ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು | ಬ್ಲಾಕ್–5 | 17 ರಿಂದ 20 |
| ಇತಿಹಾಸ ಅಧ್ಯಯನ ಮತ್ತು ಸಂಶೋಧನಾ ವಿಭಾಗ | ಬ್ಲಾಕ್–6 | 21 ರಿಂದ 23 |
| ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು | ಬ್ಲಾಕ್–7 | 24 ರಿಂದ 27 |

## ಕುಲಸಚಿವರು

ಕ.ರಾ.ಮು.ವಿ., ಯ ಶೈಕ್ಷಣಿಕ ವಿಭಾಗದಿಂದ ಸಿದ್ಧಪಡಿಸಲಾಗಿದೆ.


ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಕೋರ್ಸ್‌ಗಳ ಹೆಚ್ಚಿನ ವಿವರಗಳನ್ನು ವಿಶ್ವವಿದ್ಯಾನಿಲಯದ ಕಾರ್ಯಾಲಯ, ಮುಕ್ತಗಂಗೋತ್ರಿ, ಮೈಸೂರು – 570 006 ಇಲ್ಲಿಂದ ಪಡೆಯಬಹುದು.

# ಕೋರ್ಸ್ – 9

# ಭಾರತದ ಸ್ವಾತಂತ್ರ್ಯ ಚಳುವಳಿಯ ಇತಿಹಾಸ (1885–1947)

**ಪೀಠಿಕೆ :–**

ನೀವು ಕೋರ್ಸ್ 9, ಬ್ಲಾಕ್ 1ರಲ್ಲಿ ವಸಾಹತು ಆಳ್ವಿಕೆ ಮತ್ತು ಅದರ ಪ್ರಭಾವದ ಬಗ್ಗೆ ತಿಳಿಯುತ್ತೀರಿ. ಈ ಬ್ಲಾಕ್‌ನಲ್ಲಿ **1,2,3** ಎಂಬುದಾಗಿ ಮೂರು ಘಟಕಗಳಿವೆ. **ಘಟಕ 1**ರಲ್ಲಿ ನೀವು ಬ್ರಿಟೀಷರಿಂದ ಭಾರತದ ಆಕ್ರಮಣದ ಬಗ್ಗೆ ತಿಳಿಯುತ್ತೀರಿ. ಇಲ್ಲಿ ಬ್ರಿಟೀಷರು ವ್ಯಾಪಾರಕ್ಕೆ ಬಂದು ಇತರೇ ಐರೋಪ್ಯರೊಂದಿಗೆ, ಪೈಪೋಟಿ ಮತ್ತು ಹೋರಾಟವನ್ನು ನಡೆಸಿ, ಹೇಗೆ ಯಶಸ್ವಿಯಾದರು ಹಾಗೂ ಹೇಗೆ ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಂಡು ಭಾರತದ ಯಜಮಾನರಾದರು ಎಂಬುದನ್ನು ತಿಳಿಯುವಿರಿ. ಇನ್ನು **ಘಟಕ 2**ರಲ್ಲಿ ಬ್ರಿಟೀಷರ ಈಸ್ಟ್ ಇಂಡಿಯಾ ಕಂಪನಿಯು ಹೇಗೆ ತನ್ನ ವ್ಯಾಪಾರ ಮತ್ತು ಪ್ರಾದೇಶಿಕ ವಿಸ್ತರಣೆಯನ್ನು ಇಲ್ಲಿ ಆಳುತ್ತಿದ್ದ ಮೊಗಲರು, ಮರಾಠರು, ಮೈಸೂರು, ಬಂಗಾಳ, ಪಂಜಾಬ್ ಮತ್ತು ಸಿಂಧ್ ರಾಜ್ಯಗಳೊಂದಿಗೆ ತಮ್ಮ ಕುಟಿಲ ನೀತಿಯಿಂದ ಹೇಗೆ ವಸಾಹತು ನಿರ್ಮಾಣ ಮಾಡಿಕೊಂಡರು ಎಂಬುದರ ಬಗ್ಗೆ ತಿಳಿಯುತ್ತೀರಿ. ಕೊನೆಯಲ್ಲಿ **ಘಟಕ 3**ರಲ್ಲಿ ನೀವು ಭಾರತದಲ್ಲಿ ಬ್ರಿಟೀಷರು ಹೇಗೆ ರಾಜಕೀಯ ಮತ್ತು ಆರ್ಥಿಕವಾಗಿ ಬೆಳೆದರು ಹಾಗೂ ಅವರು ಭಾರತದಲ್ಲಿ ತಮ್ಮ ಅನೇಕ ನೀತಿಗಳಿಂದ ಆರ್ಥಿಕವಾಗಿ ತಮ್ಮ ಪ್ರಭಾವ ಬೀರಿದರು ಮತ್ತು ಇದು ಭಾರತಕ್ಕೆ ಹೇಗೆ ತೊಂದರೆದಾಯಕವಾಯಿತು ಎಂಬುದನ್ನು ನೀವು ತಿಳಿಯುತ್ತೀರಿ.

**ಬ್ಲಾಕ್ – 2ರ ಪರಿಚಯ:–**

ಈ ಎರಡನೇ ಬ್ಲಾಕ್ ಭಾರತದ ಸ್ವಾತಂತ್ರ್ಯ ಚಳುವಳಿಯ ಕೋರ್ಸಿನಲ್ಲಿದೆ. ಈ ಬ್ಲಾಕ್‌ನಲ್ಲಿ ನಾಲ್ಕು ಘಟಕಗಳಿದ್ದು, ಅವುಗಳ ವಸಾಹತುಶಾಹಿ ಆಳ್ವಿಕೆ ಮತ್ತು ಭಾರತೀಯರ ಪ್ರತಿಕ್ರಿಯೆ ಎಂಬ ಶೀರ್ಷಿಕೆಯಡಿಯಲ್ಲಿವೆ.

**ಘಟಕ – 4**ರಲ್ಲಿ ನಾವು 1857ರ ಮಹಾದಂಗೆಯನ್ನು ವಿವರವಾಗಿ ತಿಳಿಯುವಲ್ಲಿ ಈ ದಂಗೆಯ ಕಾರಣಗಳು, ದಂಗೆಯ ಗತಿ ಮತ್ತು ದಂಗೆಯ ಪರಿಣಾಮಗಳ ಬಗ್ಗೆ ವಿಸ್ತಾರವಾಗಿ ತಿಳಿಯುತ್ತೇವೆ. **ಘಟಕ –5**ರಲ್ಲಿ ನಾವುಗಳು ರಾಷ್ಟ್ರೀಯತೆಯ ಹುಟ್ಟು ಮತ್ತು ರಾಷ್ಟ್ರೀಯತೆಗೆ ಕಾರಣಗಳನ್ನು ತಿಳಿಯುವುದಲ್ಲದೆ, ಭಾರತದ ಬಗ್ಗೆ ಪರಿಚಯ ಮತ್ತು ಬ್ರಿಟೀಷರು ಭಾರತವನ್ನು ಆಕ್ರಮಿಸಿದ ಬಗ್ಗೆಯೂ ಸಹ ಅಧ್ಯಯನ ಮಾಡುತ್ತೇವೆ. **ಘಟಕ –6**ರಲ್ಲಿ ಭಾರತೀಯರಲ್ಲಿ ರಾಷ್ಟ್ರೀಯತೆಯ ಜ್ಞಾನವನ್ನು ತರಲು ಪ್ರಯತ್ನಿಸಿದ ಸಮಾಜೋ ಧಾರ್ಮಿಕ ಸುಧಾರಕರ ಬಗ್ಗೆ ತಿಳಿಯುವುದಲ್ಲದೆ, ಆ ಸಂಸ್ಥೆಗಳಲ್ಲಿ ಬ್ರಹ್ಮಸಮಾಜ ಮತ್ತು ಆರ್ಯ ಸಮಾಜಗಳ ಬಗ್ಗೆ ತಿಳಿಯುತ್ತೇವೆ. **ಘಟಕ –7**ರಲ್ಲಿ ಸಮಜೋ–ಧಾರ್ಮಿಕ ಚಳುವಳಿಯ ಬಗ್ಗೆ ತಿಳಿಯುವುದಲ್ಲದೆ ಮತ್ತು ವಿಶೇಷವಾಗಿ ರಾಮಕೃಷ್ಣ ಮಿಷನ್, ಥಿಯೋಸೋಫಿಕಲ್ ಸೊಸೈಟಿ ಮತ್ತು ಆಲೀಘರ್ ಚಳುವಳಿಯ ಬಗ್ಗೆ ವಿವರವಾಗಿ ತಿಳಿಯುತ್ತೇವೆ.

**ಬ್ಲಾಕ್ – 3ರ ಪರಿಚಯ:–**

ಬ್ಲಾಕ್ 3ನಲ್ಲಿ ನಾಲ್ಕು ಘಟಕಗಳಿದ್ದು, ಅವುಗಳು ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಸ್ಥಾಪನೆ ಮತ್ತು ಸ್ವಾತಂತ್ರ್ಯ ಚಳುವಳಿಯ ಹಲವು ಹಂತಗಳ ಬಗ್ಗೆ ತಿಳಿಸುತ್ತವೆ. **ಘಟಕ 8**ರಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆ ಮತ್ತು ಅದರ ಸ್ಥಾಪಕರು ಮತ್ತು ಅದರ ಸ್ಥಾಪನೆಗೆ ಕಾರಣಗಳನ್ನು ತಿಳಿಯಬಹುದು. **ಘಟಕ 9**ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನ ಮಂದಗಾಮಿಗಳು ಮತ್ತು ರಾಷ್ಟ್ರೀಯತೆಗೆ ಇವರ ಕೊಡುಗೆಗಳನ್ನು ತಿಳಿಯಬಹುದು. **ಘಟಕ 10**ರಲ್ಲಿ ಕಾಂಗ್ರೆಸ್ಸಿನ ಇನ್ನೊಂದು ಗುಂಪಾದ ತೀವ್ರಗಾಮಿಗಳು ಮತ್ತು ಸ್ವಾತಂತ್ರ್ಯ ಚಳುವಳಿಯಲ್ಲಿ ಇವರ ಪಾತ್ರವನ್ನು ತಿಳಿಯಬಹುದು. **ಘಟಕ 11**ರಲ್ಲಿ ಕ್ರಾಂತಿಕಾರಿ ರಾಷ್ಟ್ರೀಯ ವಾದಿಗಳು ಹಾಗೂ ಭಯೋತ್ಪಾದಕರ ಚಳುವಳಿಗಾರರ ಬಗ್ಗೆ ಸವಿಸ್ತಾರವಾಗಿ ತಿಳಿಯಬಹುದಾಗಿದೆ.

**ಬ್ಲಾಕ್ – 4ರ ಪರಿಚಯ:–**

ಕೋರ್ಸ್ 9ರಲ್ಲಿ ಬ್ಲಾಕ್ 4ರಲ್ಲಿ ಐದು ಘಟಕಗಳಿದ್ದು, ಅವುಗಳು ಸ್ವಾತಂತ್ರ್ಯ ಚಳುವಳಿಯಲ್ಲಿ ಇತರೇ ಚಟುವಟಿಕೆಗಳನ್ನು ಕುರಿತು ವಿಸ್ತರವಾಗಿ ಇವುಗಳನ್ನು ಹಲವು ಸಂಘ ಸಂಸ್ಥೆಗಳು, ರಾಜಕೀಯ ಪಕ್ಷಗಳು ಭಾಗವಹಿಸಿ ಹೋರಾಟಕ್ಕೆ ತಮ್ಮದೇ ಆದ ರೀತಿಯಲ್ಲಿ ಕೊಡುಗೆ ಸಲ್ಲಿಸಿವೆ ಮತ್ತು ಇವುಗಳು ರಾಷ್ಟ್ರೀಯ ಕಾಂಗ್ರೆಸ್ ಜೊತೆ ಗೂಡಿ ಹೋರಾಟ ಮಾಡಿವೆಯೆಂದು ಹೇಳಬಹುದು.

**ಘಟಕ 12**ರಲ್ಲಿ ಭಾರತದಲ್ಲಾದ ಹೋಂರೂಲ್ ಚಳುವಳಿಯನ್ನು ಅದರ ನಾಯಕತ್ವವನ್ನು ವಹಿಸಿದ ತಿಲಕ್, ಅನಿಬೆಸೆಂಟ್‌ರವರ ಕಾರ್ಯಗಳನ್ನು ತಿಳಿಯುತ್ತೇವೆ. **ಘಟಕ 13**ರಲ್ಲಿ ಖಿಲಾಫತ್ ಚಳುವಳಿ ಇದರ ಐತಿಹಾಸಿಕ ಹಿನ್ನೆಲೆ ಮತ್ತು ಗಾಂಧೀಜಿಯವರು ಮತ್ತು ಇತರೇ ನಾಯಕರು ಈ ಚಳುವಳಿಯ ಬಗ್ಗೆ ಇದ್ದ ಅಭಿಪ್ರಾಯಗಳನ್ನು ಮತ್ತು ರಾಷ್ಟ್ರೀಯ ಚಳುವಳಿಗೆ ಈ ಚಳುವಳಿಯ ಕೊಡುಗೆಯನ್ನು ಸಹ ತಿಳಿಯುತ್ತೇವೆ. **ಘಟಕ 14**ರಲ್ಲಿ ಸ್ವರಾಜ್ಯವಾದಿಗಳು ಮತ್ತು ಅವರ ಕಾಲದಲ್ಲಿ ಭಾರತದ ರಾಜಕೀಯದ ಬದಲಾವಣೆಯ ಬಗ್ಗೆ ತಿಳಿಯುವುದಲ್ಲದೆ ಸ್ವರಾಜ್ಯವಾದಿಗಳ ಮತ್ತು ಅವರ ಕಾಲದಲ್ಲಿ ರಾಷ್ಟ್ರೀಯ ನಾಯಕರನ್ನು ಹುರಿದುಂಬಿಸಿದ್ದು ಎಲ್ಲರೂ ಸಹ ಈ ಘಟಕದಲ್ಲಿ ಅಧ್ಯಯನ ಮಾಡುತ್ತೇವೆ. **ಘಟಕ 15**ರಲ್ಲಿ ಸಮಾಜವಾದಿಗಳ ಚಳುವಳಿಯ ಬಗ್ಗೆ ಅಧ್ಯಯನ ಮಾಡುತ್ತೇವೆ. ಇಲ್ಲಿ ಕಮ್ಯುನಿಷ್ಟ ತತ್ವಗಳು ಸಮಾಜವಾದದ ಚಿಂತನೆಗಳು ಮತ್ತು ಸಮಾಜವಾದಿ ನಾಯಕರು ಮತ್ತು ಅವರು ಭಾರತದ ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸಿದ್ದು, ಮುಂತಾದ ವಿಷಯವನ್ನು ಅಧ್ಯಯನ ಮಾಡುತ್ತೇವೆ. **ಘಟಕ 16**ರಲ್ಲಿ 1919ರ ಭಾರತ ಸರ್ಕಾರ ಕಾಯ್ದೆ ಮತ್ತು ಸ್ವಾತಂತ್ರ್ಯ ಚಳುವಳಿಯ ಬಗ್ಗೆ ತಿಳಿಯುತ್ತೇವೆ. ಈ ಕಾಯ್ದೆಯ ನಿಬಂಧನೆಗಳು ಗುಣಾವಗುಣಗಳು ಮತ್ತು ಇದರ ಅನುಷ್ಠಾನ ಮತ್ತು ರಾಷ್ಟ್ರೀಯ ನಾಯಕರು ಇದರ ಬಗ್ಗೆ ನೀಡಿದ ಅಭಿಪ್ರಾಯ ಮುಂತಾದ ವಿಷಯಗಳನ್ನು ತಿಳಿಯುತ್ತೇವೆ.

**ಬ್ಲಾಕ್ – 5ರ ಪರಿಚಯ:–**

ಬ್ಲಾಕ್ 5ರಲ್ಲಿ ನಾಲ್ಕು ಘಟಕಗಳಿವೆ. ಇವುಗಳು ಗಾಂಧೀಜಿ ಮತ್ತು ಸ್ವಾತಂತ್ರ್ಯ ಚಳುವಳಿಯ ಶೀರ್ಷಿಕೆಯಡಿಯಲ್ಲಿ ಕಂಡು ಬರುತ್ತವೆ. ಘಟಕ 17ರಲ್ಲಿ ಗಾಂಧೀಜಿಯವರು ಕ್ರಮಬದ್ಧವಾಗಿ ಪ್ರಾರಂಭ ಮಾಡಿದ ಸಹಕಾರ ಚಳುವಳಿಯ ಬಗ್ಗೆ ತಿಳಿಯಲಾಗುವುದು. ಇದರ ಉಗಮ ಗತಿ ಮತ್ತು ಪರಿಣಾಮಗಳನ್ನು ಸಹ ಅರ್ಥಮಾಡಿಕೊಳ್ಳಲಾಗುವುದು. ಇನ್ನು ಘಟಕ 18ರಲ್ಲಿ ಮತ್ತೊಂದು ಚಳುವಳಿಯಾದ ಕಾಯ್ದೆ ಭಂಗ ಚಳುವಳಿಯನ್ನು ಅಧ್ಯಯನ ಮಾಡಲಾಗುತ್ತದೆ. ಇಲ್ಲಿ ಉಪ್ಪಿನ ಸತ್ಯಾಗ್ರಹ ಶಾಲಾಕಾಲೇಜು ಕೋರ್ಟು ಕಛೇರಿಗಳಲ್ಲಿ ಕಾನೂನುಗಳನ್ನು ಮುರಿಯುವುದು ಅಥವಾ ಭಂಗ ಮಾಡಿದ ಚಳುವಳಿಯನ್ನು ತಿಳಿಯಲಿದ್ದೇವೆ. ಘಟಕ 19ರಲ್ಲಿ ಮೂರು ದುಂಡುಮೇಜಿನ ಪರಿಷತ್ತುಗಳನ್ನು ಅವುಗಳ ಕಾರ್ಯವೈಖರಿ ಮತ್ತು ಅವುಗಳ ವಿಫಲತೆಗಳನ್ನು ನೋಡುತ್ತೇವೆ. ಕೊನೆಯದಾಗಿ ಘಟಕ 20ರಲ್ಲಿ ಕಮ್ಯೂನಲ್ ಅವಾರ್ಡ್ ಕೋರ್ಟು ತೀರ್ಪು ಮತ್ತು ಪೂನಾ ಒಪ್ಪಂದದ ಬಗ್ಗೆ ತಿಳಿಯಲಾಗುವುದು. ಇದಕ್ಕೆ ಬಂದ ಟೀಕೆ ಅಂಬೇಡ್ಕರ್ ಮತ್ತು ಗಾಂಧೀಜಿಯವರ ಅಭಿಪ್ರಾಯಗಳು ಮುಂತಾದುವನ್ನು ಸಹ ತಿಳಿಯಲಾಗುವುದು.

**ಬ್ಲಾಕ್ – 6ರ ಪರಿಚಯ:–**

ಕೋರ್ಸ್ 9ರ ಬ್ಲಾಕ್ 6ರಲ್ಲಿ ಮೂರು ಘಟಕಗಳನ್ನು ಈ ಘಟಕಗಳು ಗಾಂಧೀಜಿಯವರು ಮತ್ತು ಸ್ವಾತಂತ್ರ್ಯ ಚಳುವಳಿಯ ಹೋರಾಟದಲ್ಲಿ ಅಂತಿಮ ಪ್ರಯತ್ನವಾಗಿ ಮಾಡಿದ ಚಳುವಳಿಗಳು ಹಾಗೂ ವ್ಯಕ್ತಿಗಳ ಕಾರ್ಯಗಳ ಬಗ್ಗೆ ಅಧ್ಯಯನ ಮಾಡುತ್ತೇವೆ.

**ಘಟಕ – 21**ರಲ್ಲಿ ನಾವು ಬ್ರಿಟೀಷರು ಜಾರಿಗೆ ತಂದ 1935 ಭಾರತೀಯ ಕಾಯ್ದೆಯನ್ನು ಮತ್ತು ಈ ಕಾಯ್ದೆಯು ಹೇಗೆ ಕಾರ್ಯ ನಿರ್ವಹಿಸಿತು ಎಂಬುದರ ಬಗ್ಗೆ ಅಧ್ಯಯನ ಮಾಡುತ್ತೇವೆ.

**ಘಟಕ –22**ರಲ್ಲಿ ಗಾಂಧೀಜಿಯವರು ಬ್ರಿಟೀಷರನ್ನು ಇಲ್ಲಿಂದ ಓಡಿಸಿ ಸ್ವಾತಂತ್ರ್ಯವನ್ನು ಪಡೆಯಲೇಬೇಕೆಂದು ತೀರ್ಮಾನಿಸಿ ಪ್ರಾರಂಭಿಸಿದ ಕ್ವಿಟ್ ಇಂಡಿಯಾ ಚಳುವಳಿ ಮತ್ತು ಇದರ ಪರಿಣಾಮಗಳನ್ನು ತಿಳಿಯುತ್ತೇವೆ.

**ಘಟಕ – 23**ರಲ್ಲಿ ಭಾರತೀಯ ಸ್ವಾತಂತ್ರ್ಯ ಚಳುವಳಿಗೆ ತನ್ನದೇ ಆದ ವಿಭಿನ್ನ ರೀತಿಯಲ್ಲಿ ಕೊಡುಗೆ ಸಲ್ಲಿಸಿದ ಎಡ ಪಂಥೀಯ ನಾಯಕರಾದ ಸೇನಾನಿ ಸುಭಾಷ್‌ಚಂದ್ರಬೋಸ್ ಮತ್ತು ಅವರ ಆಜಾದ್ ಹಿಂದ್ ಫೌಜ್ ಬಗ್ಗೆ ಅಧ್ಯಯನ ಮಾಡುತ್ತೇವೆ. ಈ ಘಟಕಗಳ ಅಧ್ಯಯನವು ಹೇಗೆ ಬ್ರಿಟಿಷರು ಭಾರತೀಯರಿಗೆ ಸ್ವಾತಂತ್ರ್ಯ ನೀಡಲು ಮುಂದಾದರು ಮತ್ತು ಅದಕ್ಕೆ ಕಾರಣಗಳೇನು ಎಂಬುದರ ಬಗ್ಗೆ ಸವಿಸ್ತಾರವಾಗಿ ತಿಳಿಸುತ್ತವೆ.

**ಬ್ಲಾಕ್ –7ರ ಪರಿಚಯ:–**

ಕೋರ್ಸ್ 9ರ ಬ್ಲಾಕ್ 7ರಲ್ಲಿ ನಾಲ್ಕು ಘಟಕಗಳಿವೆ. ಇವುಗಳು ಭಾರತೀಯ ಸಂವಿಧಾನದ ಪ್ರಸ್ತಾವನೆಗಳು ಮತ್ತು ಭಾರತದ ಸ್ವಾತಂತ್ರ್ಯವನ್ನು ಕುರಿತ ಅಧ್ಯಯನವಾಗಿದೆ. ಘಟಕ 24ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ನೀಡಲು ತೀರ್ಮಾನಿಸಿ ಭಾರತದ ಸಮಸ್ಯೆಗಳನ್ನು ಬಗೆಹರಿಸಲು ಜಾರಿಗೊಳಿಸಿದ ಕ್ರಿಪ್ಸ್ ಮಿಷನ್ ಮತ್ತು ವೇವೆಲ್ ಯೋಜನೆಗಳ ಬಗ್ಗೆ ತಿಳಿಯುತ್ತೇವೆ. ಘಟಕ 25ರಲ್ಲಿ ಮೌಂಟ್ ಬ್ಯಾಟನ್ ಯೋಜನೆ ಮತ್ತು ಭಾರತಕ್ಕೆ ಸ್ವಾತಂತ್ರ್ಯ ನೀಡುವುದು ಮತ್ತು ಸಂವಿಧಾನದ ಜಾರಿಗೆ ಸಂವಿಧಾನ ರಚನಾ ಸಮಿತಿಯನ್ನು ರಚಿಸಲು ಮೌಂಟ್ ಬ್ಯಾಟನ್ ಯೋಜನೆಯನ್ನು ಕಾಣುತ್ತೇವೆ. ಘಟಕ 26ರಲ್ಲಿ ಭಾರತದ ವಿಭಜನೆಯನ್ನು ರ್‍ಯಾಡ್ ಕ್ರಿಪ್ಸ್ ಆಯೋಗದ ವರದಿಯ ಆಧಾರದ ಮೇಲೆ ಮಾಡಿದುದನ್ನು ಅಧ್ಯಯನ ಮಾಡುತ್ತೇವೆ. ಇನ್ನು ಘಟಕ 27ರಲ್ಲಿ 1947ರ ಭಾರತ ಸ್ವಾತಂತ್ರ್ಯ ಕಾಯ್ದೆ ಹಾಗೂ ಭಾರತದ ಸ್ವಾತಂತ್ರ್ಯದ ಬಗ್ಗೆ ಅಧ್ಯಯನ ನಡೆಸಲಾಗುವುದು.

**ನಿಮಗೆಲ್ಲಾ ಶುಭವನ್ನು ಹಾರೈಸುವ**

***ಪ್ರೊ. ಎ. ಸೋಮಶೇಖರ್***
ಅಧ್ಯಕ್ಷರು
ಇತಿಹಾಸ ಅಧ್ಯಯನ ಮತ್ತು ಸಂಶೋಧನಾ ವಿಭಾಗ
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ
ಮುಕ್ತಗಂಗೋತ್ರಿ, ಮೈಸೂರು

## ಕೋರ್ಸ್-9 ಬ್ಲಾಕ್-1

ಘಟಕ -1

# ಬ್ರಿಟೀಷರಿಂದ ಭಾರತದ ಆಕ್ರಮಣ

*ವಿಷಯಾನುಕ್ರಮಣಿಕೆ*



## 1.0 ಉದ್ದೇಶಗಳು

ಪ್ರಿಯ ವಿದ್ಯಾರ್ಥಿ, ಈ ಘಟಕದ ಅಧ್ಯಯನದ ನಂತರ ನೀವುಗಳು ಈ ಕೆಳಗಿನ ಅಂಶಗಳನ್ನು ಅರ್ಥ ಮಾಡಿಕೊಳ್ಳುವಿರಿ:

- ಪೌರಾತ್ಯ ರಾಷ್ಟ್ರಗಳಲ್ಲಿ ಯೂರೋಪಿಯನ್ ವ್ಯಾಪಾರೀ ಕಂಪನಿಗಳ ಸ್ಥಾಪನೆಯ ಬಗ್ಗೆ ತಿಳಿಯುವಿರಿ
- ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪನಿ ಹಾಗೂ ಅದರ ವಸಾಹತೀಕರಣವನ್ನು ಅರಿಯುವಿರಿ.
- ಬ್ರಿಟೀಷರು ತಮ್ಮ ಸಾಮ್ರಾಜ್ಯದ ವಿಸ್ತರಣೆಯಲ್ಲಿ ಇತರೇ ಯೂರೋಪಿಯನ್ ಕಂಪನಿಗಳೊಂದಿಗೆ ನಡೆಸ್ಸಿದ ಪೈಪೋಟಿಯನ್ನು ಅಧ್ಯಯನ ಮಾಡುವಿರಿ.
- ಬ್ರಿಟೀಷರು ಭಾರತಕ್ಕೆ ಬಂದು ಭಾರತವನ್ನು ಆಕ್ರಮಿಸಿದ ಬಗ್ಗೆಯೂ ಸಹ ತಿಳಿದುಕೊಳ್ಳುವಿರಿ.

## 1.1 ಪೀಠಿಕೆ

ಈ ಘಟಕದಲ್ಲಿ ವಿವಿಧ ಯೂರೋಪಿಯನ್ ವಾಣಿಜ್ಯ ಕಂಪನಿಗಳು ಪೌರಾತ್ಯ ರಾಷ್ಟ್ರಗಳಿಗೆ ವ್ಯಾಪಾರಿಗಳಾಗಿ ಭೇಟಿಯಿತ್ತು, ತಮ್ಮ ವ್ಯಾಪಾರಕೋಟೆಗಳನ್ನು ಹೇಗೆ ಸ್ಥಾಪನೆ ಮಾಡಿಕೊಂಡರು ಎಂಬುದನ್ನು ಪೌರಾತ್ಯ ರಾಷ್ಟ್ರಗಳಲ್ಲಿ ತಮ್ಮ ವಹಾಸತುಗಳನ್ನು ನಿರ್ಮಿಸಿಕೊಳ್ಳಲು ಈ ಐರೋಪ್ಯ ರಾಷ್ಟ್ರಗಳು ಹೇಗೆ ಪರಸ್ಪರ ವೈರತ್ವ ಮತ್ತು ಪೈಪೋಟಿಯನ್ನು ನಡೆಸಿದರೆಂಬುದನ್ನು ಈ ಎಲ್ಲಾ ಐರೋಪ್ಯ ರಾಷ್ಟ್ರಗಳ ಪೈಪೋಟಿಯಲ್ಲಿ ಜಯಶಾಲಿಯಾಗಿ ತಮ್ಮ ಉದ್ದೇಶವನ್ನು (ವಸಾಹತೀಕರಣ)ಸಾಧಿಸಿದ ಬ್ರಿಟೀಷರು ಮತ್ತು ಅವರು ಭಾರತವನ್ನು ಹೇಗೆ ಆಕ್ರಮಿಸಿಕೊಂಡರು ಎಂಬುದನ್ನು ಅಧ್ಯಯನ ಮಾಡಿ ಅರ್ಥ ಮಾಡಿಕೊಳ್ಳಲಾಗುವುದು. ಅಲ್ಲದೇ ಮತ್ತೊಂದು ಕುತೂಹಲದ ಸಂಗತಿಯೆಂದರೆ, ಬ್ರಿಟೀಷರು ಭಾರತವನ್ನು ಹೇಗೆ ಆಕ್ರಮಣ ಮಾಡಿಕೊಂಡು ಭಾರತದ ಯಜಮಾನಿಕೆಯನ್ನು ಯಾವ ರೀತಿ ದೊರಕಿಸಿಕೊಂಡರು ಎಂಬುದು ನಮ್ಮ ಈ ಘಟಕದ ಅಧ್ಯಯನ ಗುರಿಯಾಗಿದೆ.

## 1.2 ಪೌರಾತ್ಯ ರಾಷ್ಟ್ರಗಳಲ್ಲಿ ಯೂರೋಪಿಯನ್ ವ್ಯಾಪಾರೀ ಕಂಪನಿಗಳು

ಕ್ರಿ.ಶ 1453ರಲ್ಲಿ ಆಟೋಮಾನ್ ಟರ್ಕರು ಕಾನ್‌ಸ್ಟಾಂಟಿನೋಪಲ್‌ನ್ನು ವಶಪಡಿಸಿಕೊಂಡು ಘಟನೆಯು ಕ್ರಿ.ಶ.15 ಮತ್ತು 16ನೇ ಶತಮಾನಗಳಲ್ಲಿ ಭೌಗೋಳಿಕ ಅನ್ವೇಷಣೆಗೆ ಕಾರಣವಾಯಿತೆಂದು ಹೇಳಬಹುದು. ಪೌರಾತ್ಯ ರಾಷ್ಟ್ರಗಳು ಹಾಗೂ ಪಾಶ್ಚಿಮಾತ್ಯ ರಾಷ್ಟ್ರಗಳ ನಡುವೆ ಇದ್ದಂತಹ ಒಂದೇ ಒಂದು ವ್ಯಾಪಾರಿ ಭೂಮಾರ್ಗವು ಈ ಘಟನೆಯಿಂದ ಮುಚ್ಚಿಹೋಗಿದ್ದು ಪೌರಾತ್ಯರಾಷ್ಟ್ರಗಳಿಗೆ ಒಂದು ಸಮುದ್ರ ಮಾರ್ಗವನ್ನು ಅನ್ವೇಷಣೆ ಮಾಡಲು ಐರೋಪ್ಯ ರಾಷ್ಟ್ರಗಳ ಮೇಲೆ ಒತ್ತಾಯ ತಂದಿರುವುದು ಈ ಘಟನೆಯಿಂದ ತಿಳಿದುಬರುತ್ತದೆ. ಹೀಗಾಗಿ ಎಲ್ಲಾ ಕಡೆ ಐರೋಪ್ಯ ರಾಷ್ಟ್ರಗಳು ಜಲ ಮಾರ್ಗವನ್ನು ಅನುಸರಿಸಿ ಹಲವು ರಾಷ್ಟ್ರಗಳೊಂದಿಗೆ ಸಂಬಂಧ ಹೊಂದಲು ಕಾರಣವಾಯಿತು. ಈ ಘಟನೆ ಬಹಳ ಪ್ರಮುಖವಾದುದು.

ಹೀಗೆ ಸಮುದ್ರ ಮಾರ್ಗಗಳನ್ನು ಅನ್ವೇಷಣೆ ನಡೆಸಿದ ನಂತರ ಯೂರೋಪಿಯನ್ ರಾಷ್ಟ್ರಗಳಾದ ಪೋರ್ಚುಗೀಸರು, ಡಚ್ಚರು, ಇಂಗ್ಲೀಷರು ಮತ್ತು ಫ್ರೆಂಚರು ಒಬ್ಬರಾದ ನಂತರ ಪೂರ್ವ ರಾಷ್ಟ್ರಗಳಿಗೆ ಬಂದು, ವಿಶೇಷವಾಗಿ ಭಾರತಕ್ಕೆ ಬಂದು ತಮ್ಮ ವ್ಯಾಪಾರದ ಕೋಟೆಗಳನ್ನು ಸ್ಥಾಪನೆ ಮಾಡಿಕೊಂಡು ವ್ಯಾಪಾರಗಾರರಾಗಿ ಬಂದು ಯಶಸ್ಸುಗಳಿಸಿ ಕೊನೆಗೆ ಭಾರತದ ಯಜಮಾನರಾದುದು ಕಂಡುಬರುತ್ತದೆ. ಅಂತಿಮವಾಗಿ ಬ್ರಿಟೀಷರು ಭಾರತದ ಪೂರ್ಣ ವ್ಯಾಪಾರಿ ಕ್ಷೇತ್ರವನ್ನು ತಮ್ಮದಾಗಿಸಿಕೊಳ್ಳುವಲ್ಲಿ ಹಲವು ಇತರೇ ಯೂರೋಪಿಯನ್ ರಾಷ್ಟ್ರಗಳೊಂದಿಗೆ ಪೈಪೋಟಿ, ಯುದ್ಧಗಳನ್ನು ನಡೆಸಿ ಅವರೆಲ್ಲರನ್ನು ಭಾರತದಿಂದ ಹೊರದೂಡಿ ತಾವು ತಮ್ಮ ವಸಾಹತುಗಳನ್ನು ಸ್ಥಾಪಿಸಿಕೊಂಡು ಹಲವು ನೀತಿಗಳಿಂದಾಗಿ ಭಾರತವನ್ನೆಲ್ಲಾ ಆಕ್ರಮಿಸಿಕೊಂಡುದನ್ನು ಅಧ್ಯಯನ ನಡೆಸುತ್ತೇವೆ.

ಭಾರತವನ್ನು ಪ್ರವೇಶ ಮಾಡಿದ ಐರೋಪ್ಯರಲ್ಲಿ ಪೋರ್ಚುಗೀಸರು ಪ್ರಥಮಿಗರು. ಕ್ರಿ.ಶ.1498ರಲ್ಲಿ ಪೋರ್ಚುಗೀಸರ ನಾವಿಕ ವಾಸ್ಕೋ-ಡಿ-ಗಾಮ ಎಂಬುವವನು ಗುಡ್ ಹೋಪ್ ಭೂಶಿರದ ಮೂಲಕಸಾಗಿ ಕಲ್ಲಿಕೋಟೆಯನ್ನು ತಲುಪಿ ಭಾರತಕ್ಕೆ ಪ್ರವೇಶ ಮಾಡಿದನು. ಅವನು ಹಿಂದೂ ಮಹಾಸಾಗರದ ಪೂರ್ಣ ಹತೋಟಿಯನ್ನು ಪಡೆದುದೇ ಅಲ್ಲದೇ, ತತ್‌ಕ್ಷಣದಲ್ಲಿ ಕಲ್ಲಿಕೋಟೆಯ ದೊರೆಯಾದ ಜಾಮೋರಿನ್‌ನೊಂದಿಗೆ ಯುದ್ಧಕ್ಕಿಳಿದು ಪೈಪೋಟಿಯನ್ನು ಎದುರಿಸಿದನು. ಕ್ರಿ.ಶ 1505ರಲ್ಲಿ ಭಾರತದಲ್ಲಿದ್ದ ತಮ್ಮ ವಸಾಹತುಗಳ ಮೇಲ್ವಿಚಾರಣೆ ನೋಡಲು ಪೋರ್ಚುಗಲ್ ಸರ್ಕಾರವು ಫ್ರಾನ್ಸಿಸ್ಕೊ-ಡಿ-ಆಲ್ಮೈಡಾರನ್ನು ಪ್ರಥಮ ವೈಸರಾಯಿಯನ್ನಾಗಿ ನೇಮಕ ಮಾಡಿತು. ಇವನ ಕಾಲದಲ್ಲಿ ಪೋರ್ಚುಗೀಸರು ಪ್ರಭಾವಶಾಲಿಗಳಾಗಿದ್ದರಲ್ಲದೇ ಕ್ರಿ.ಶ.1509-1515ರ ನಡುವೆ ಆಲ್‌ಫೋನ್ಸೊ-ಡಿ-ಆಲ್ಬುಕರ್ಕ್‌ನ ಮಹಾ ನೇತೃತ್ವದಲ್ಲಿ ಪೋರ್ಚುಗೀಸರು ಮಲಕ್ಕಾ, ಆರ್ಮಜ್ ಮುಂತಾದ ಕಡೆಗಳಲ್ಲಿನ ಸಮುದ್ರಗಳ ವ್ಯಾಪಾರದ ಮೇಲೆ ತಮ್ಮ ಪೂರ್ಣ ಹತೋಟಿಯನ್ನು ಸ್ಥಾಪಿಸಿದರು. ಕೊನೆಯಲ್ಲಿ ಪೋರ್ಚುಗೀಸರು ಗೋವಾ, ಡಿಯು ಮತ್ತು ಡಾಮನ್‌ಗಳ ಮೇಲೆ ತಮ್ಮ ನಿಯಂತ್ರಣವನ್ನು ಇಟ್ಟುಕೊಂಡಿದ್ದರು. ಈ ವ್ಯಾಪಾರದ ಏಕಸ್ವಾಮ್ಯತೆಯು ಅವರ ಮಾತೃಭೂಮಿಗಳಿಗಲ್ಲದೇ ಭಾರತ ದೇಶಕ್ಕೂ ಸಹ ಪ್ರಾಮುಖ್ಯತೆಯನ್ನು ಪಡೆದಿದ್ದುದು ತಿಳಿಯುತ್ತದೆ. ಮೊದಲನೆಯದಾಗಿ, ಈ ವ್ಯಾಪಾರ ಸಂಪರ್ಕವು ಭಾರತದ ವ್ಯಾಪಾರದ ವಸ್ತುಗಳಿಗೆ ಜಾಗತಿಕ ಮಾರುಕಟ್ಟೆಯನ್ನು ದೊರಕಿಸಿತಲ್ಲದೇ, ಎರಡನೆಯದಾಗಿ ಈ ವ್ಯಾಪಾರ ಸಂಪರ್ಕವು - ಭಾರತದಲ್ಲಿ ಯೂರೋಪಿಯನ್ ಮತ್ತು ಚೀನಾ ದೇಶಗಳ ವ್ಯಾಪಾರಿ ವಸ್ತುಗಳನ್ನು ಪರಿಚಯಿಸಿದಂತಾಯಿತು.

ಡಚ್ ಈಸ್ಟ್ ಇಂಡಿಯಾ ಕಂಪನಿಯು ಕ್ರಿ.ಶ1600ರಲ್ಲಿ ಪೌರಾತ್ಯ ರಾಷ್ಟ್ರಗಳೊಡನೆ ವ್ಯಾಪಾರದ ಸಂಬಂಧಕ್ಕಾಗಿ ಸ್ಥಾಪಿಸಲ್ಪಟ್ಟಿತು. ಡಚ್ಚರು ಭಾರತ ಮತ್ತು ಇತರೆ ರಾಷ್ಟ್ರಗಳಲ್ಲಿ ಕಾಣಸಿಗುತ್ತಿದ್ದ ಮೆಣಸು ಮತ್ತು ಸಾಂಬಾರು ದಿನಸು ಪದಾರ್ಥಗಳಿಂದ ಆಕರ್ಷಿತರಾಗಿ ಪೌರಾತ್ಯ ರಾಷ್ಟ್ರಗಳಿಗೆ ಕಾಲಿಟ್ಟರು. ಇವರು ಪೋರ್ಚುಗೀಸರನ್ನು ಬಹಳ ಸುಲಭವಾಗಿ ಈ ರಾಷ್ಟ್ರಗಳಿಂದ ಕಾಲ್ತೆಗೆಯುವಂತೆ ಮಾಡಿದರು. ಕ್ರಿ.ಶ.1605ರಲ್ಲಿ ಇವರು ಪೋರ್ಚುಗೀಸರಿಂದ ಅಂಬಾಯ್ನವನ್ನು ಕಿತ್ತುಕೊಂಡರಲ್ಲದೇ, ಮಲಕ್ಕಾ, ಜಾವಾ, ಬೋರ್ನಿಯೋ

ಸುಮಾತ್ರ ಮತ್ತು ಆರ್ಚಿಪಿಲಗೋವನ್ನು ತಮ್ಮ ಹತೋಟಿಗೆ ತೆಗೆದುಕೊಂಡರಲ್ಲದೇ ಕ್ರಿ.ಶ.1658ರ ಹೊತ್ತಿಗೆ ಸಿಲೋನ್‌ನ ಮೇಲೂ ತಮ್ಮ ಪರಮಾಧಿಕಾರವನ್ನು ಸ್ಥಾಪಿಸಿದರು. ಸುಮಾರು ಕ್ರಿ.ಶ.17ನೇ ಶತಮಾನದ ಕೊನೆಯ ಹೊತ್ತಿಗೆ ಇವರು ಪೌರಾತ್ಯ ರಾಷ್ಟ್ರಗಳ ವ್ಯಾಪಾರ ಸಂಪರ್ಕದ ಮೇಲಿನ ಮಾಲೀಕತ್ವವನ್ನು ಪಡೆದಿದ್ದಾರೆನ್ನಬಹುದು ಆದರೂ ಅವರು ತನ್ನ ಮೂಲ ಉದ್ದೇಶದಿಂದ ಭಾರತದ ಮೇಲಿನ ಆಸಕ್ತಿಯನ್ನು ಪೂರ್ಣವಾಗಿ ಕಡೆಗಣಿಸಲಿಲ್ಲವೆಂದು ಗೊತ್ತಾಗುತ್ತದೆ. ಡಚ್ಚರು ಭಾರತದಲ್ಲಿ ಪುಲಿಕಾಟ್, ಸೂರತ್, ಚಿನ್ಸುರ ಪಾಟ್ನಾ, ಖಾಸಿಂಬಜಾರ್, ಬಾಲಸೋರೆ, ನಾಗಪಟಂ, ಮಸೂಲಿಪಟ್ನಂ ಮತ್ತು ಕೊಚ್ಚಿನ್‌ಗಳನ್ನು ತಮ್ಮ ಪ್ರಮುಖ ವ್ಯಾಪಾರ ಕೇಂದ್ರಗಳನ್ನಾಗಿ ಮಾಡಿಕೊಂಡಿದ್ದರು.

ಡಚ್ಚರು ಪೌರಾತ್ಯ ರಾಷ್ಟ್ರಗಳ ಮೇಲಿನ ಸಾಂಬಾರು ಜಿನಸು ಪದಾರ್ಥಗಳ ಮೇಲಿನ ಏಕಸ್ವಾಮ್ಯವನ್ನು ಪೂರ್ಣವಾಗಿ ಹೊಂದಿದ್ದು ಇದು ಕ್ರಿ.ಶ.17ನೇ ಶತಮಾನದ ಪೂರ್ಣ ಜಾರಿಯಲ್ಲಿದ್ದುದು ಕಂಡುಬರುತ್ತದೆ. ಇದೇ ವೇಳೆಯಲ್ಲಿ ಇಂಗ್ಲೀಷರೂ ಸಹ ಪೌರಾತ್ಯ ರಾಷ್ಟ್ರಗಳ ಪ್ರವೇಶವನ್ನು ಮಾಡಿದ್ದುದು ಗಮನಕ್ಕೆ ಬರುತ್ತದೆ. ಪ್ರಥಮದಲ್ಲಿ ಆ ಎರಡೂ ರಾಷ್ಟ್ರಗಳು ಉತ್ತಮ ಬಾಂಧವ್ಯವನ್ನು ಹೊಂದಿದ್ದು, ಪೋರ್ಚುಗೀಸರನ್ನು ಇಲ್ಲಿಂದ ಓಡಿಸಲು ಪರಸ್ಪರ ಸಹಕಾರದಿಂದ ವರ್ತಿಸಿದ್ದರೂ, ಕೊನೆಯಲ್ಲಿ ಈ ಎರಡೂ ರಾಷ್ಟ್ರಗಳವರು ಪರಸ್ಪರ ಶತ್ರುಗಳಾಗಿ ಮಾರ್ಪಟ್ಟರು. ಈ ಪೈಪೋಟಿಯಲ್ಲಿ ಡಚ್ಚರು ವಿಜಯಿಗಳಾದುದು ಕಂಡುಬರುತ್ತದೆ. ಕ್ರಿ.ಶ.1623ರಲ್ಲಿ ಅಂಬಾಯ್ನದಲ್ಲಿ ಸಾವಿರಾರು ಮಂದಿ ಇಂಗ್ಲೀಷರನ್ನು ದಯನೀಯವಾಗಿ ಕೊಂದು ಹಾಕಿರುವುದು ಇತಿಹಾಸದಲ್ಲಿ ದಾಖಲಾಗಿ ಹೋಗಿದೆ. ಇದರಿಂದ ದಿಗಿಲುಗೊಂಡ ಇಂಗ್ಲೀಷರು, ಪೌರಾತ್ಯ ರಾಷ್ಟ್ರಗಳಲ್ಲಿ ತಮ್ಮ ಆಸಕ್ತ ವಸಾಹತುವನ್ನು ಸ್ಥಾಪಿಸುವ ಘನ ಉದ್ದೇಶವನ್ನು ಮರೆತು ಸಮೃದ್ಧ ಭಾರತದ ಕಡೆಗೆ ತಮ್ಮ ಗಮನವನ್ನು ಹರಿಸಿರುವುದು ಕಂಡುಬರುತ್ತದೆ.

ಕ್ರಿ.ಶ 1600ರಲ್ಲಿ ಲಂಡನ್ನಿನ ವ್ಯಾಪಾರಿಗಳು ಪೌರಾತ್ಯ ರಾಷ್ಟ್ರಗಳೊಡನೆ ವ್ಯಾಪಾರ ಸಂಬಂಧವನ್ನು ಇಟ್ಟುಕೊಳ್ಳಲು ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿಯನ್ನು ಸ್ಥಾಪಿಸಿಕೊಂಡರು. ಬ್ರಿಟನ್ನಿನ ರಾಣಿ ಎಲಿಜಬೆತ್‌ರವರು ಪೌರಾತ್ಯ ರಾಷ್ಟ್ರಗಳೊಡನೆ ವ್ಯಾಪಾರ ಏಕಸ್ವಾಮ್ಯವನ್ನು ಸ್ಥಾಪಿಸಿಕೊಳ್ಳಲು 15 ವರ್ಷಗಳ ಪರವಾನಗಿಯನ್ನು ನೀಡಿದಳು. ಈ ಕಂಪನಿಯು ತನ್ನ ಎರಡು ನಾವಿಕರ ಗುಂಪನ್ನು ಪೌರಾತ್ಯ ರಾಷ್ಟ್ರಗಳಿಗೆ ಕಳಿಸಿತು. ಆದರೆ ಭಾರತಕ್ಕೆ ಯಾರನ್ನೂ ಕಳಿಸಲಿಲ್ಲ. ಮೂರನೇ ನಿಯೋಗವನ್ನು ವಿಲಿಯಂ ಹಾಕಿನ್ಸ್‌ನ ನೇತೃತ್ವದಲ್ಲಿ ಕಳಿಸಿದಳು. ಇವರು ಭಾರತವನ್ನು ತಲುಪಿ ಕ್ರಿ.ಶ.1608ರಲ್ಲಿ ಮೊಘಲರ ದೊರೆ ಜಹಾಂಗೀರನ ಸ್ಥಾನಕ್ಕೆ ತೆರಳಿದರಲ್ಲದೇ, ಅವನಿಂದ ಸೂರತ್‌ನಲ್ಲಿ ಬ್ರಿಟೀಷರ ವ್ಯಾಪಾರದ ಕೋಠಿಯನ್ನು ಸ್ಥಾಪಿಸಲು ಅನುಮತಿಯನ್ನು ಪಡೆದನು. ಇವನ ನಂತರ ಕ್ರಿ.ಶ.1615ರಲ್ಲಿ ಸರ್ ಥಾಮಸ್ ರೋನು ಭಾರತಕ್ಕೆ ಬಂದನು. ಹೀಗೆ ಬ್ರಿಟೀಷ್‌ರು ಭಾರತಕ್ಕೆ ಬಂದು ಹಲವು ವ್ಯಾಪಾರದ ಕೋಠಿಗಳನ್ನು ಸ್ಥಾಪಿಸಿಕೊಂಡರು. ಆ ಕಾಲದಲ್ಲಿ ಭಾರತದಲ್ಲಿ ಬ್ರಿಟೀಷರ ಪ್ರಮುಖ ವ್ಯಾಪಾರ ಕೇಂದ್ರಗಳೆಂದರೆ ಸೂರತ್, ಅಹಮದಾಬಾದ್, ಬ್ರೋಚ್, ಬಾಂಬೆ, ಮದ್ರಾಸ್, ಕಲ್ಕತ್ತಾ, ಮಸಲಿಪಟ್ಟಣ, ಹೂಗ್ಲಿ, ಖಾಸಿಂಬಜಾರ್ ಮತ್ತು ಪಾಟ್ನಾಗಳು ಮುಂತಾದವು.

ಬ್ರಿಟೀಷರ ಏಳ್ಗೆಯು ಭಾರತದಲ್ಲಿ ಅಷ್ಟೇನೂ ಸುಲಭವೂ ಆಗಿರಲಿಲ್ಲ ಹಾಗೂ ತಕ್ಷಣವೇ ಆಗಲಿಲ್ಲ. ಪ್ರಾರಂಭದಲ್ಲಿ ಬ್ರಿಟೀಷರು ಪೋರ್ಚುಗೀಸರು ಹಾಗೂ ಡಚ್ಚರ ವೈರಿಗಳಾಗಬೇಕಾಗಿ ಬಂದಿತು. ಆದರೂ ತಮ್ಮ ಮುತ್ಸದ್ಧಿತನದಿಂದ ಡಚ್ಚರೊಂದಿಗೆ ಸ್ನೇಹ ಸಂಪರ್ಕವೇರ್ಪಡಿಸಿಕೊಂಡು ಪೋರ್ಚುಗೀಸರನ್ನು ಈ ದೇಶದಿಂದ ಹೊರಗಟ್ಟಿದರು. ಇದಾದ ನಂತರ ಈ ಪೌರಾತ್ಯ ರಾಷ್ಟ್ರಗಳಲ್ಲಿ ಡಚ್ಚರು ಹೊಂದಿದ ವ್ಯಾಪಾರದ ಏಕಸ್ವಾಮ್ಯವನ್ನು ತಮ್ಮದಾಗಿಸಿಕೊಳ್ಳಲು ಹಲವು ಪ್ರಯತ್ನಗಳನ್ನು ಮಾಡಿದರು. ಆದರೆ ಕ್ರಿ.ಶ.1623ರಲ್ಲಿ ಅಂಬಾಯ್ನದಲ್ಲಿ ತಮ್ಮ ಸಾವಿರಾರು ಸೈನಿಕರನ್ನು ಡಚ್ಚರು ಕೊಂದಿದ್ದನ್ನು ನೋಡಿದ ಇಂಗ್ಲೀಷರು ಪೂರ್ವ ರಾಷ್ಟ್ರಗಳನ್ನು ಬಿಟ್ಟು ತಮ್ಮನ್ನು ಭಾರತದಲ್ಲಿ ತೊಡಗಿಸಿಕೊಂಡರು. ತಮ್ಮ ನೀತಿಯಾದ ಆಂತರಿಕ ಯುದ್ಧಗಳಿಂದ ಭಾರತದಲ್ಲಿ ತಮ್ಮದೇ ಆದ ಬೃಹತ್

ಸಾಮ್ರಾಜ್ಯವನ್ನು ಸ್ಥಾಪಿಸಿಕೊಳ್ಳಲು ಎಲ್ಲಾ ರೀತಿಯ ಪ್ರಯತ್ನ ಮಾಡಿದರು ಹಾಗೂ ಅವರು ಯಶಸ್ವಿಯಾದರೂ ಕೂಡ. ಈ ರೀತಿಯಲ್ಲಿ ತಮ್ಮ ರಾಜ್ಯವನ್ನು ಸ್ಥಾಪಿಸುವ ಪ್ರಯತ್ನದಲ್ಲಿ 17ನೇ ಶತಮಾನದ ಉತ್ತರಾರ್ಧದಲ್ಲಿ ಇಂಗ್ಲೀಷರು ಫ್ರೆಂಚರೊಂದಿಗೆ ವೈರತ್ವವನ್ನು ಬೆಳೆಸಿಕೊಳ್ಳಬೇಕಾಯಿತು. ಏಕೆಂದರೆ ಫ್ರೆಂಚರು ಭಾರತದಲ್ಲಿ ಇಂಗ್ಲೀಷರ ಪೈಪೋಟಿಗೆ ನಿಂತರು. ಕೊನೆಗೆ ಬ್ರಿಟೀಷರು ಫ್ರೆಂಚರನ್ನು ಸೋಲಿಸಿ ಭಾರತದಲ್ಲಿ ಪ್ರಭಲರಾದುದಲ್ಲದೇ, ಇಲ್ಲಿಯ ಸಾಮ್ರಾಜ್ಯಗಳ ಯಜಮಾನರೂ ಕೂಡಾ ಆದರು.

ಪೂರ್ವ ರಾಷ್ಟ್ರಗಳ ವ್ಯಾಪಾರ ಮತ್ತು ಅಲ್ಲಿಯ ವಸ್ತುಗಳ ಬಗ್ಗೆ ಪ್ರಥಮವಾಗಿ ಆಕರ್ಷಿತರಾದವರು ಫ್ರೆಂಚರು. ಆದರೆ ಆಶ್ಚರ್ಯವೆಂದರೆ ಈ ಪೂರ್ವ ರಾಷ್ಟ್ರಗಳಿಗೆ ಕೊನೆಯಲ್ಲಿ ಬಂದ ರಾಷ್ಟ್ರವಾದವರಾದರು. ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿಯು ಭಾರತದೊಂದಿಗೆ ತನ್ನ ಖಾಯಂ ವ್ಯಾಪಾರೀ ಸಂಬಂಧವನ್ನು ಕ್ರಿ.ಶ.1664ರಲ್ಲಿ ಸ್ಥಾಪಿಸಿಕೊಂಡಿತು. ಈ ಸಂಬಂಧದ ಯಶಸ್ವಿಗೆ ಕಾರಣ. ಆ ದೇಶದ ಹಣಕಾಸಿನ ಮಂತ್ರಿಯಾದ ಗೋಲ್ಬರ್ಟ್ ಇವರು ತಮ್ಮ ಪ್ರಥಮ ವ್ಯಾಪಾರ ಕೋಠಿಯನ್ನು ಸೂರತ್‌ನಲ್ಲಿ ಪ್ರಾರಂಭಿಸಿದರು. ನಂತರದಲ್ಲಿ ಅವರು ಮಚಲಿಪಟ್ಟಣ, ಪಾಂಡಿಚೇರಿ, ಚಂದ್ರನಾಗೋರ್, ಢಾಕಾ, ಕಾಸಿಂಬಜಾರ್, ಪಾಟ್ನಾ, ಬಾಲಾಸೋರೆ, ಮಾಹೆ, ಕಾರೈಕಲ್ ಇನ್ನು ಮುಂತಾದ ಪ್ರದೇಶಗಳಲ್ಲೂ ಕೂಡಾ ತಮ್ಮ ವ್ಯಾಪಾರವನ್ನು ಸ್ಥಾಪಿಸಿಕೊಂಡರು. ವ್ಯಾಪಾರಕ್ಷೇತ್ರದಲ್ಲಿದ್ದು, ಇತರೇ ಯೂರೋಪಿಯನ್ ರಾಷ್ಟ್ರಗಳ ಜೊತೆಯಲ್ಲಿ ತಮ್ಮ ಸ್ಥಾನವನ್ನು ಸಮ ಮಾಡಿಕೊಳ್ಳಲು ಪ್ರಯತ್ನದಲ್ಲಿದ್ದಾಗ ಫ್ರೆಂಚ್ ಸರ್ಕಾರದ ಗೌರ್ನರರಾಗಿದ್ದು, ಡ್ಯೂಮಾ ಮತ್ತು ಡೂಪ್ಲೇ ಇವರುಗಳು ಸುಮಾರು ಇಪ್ಪತ್ತು ವರ್ಷಗಳಲ್ಲಿ ಸಾಧನೆಗೈಯ್ಯಲು ಕಾರಣರೆಂಬುದನ್ನು ಹಲವು ಇತಿಹಾಸಜ್ಞರು ಮಾಹಿತಿ ಒದಗಿಸಿದ್ದಾರೆ. ಇತರೇ ಯೂರೋಪಿಯನ್ ದೇಶಗಳಂತೆಯೇ ಫ್ರೆಂಚರೂ ಸಹ ಕೇವಲ ವಾಣಿಜ್ಯ ವಿಷಯಗಳಲ್ಲಿ ಮಾತ್ರ ತಾವು ತೃಪ್ತರಾಗದೇ ತಮ್ಮದೇ ಆದ ಪ್ರಾಭಲ್ಯವನ್ನು ಕಟ್ಟಿಕೊಳ್ಳಲು ಪೂರ್ವರಾಷ್ಟ್ರಗಳಲ್ಲಿ ಪ್ರಯತ್ನ ನಡೆಸಿದರು. ಈ ನಾಟಕೀಯ ಹಿತಾಸಕ್ತಿಯ ಬೆಳವಣಿಗೆಯಲ್ಲಿ ಈವರೆಗೆ ಇಂಗ್ಲೀಷರು ಪರಮ ಶತ್ರುಗಳಾದರು. ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸಲು ಹಲವು ವರ್ಷಗಳ ಕಾಲ ಫ್ರೆಂಚರು ಮತ್ತು ಇಂಗ್ಲೀಷರು ಪೈಪೋಟಿ ನಡೆಸಿದರು, ಕೊನೆಯಲ್ಲಿ ಇಂಗ್ಲೀಷರು ವಿಜಯಶಾಲಿಗಳಾಗಿ ಫ್ರೆಂಚರನ್ನು ಪೂರ್ವ ರಾಷ್ಟ್ರಗಳಿಂದ ಅದರಲ್ಲೂ ಭಾರತದಿಂದ ಹೊರಗಟ್ಟಿದರು.

## 1.3 ಇಂಗ್ಲೀಷ್ ಈಸ್ಟ್ ಇಂಡೀಯಾ ಕಂಪನಿ ಮತ್ತು ವಸಾಹತೀಕರಣ

ಭಾರತದಲ್ಲಿ ಕಾಲಿಟ್ಟ ಯೂರೋಪಿಯನ್ ರಾಷ್ಟ್ರಗಳಲ್ಲಿ ಪೋರ್ಚುಗೀಸರು, ಡಚ್ಚರು. ಫ್ರೆಂಚರು ಮತ್ತು ಬ್ರಿಟೀಷರು ಪ್ರಮುಖರು ಅವರು ಇಲ್ಲಿಗೆ ಬಂದ ಮೂಲ ಉದ್ದೇಶ ವ್ಯಾಪಾರ ಮತ್ತು ವಾಣಿಜ್ಯದ ಲಾಭಕ್ಕಾಗಿ. ಆದರೆ ಭಾರತದಲ್ಲಿದ್ದ ಅನೇಕ ಸುಸಂದರ್ಭಗಳು ಮತ್ತು ಭಾರತದ ದೌರ್ಬಲ್ಯಗಳು ಹಾಗೂ ರಾಜಕೀಯ ಸ್ಥಿತಿಗಳು ಇವರು ಈ ದೇಶದ ರಾಜಕೀಯದಲ್ಲಿ ಭಾಗವಹಿಸಲು ಉತ್ತೇಜಿಸಿದವಲ್ಲದೇ ಇವರು ತಮ್ಮ ಅಧಿಕಾರವನ್ನು ಇಲ್ಲಿ ಸ್ಥಾಪಿಸಲು ಅವಕಾಶ ಮಾಡಿಕೊಟ್ಟವು. ಡಚ್ಚರ ಹೊರತಾಗಿ ಎಲ್ಲಾ ಇತರೇ ದೇಶಗಳು ತಮ್ಮ ಪ್ರಭುತ್ವವನ್ನು ಇಲ್ಲಿ ಸ್ಥಾಪಿಸಿದ್ದು ಒಂದು ದ್ಯೋತಕ ಕತೆಯಂತಿದೆ. ಪೋರ್ಚುಗೀಸರನ್ನು ಮಟ್ಟಹಾಕಿದ ಡಚ್ಚರು ಮತ್ತು ಡಚ್ಚರು ಇಲ್ಲಿ ಯಾವುದೇ ಪ್ರಭುತ್ವವನ್ನು ಸ್ಥಾಪಿಸಲು ಇಚ್ಛಿಸದೇ ಇದ್ದುದು, ತಾವುಗಳು ರಾಜಕೀಯ ಹಿತಾಸಕ್ತಿಯನ್ನು ಬೆಳಸಿಕೊಂಡು ಪ್ರಭುತ್ವವನ್ನು ಸ್ಥಾಪಿಸಬೇಕೆಂಬ ಇಚ್ಛೆಯನ್ನು ಹೊತ್ತ ಬ್ರಿಟೀಷರು ಮತ್ತು ಫ್ರೆಂಚರು ಇಲ್ಲಿ ಉಳಿದುಕೊಂಡು, 18ನೇ ಶತಮಾನದಲ್ಲಿ ಪರಸ್ಪರ ಪೈಪೋಟಿ ನಡೆಸಿದರು. ಈ ಎರಡೂ ರಾಷ್ಟ್ರಗಳ ನಡುವಿನ ಪೈಪೋಟಿಯು ಮೂರು ಕರ್ನಾಟಕ ಯುದ್ಧಗಳಿಗೆ ಕಾರಣವಾಯಿತಲ್ಲದೇ, ಕೊನೆಗೆ ಬ್ರಿಟೀಷರು ಈ ಪೈಪೋಟಿಯಲ್ಲಿ ಜಯಶಾಲಿಗಳಾಗಿ ಭಾರತದಲ್ಲಿ ವಸಾಹತು ಸ್ಥಾಪಿಸುವಲ್ಲಿ ಯಶಸ್ವಿಯಾದರು. ಬ್ರಿಟೀಷರ ಈ ವಸಾಹತುಗಳ ನಿರ್ಮಾಣವು ದಕ್ಷಿಣ ಭಾರತದಲ್ಲಿ ಆರಂಭವಾಗದೇ, ಉತ್ತರ ಭಾರತದಲ್ಲಿ ಪ್ರಾರಂಭವಾಯಿತು. ಅಂದರೆ ಉತ್ತರದ ಬಂಗಾಳದ ಸಭಾನಲ್ಲಿ ಪ್ರಾರಂಭವಾಯಿತು. ಈ ಬಂಗಾಳದ ಸಭಾದಲ್ಲಿ ಬಿಹಾರ ಮತ್ತು ಒರಿಸ್ಸಾಗಳೂ ಸಹ ಸೇರಿದ ದೊಡ್ಡ

ರಾಜ್ಯವಾಗಿದ್ದುದು ಒಂದು ವಿಶೇಷ. ಬ್ರಿಟೀಷರು ಬಂಗಾಳದ ಸುಭಾದ ರಾಜಕೀಯದಲ್ಲಿ ಸೇರಿಕೊಂಡು 1757ರ ಪ್ಲಾಸಿ ಕದನ ಮತ್ತು 1764ರ ಬಕ್ಸಾರ್ ಕದನದಲ್ಲಿ ಭಾಗವಹಿಸಿದರಲ್ಲದೇ ಈ ಯುದ್ಧಗಳಲ್ಲಿ ಜಯಶಾಲಿಗಳಾಗಿ ಬಂಗಾಳದ ಸಭಾದ ಕಾರ್ಯತಃ ರಾಜರಾಗಿ ಅಧಿಕಾರ ಪಡೆದುದು ಗೊತ್ತಾಗುತ್ತದೆ. ಈ ರಾಜ್ಯಗಳ ಆಡಳಿತವನ್ನು ಬ್ರಿಟೀಷರು ಸಂಪೂರ್ಣವಾಗಿ 1772ರಲ್ಲಿ ತಮ್ಮ ಕೈಗೆ ತೆಗೆದುಕೊಂಡರು. ಇದರ ಜೊತೆಯಲ್ಲೇ ಬಂಗಾಳದ ಸಂಪನ್ಮೂಲಗಳು ಬ್ರಿಟೀಷರು ತಮ್ಮ ವಸಾಹತುವನ್ನು ಗಡಿಯಾಚೆಗೆ ವಿಸ್ತರಿಸಲು ಸಹಾಯಕವಾದುದನ್ನೆಲ್ಲಾ ಸಹ ದಾಖಲೆಗಳು ತಿಳಿಸುತ್ತವೆ.

ಬಂಗಾಳವನ್ನು ತಮ್ಮ ಸುಪರ್ಧಿಗೆ ತೆಗೆದುಕೊಂಡ ನಂತರ ಬ್ರಿಟೀಷರು ಭಾರತದ ಇತರೇ ಪ್ರದೇಶಗಳನ್ನು ತಮ್ಮದಾಗಿಸಿಕೊಳ್ಳಲು ಬಹಳಷ್ಟು ಪ್ರಯತ್ನಪಟ್ಟರು. ತಮ್ಮ ಈ ಗುರಿಯಲ್ಲಿ ಅವರು ರಾಯಭಾರತ್ವ ಮತ್ತು ಯುದ್ಧಗಳ ಮೂಲಕ ಯಶಸ್ಸನ್ನು ತಮ್ಮದಾಗಿಸಿಕೊಂಡರು. ಈ ಕಾರ್ಯಗಳಲ್ಲಿ 1856ರ ಹೊತ್ತಿಗೆ ಸಂಪೂರ್ಣ ಯಶಸ್ವಿಯಾದರು. ಬ್ರಿಟೀಷರ ಈ ಸಾರ್ವಭೌಮತ್ವದ ಸ್ಥಾಪನೆಯಲ್ಲಿ ಬಲಿಯಾದ ಪ್ರಥಮ ರಾಜ್ಯವೇ ಮೈಸೂರು. ಹೈದರ್ ಆಲಿ ಬ್ರಿಟೀಷರೊಂದಿಗೆ ತನ್ನ ರಕ್ಷಣೆಗಾಗಿ ಹೊರಾಡಿದರು ಮತ್ತು ಅವನ ಪುತ್ರ ಟಿಪ್ಪುಸುಲ್ತಾನ್ ಅವರ ಕಟ್ಟಾ ಶತ್ರುವಾಗಿ ಪರಿಣಮಿಸಿದನು. ಈ ಹೋರಾಟವು ನಾಲ್ಕು ಆಂಗ್ಲೋ ಮೈಸೂರು ಯುದ್ಧಗಳಿಗೆ ಕಾರಣವಾಗಿ, ಬ್ರಿಟೀಷರು 1799ರಲ್ಲಿ ಇವರ ವಿರುದ್ಧ ಜಯವನ್ನು ಸಾಧಿಸಿದರು. ಬ್ರಿಟೀಷರು ಮೈಸೂರು ರಾಜ್ಯದ ಎಲ್ಲಾ ಪ್ರದೇಶಗಳನ್ನು ತಮ್ಮ ಆಡಳಿತಕ್ಕೆ ಸೇರಿಸಿಕೊಂಡರಲ್ಲದೇ, ಉಳಿದ ಪ್ರದೇಶಗಳನ್ನು ಒಡೆಯರ ವಂಶದ ಪುತ್ರನಿಗೆ ಸ್ವತಂತ್ರ ರಾಜನಾಗಿ ಆಳಲು ಅವಕಾಶ ಮಾಡಿಕೊಟ್ಟರು. ಈ ಬ್ರಿಟೀಷರು ಮರಾಠರ ವಿರುದ್ಧ ಮೂರು ಯುದ್ಧಗಳನ್ನು ಮಾಡಿದರು ಮತ್ತು 1818ರ ವೇಳೆಗೆ ಮರಾಠರನ್ನು ತಮ್ಮ ಅಧೀನರನ್ನಾಗಿಸಿಕೊಂಡರು. ಮರಾಠ ರಾಜರ ಬಹುದೊಡ್ಡ ಭೂಪ್ರದೇಶವನ್ನು ಬ್ರಿಟೀಷರು ತಮ್ಮ ಅಧೀನಕ್ಕೆ ತೆಗೆದುಕೊಂಡರಲ್ಲದೇ ಇದರಿಂದ ಹೊರತಾದ ಪ್ರದೇಶವನ್ನು ಬ್ರಿಟೀಷರಿಂದ ಹೊರತಾದ ಸ್ವತಂತ್ರ ರಾಜರಾಗಿ ಆಳ್ವಿಕೆ ನಡೆಸುತ್ತಿದ್ದರು. 1843ರಲ್ಲಿ ಸಿಂಧ್‌ನ ಅಮೀರರು ಬ್ರಿಟೀಷರ ವಿರುದ್ಧ ಹೋರಾಡಿದರೂ ಸಹ ಅವರನ್ನು ಸೇರಿಸಿ ಸಿಂಧ್‌ನ್ನು ಬ್ರಿಟೀಷರು ತಮ್ಮದಾಗಿಸಿಕೊಂಡರು. ಬ್ರಿಟೀಷರು ಇತರೇ ಪ್ರದೇಶಗಳನ್ನು ವಶಪಡಿಸಿಕೊಳ್ಳುವ ಕಾರ್ಯದಲ್ಲಿ ತೊಡಗಿದ್ದಾಗ ಕಾಶ್ಮೀರ ಮತ್ತು ವಾಯುವ್ಯ ಸರಹದ್ದಿನ ಪ್ರಾಂತ್ಯವನ್ನೊಳಗೊಂಡಂತೆ ಪಂಜಾಬ್ ರಾಜ್ಯವನ್ನು ಸ್ಥಾಪಿಸುವಲ್ಲಿ ರಣಜಿತ್‌ಸಿಂಗನು ಯಶಸ್ವಿಯಾದನು. ಅವನು ಬ್ರಿಟೀಷರೊಂದಿಗೆ ಒಳ್ಳೆಯ ಸ್ನೇಹ ಸಂಬಂಧವನ್ನು ಇಚ್ಚುಕೊಂಡಿದ್ದನು. ಅವನು 1839ರಲ್ಲಿ ನಿಧನನಾದನು. ಪಂಜಾಬಿನಲ್ಲಿ ಆಂತರಿಕ ಕಲಹಗಳನ್ನು, ಭಿನ್ನಾಭಿಪ್ರಾಯಗಳು ಪ್ರಾರಂಭವಾಗಿ ರಣಜಿತ್‌ಸಿಂಗನ ಮರಣದ ತರುವಾಯ, ಬ್ರಿಟೀಷರು ಪಂಜಾಬನ್ನು ತಮ್ಮ ತೆಕ್ಕೆಗೆ ಹಾಕಿಕೊಳ್ಳಲು ಪ್ರಯತ್ನದಲ್ಲಿದ್ದುದು ಇದೀಗ ಉಪಯೋಗಕ್ಕೆ ಬಂದಿತು. ಬ್ರಿಟೀಷರು ಸಿಖ್ಖರ ವಿರುದ್ಧ ಎರಡು ಯುದ್ಧಗಳನ್ನು ಮಾಡಿದರಲ್ಲದೇ, ಅವುಗಳಲ್ಲಿ ಜಯವನ್ನು ಸಾಧಿಸಿದರು. ಇದಾದ ನಂತರ 1849ರಲ್ಲಿ ಬ್ರಿಟೀಷರು ಪಂಜಾಬನ್ನು ತಮ್ಮ ವಶಪಡಿಸಿಕೊಂಡು ತಮ್ಮ ಸಾಮ್ರಾಜ್ಯ ವಿಸ್ತಾರವನ್ನು ವಾಯುವ್ಯ ಪ್ರಾಂತ್ಯದಲ್ಲಿ ನಿರ್ಮಿಸಿದ್ದುದು ಕಾಣುತ್ತದೆ. ಇದಲ್ಲದೇ ಕಾಶ್ಮೀರವು ಬ್ರಿಟೀಷರ ಅಧೀನ ರಾಜ್ಯವಾಯಿತು.

ಇವುಗಳೇ ಅಲ್ಲದೇ ಬ್ರಿಟೀಷರು ತಮ್ಮ ಸಾಮ್ರಾಜ್ಯವನ್ನು ಇನ್ನೂ ಅನೇಕ ಕಾರಣಗಳಿಂದ ವಿಸ್ತರಿಸಿಕೊಂಡರು. ವೆಲ್ಲೆಸ್ಲಿಯ ಸಹಾಯಕ ಸೈನ್ಯ ಪದ್ಧತಿ, ಡಾಲ್‌ಹೌಸಿಯ ದತ್ತು ಮಕ್ಕಳಿಗೆ ಹಕ್ಕಿಲ್ಲ, ಸ್ಥಳೀಯ ಸಾಮಂತ ರಾಜರ ದುರಾಡಳಿತ ಮುಂತಾದುವುಗಳ ಕಾರಣದಿಂದ ಹಲವು ಪ್ರದೇಶಗಳು, ಸಾಕಷ್ಟು ಹಣ, ಧನ, ಕನಕ ಮುಂತಾದುವನ್ನು ತಮ್ಮದಾಗಿಸಿಕೊಂಡರು. ಹೀಗೆ ಬ್ರಿಟೀಷರು ತಮ್ಮ ದುರಾಶೆಗೆ ಹಲವಾರು ರಾಜ್ಯಗಳನ್ನು ತಮಗೆ ಬಲಿತೆಗೆದುಕೊಂಡು ಬ್ರಿಟೀಷರು ಕೊನೆಯ ರಾಜ್ಯವಾಗಿ ತಮ್ಮದಾಗಿಸಿಕೊಂಡರು. ಇದಾದ ನಂತರ 1857ರಲ್ಲಿ ಮಹಾದಂಗೆಯು ಸಂಭವಿಸಿತು. ಇಷ್ಟು ಹೊತ್ತಿಗಾಗಲೇ ಬ್ರಿಟೀಷರು ತಮ್ಮ ಸಾಮ್ರಾಜ್ಯವನ್ನು ಕಾಪಾಡಿಕೊಳ್ಳಲು ತಾವು ವಶಪಡಿಸಿಕೊಂಡಿರುವ ರಾಜ್ಯಗಳು ರಕ್ಷಣಾ ಕೆಲಸವನ್ನು ಮಾಡುವುದು ಸಾಕು ಎಂದೆನಿಸಿತು. ಇನ್ನು ಮುಂದೆ ಯಾವುದೇ ರಾಜ್ಯವನ್ನು

ತಮ್ಮ ವಶಪಡಿಸಿಕೊಳ್ಳುವ ಕಾರ್ಯವನ್ನು ನಿಲ್ಲಿಸಿದರು. ಇದಲ್ಲದೇ 1858ರ ವಿಕ್ಟೋರಿಯಾ ರಾಣಿಯ ಘೋಷಣೆಯ ಪ್ರಕಾರ ಇನ್ನು ಮುಂದೆ ಯಾವುದೇ ರಾಜ್ಯವನ್ನು ವಶಪಡಿಸಿಕೊಳ್ಳುವುದಿಲ್ಲವೆಂಬ ಹೇಳಿಕೆಯು ಹೊರಬಂದಿತು. ಇಷ್ಟು ಹೊತ್ತಿಗೆ ಬ್ರಿಟೀಷರು ಈಗಾಗಲೇ ಭಾರತದ ಭೂಪ್ರದೇಶದ ಬಹು ಭಾಗವನ್ನು ತಮ್ಮದಾಗಿಸಿಕೊಂಡಿದ್ದರು. ಉಳಿದ ಕೆಲವು ಪ್ರದೇಶಗಳನ್ನು ದೇಶೀಯ ರಾಜರು ತಮ್ಮ ಅಧೀನದಲ್ಲಿ ಇಟ್ಟುಕೊಂಡಿದ್ದರು ಮತ್ತು ಅವರು ಬ್ರಿಟೀಷರಿಗೆ ತಮ್ಮ ಜೀವಿತದವರೆಗೂ ಅಭಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದುದು ಕಂಡುಬರುತ್ತದೆ.

ಬ್ರಿಟೀಷರು ಭಾರತದಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿಕೊಂಡು ಬಹುದೊಡ್ಡ ಸಾಮ್ರಾಜ್ಯವನ್ನು ಸ್ಥಾಪಿಸಿಕೊಂಡದ್ದಕ್ಕೆ ವಿದ್ವಾಂಸರು ಹಲವು ಕಾರಣಗಳನ್ನು ಕೊಟ್ಟಿದ್ದಾರೆ. ಅವುಗಳಲ್ಲಿ

- ಮೊಗಲ್ ಸಾಮ್ರಾಜ್ಯದ ಅವನತಿ ಮತ್ತು ಪತನ
- ಮೊಗಲ್ ನಂತರ ಮರಾಠರು ಒಂದು ದೊಡ್ಡ ಸಾಮ್ರಾಜ್ಯವನ್ನು ಸ್ಥಾಪಿಸಿದಿದ್ದುದು ಮತ್ತು ಬ್ರಿಟೀಷರನ್ನು ಸರಿಯಾಗಿ ಎದುರಿಸದಿದ್ದುದು.
- ದೇಶೀಯ ರಾಜರ ಅಶಕ್ತತೆ
- ಭಾರತೀಯರಲ್ಲಿ ರಾಷ್ಟ್ರೀಯ ಭಾವನೆಯ ಕೊರತೆಯಿರುವುದು
- ವಿದೇಶಿ ಶತ್ರುಗಳ ವಿರುದ್ಧ ಹೋರಾಡಲು ಆಸಕ್ತಿಯಿಲ್ಲದಿದ್ದುದು
- ನಾಯಕತ್ವದ ಕೊರತೆ, ಮಧ್ಯಯುಗೀನ ಭಾವನೆಗಳು

ಇದಲ್ಲದೇ

ಬ್ರಿಟೀಷರು ತಮ್ಮಲ್ಲಿ ಹೊಂದಿದ್ದ ಉತ್ತಮ ಸೈನ್ಯ ಮತ್ತು ಮುತ್ಸದ್ಧಿತನ, ಅವರು ಹೊಂದಿದ್ದ ಗೂಢಚರ್ಯ ವ್ಯವಸ್ಥೆ, ಉತ್ತಮ ನಾಯಕತ್ವ, ತಮ್ಮ ದೇಶವನ್ನು ರಕ್ಷಿಸುವ ಮತ್ತು ದೇಶದ ಬಗ್ಗೆ ಒಳ್ಳೆಯ ಅಭಿಪ್ರಾಯ, ಅವರಲ್ಲಿನ ಆಧುನಿಕ ಮನೋಭಾವ ಮುಂತಾದ ವಿಷಯಗಳು ಭಾರತದಲ್ಲಿ ಬ್ರಿಟೀಷರು ತಮ್ಮ ವಸಾಹತುಗಳನ್ನು ಸ್ಥಾಪಿಸಿ ರಾಜ್ಯವನ್ನಾಳಲು ಕಾರಣವಾಯಿತೆಂಬುದು ತಿಳಿದುಬರುತ್ತದೆ. ಈ ರಾಜ್ಯಭಾರ ಕಾರ್ಯವು ಸುಮಾರು ಇನ್ನೂರು ವರ್ಷಗಳಿಗೂ ಹೆಚ್ಚು ಕಾಲವಿದ್ದಿತು ಎಂಬುದು ಬ್ರಿಟೀಷರು ಹೇಗೆ ಭಾರತದಲ್ಲಿ ತಮ್ಮ ಯಶಸ್ಸನ್ನು ಕಂಡರು ಎಂಬುದು ತಿಳಿಯುತ್ತದೆ.

## 1.4 ಘಟಕದ ಸಾರಾಂಶ

ಈ ಘಟಕದ ಅಧ್ಯಯನದ ನಂತರ ನಾವು ಕೆಳಗೆ ಕಾಣಿಸಿದ ವಿಷಯಗಳನ್ನು ತಿಳಿದುಕೊಂಡೆವು:

- ಪೌರಾತ್ಯ ರಾಷ್ಟ್ರಗಳ ಜೊತೆಗೆ ವ್ಯಾಪಾರ ಸಂಪರ್ಕವನ್ನು ಏರ್ಪಡಿಸಿಕೊಳ್ಳಲು ಯೂರೋಪಿಯನ್ ಟ್ರೇಡಿಂಗ್ ಕಂಪನಿಗಳನ್ನು ಸ್ಥಾಪಿಸಿದ್ದು
- ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪನಿಯ ಸ್ಥಾಪನೆ ಮತ್ತು ಏಳ್ಗೆ
- ಯೂರೋಪ್ ವಾಣಿಜ್ಯ ಕಂಪನಿಗಳ ಸ್ಥಾಪನೆ
- ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪನಿಯ ಏಳ್ಗೆ ಮತ್ತು ವಸಾಹತೀಕರಣ
- ಈಸ್ಟ್ ಇಂಡಿಯಾ ಕಂಪನಿ ಜೊತೆಗೆ ಬೇರೆ ರಾಷ್ಟ್ರಗಳ ಪೈಪೋಟಿ
- ಅಲ್ಲದೆ ಭಾರತದಲ್ಲಿ ಬ್ರಿಟೀಷ್ ಸಾಮ್ರಾಜ್ಯದ ಸ್ಥಾಪನೆ ಮುಂತಾದವುಗಳ ಬಗ್ಗೆ ತಿಳಿದೆವು.

## 1.5 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಪೌರಾತ್ಯ ರಾಷ್ಟ್ರಗಳಲ್ಲಿ ಯೂರೋಪಿಯನ್ ಟ್ರೇಡಿಂಗ್ ಕಂಪನಿಗಳ ಸ್ಥಾಪನೆಯನ್ನು ಕುರಿತು ಸೂಕ್ಷ್ಮವಾಗಿ ವಿವರಿಸಿ.
2. ಭಾರತದಲ್ಲಿ ವಸಾಹತೀಕರಣ ಮತ್ತು ಇದರ ವಿಸ್ತರಣೆಯನ್ನು ಬ್ರಿಟೀಷರು ಪಾಲಿಸಿದ ಬಗ್ಗೆ ಚರ್ಚಿಸಿ.

## 1.6 ಹೆಚ್ಚಿನ ಅಧ್ಯಯನದ ಗ್ರಂಥಗಳು


1. ಪ್ರಸಾದ್ ಎಲ್.ವಿ : History Modern India
2. ಹನ್ಸ್‌ರಾಜ್ : Modern India
3. ಸುಮಿತ್ ಸರ್ಕಾರ್ : History of Modern India
4. ಅಗರ್‌ವಾಲ್ : Indian freedom Movement


ಡಾ. ಎ.ಸೋಮಶೇಖರ್

ಘಟಕ-2 ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿ ಮತ್ತು ದೇಶೀಯ ರಾಜ್ಯಗಳು

*ವಿಷಯಾನುಕ್ರಮಣಿಕೆ*



## 2.0 ಉದ್ದೇಶಗಳು

ನಲ್ಮೆಯ ಕಲಿಕಾಂಕ್ಷಿ, ಈ ಘಟಕದ ಅಧ್ಯಯನದಿಂದ ನೀವುಗಳು

- ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿ ಮತ್ತು ಮೊಘಲರ ಸಂಬಂಧವನ್ನು ತಿಳಿಯುವಿರಿ.
- ಇಂಗ್ಲೀಷರು ಮತ್ತು ಮರಾಠರ ನಡುವೆ ಇದ್ದಂತಹ ಸಂಬಂಧವನ್ನು ಅರಿಯುವಿರಿ.
- ಬಂಗಾಳದೊಂದಿಗೆ ಬ್ರಿಟೀಷರು ಹೊಂದಿದ್ದ ಬಹುಕಾಲದ ಸಂಬಂಧವನ್ನು ತಿಳಿಯುವಿರಿ.
- ಬ್ರಿಟೀಷರು ಪಂಜಾಬ್ ಮತ್ತು ಸಿಂಧ್ ಪ್ರಾಂತ್ಯವನ್ನು ಆಕ್ರಮಿಸಿಕೊಂಡುದನ್ನು ತಿಳಿಯುವಿರಿ.
- ಇಂಗ್ಲೀಷರು ಮತ್ತು ಮೈಸೂರು ರಾಜ್ಯದ ಸಂಬಂಧವನ್ನು ಅರಿಯುವಿರಿ.
- ಬ್ರಿಟೀಷರ ಚಕ್ರಾಧಿಪತ್ಯದ ಸ್ಥಾಪನೆ ಕುರಿತು ತಿಳಿಯುವಿರಿ.

## 2.1 ಘಟಕದ ಪೀಠಿಕೆ

ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿಯು ಮೊಗಲರು, ಮರಾಠರು, ಬಂಗಾಳ, ಪಂಜಾಬ್ ಮತ್ತು ಸಿಂಧ್, ಮೈಸೂರು ಮುಂತಾದ ರಾಜ್ಯಗಳ ಜೊತೆಯಲ್ಲಿ ಯಾವ ರೀತಿ ಸಂಬಂಧವನ್ನು ಇಟ್ಟುಕೊಂಡು ತಾವು ಇಡೀ ಭಾರತದ ಸಾಮ್ರಾಟರಾದರು ಎಂಬುದನ್ನು ಈ ಘಟಕದಲ್ಲಿ ಅಧ್ಯಯನ ಮಾಡುತ್ತೇವೆ. ಈ ರೀತಿಯ ಸಾಮ್ರಾಜ್ಯವನ್ನು ಸ್ಥಾಪಿಸಲು ಬ್ರಿಟೀಷರು ಹೂಡಿದ ತಂತ್ರಗಳು, ಪಾಲಿಸಿದ ನೀತಿಗಳು ಮತ್ತು ಅವುಗಳೆಲ್ಲ ಹೇಗೆ ಇವರಿಗೆ ಅನುಕೂಲವಾಗಿ ಪರಿಣಮಿಸಿದವು ಎಂಬುದು ಇಲ್ಲಿಯ ಅಧ್ಯಯನ. ಇದರ ಜೊತೆಯಲ್ಲಿಯೇ ಬ್ರಿಟೀಷರ ಈ ಕುಟಿಲ ನೀತಿಗಳು ಮತ್ತು ವಿಸ್ತರಣೆಯ ನೀತಿಯ ವಿರುದ್ಧ ದೇಶೀಯ ರಾಜರುಗಳು ಹೇಗೆ ವಿರೋಧಿಸಿದರು

ಹಾಗೂ ಆ ವಿರೋಧವನ್ನು ಎದುರಿಸಿ ಬ್ರಿಟೀಷರು ಹೇಗೆ ಸಾಮ್ರಾಜ್ಯ ಸ್ಥಾಪಿಸಿದರು ಎಂಬುದು ಒಂದು ರೋಚಕವಾದ ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ.

## 2.2 ಇಂಗ್ಲೀಷರು ಮತ್ತು ಮೊಗಲರು

ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪನಿಯು ಪ್ರಪ್ರಥಮವಾಗಿ ವಿಲಿಯಂ ಹಾಕಿನ್ಸನ ನೇತೃತ್ವದಲ್ಲಿ ಭಾರತದಲ್ಲಿ ಬಂದಿಳಿದು 1608ರಂದು ಆಳುತ್ತಿದ್ದ ಮೊಘಲರ ಆಸ್ಥಾನವನ್ನು ಭೇಟಿ ಇತ್ತನು. ಈ ಸಮಯದಲ್ಲಿ ಆಳುತ್ತಿದ್ದ ಮೊಘಲರ ದೊರೆ ಜಹಾಂಗೀರ್ ಸೂರತ್ ಎಂಬಲ್ಲಿ ಈಸ್ಟ್ ಇಂಡಿಯಾ ಕಂಪನಿಯು ತನ್ನ ಪ್ರಥಮ ವ್ಯಾಪಾರದ ಕೋಠಿಯನ್ನು ಸ್ಥಾಪಿಸಲು ಅನುಮತಿ ನೀಡಿದನು. ಇವನ ನಂತರ ಬಂದ ಸರ್ ಥಾಮಸ್ ರೋ ಭಾರತದಲ್ಲಿ ಅನೇಕ ವ್ಯಾಪಾರದ ಕೇಂದ್ರಗಳನ್ನು ಹಲವು ಪ್ರದೇಶಗಳಲ್ಲಿ 1615ರ ಹೊತ್ತಿಗೆ ಸ್ಥಾಪಿಸಿದನು. ಮೊಘಲರ ಕಾಲದಲ್ಲಿ ಈ ಕಂಪನಿಯು ಸೂರತ್, ಅಹಮದಾಬಾದ್, ಬಾಂಬೆ, ಮದ್ರಾಸ್, ಕಲ್ಕತ್ತಾ, ಮಚಲಿಪಟ್ಟಣ, ಕಾಸಿಂಬಜಾರ್, ಹೂಗ್ಲಿ ಮತ್ತು ಪಾಟ್ನಾಗಳಲ್ಲಿ ವ್ಯಾಪಾರದ ಕೋಠಿಗಳನ್ನು ಸ್ಥಾಪಿಸಿಕೊಂಡು ವ್ಯಾಪಾರದ ಲಾಭವನ್ನು ತೀವ್ರತರವಾಗಿ ಹೆಚ್ಚಿಸಿಕೊಂಡರು.

## 2.3 ಇಂಗ್ಲೀಷರು ಮತ್ತು ಬಂಗಾಳ ರಾಜ್ಯ

ಬಂಗಾಳದಲ್ಲಿ ಬ್ರಿಟೀಷರ ಅಧಿಕಾರವನ್ನು ಸ್ಥಾಪಿಸಿ, ಸಾಮ್ರಾಜ್ಯದ ನಿರ್ಮಾಣಕ್ಕೆ ಭದ್ರ ಬುನಾದಿ ಹಾಕಿದವನು ಲಾರ್ಡ್ ಕ್ಲೈವ್, ಇದಲ್ಲದೇ ಇವನು ಭಾರತದ ಇತರೇ ಪ್ರದೇಶಗಳಲ್ಲೂ ಸಹ ತನ್ನ ಕಂಪನಿ ಮತ್ತು ದೇಶದ ರಾಜ್ಯ ವಿಸ್ತಾರವನ್ನು ಮಾಡಿದನು. ಕ್ಲೈವನು ತಾನು ಬ್ರಿಟೀಷರ ದಂಡನಾಯಕನಾಗಿದ್ದುಕೊಂಡು ಫ್ರೆಂಚರೊಂದಿಗೆ ಯುದ್ಧಮಾಡಿ ಎರಡನೇ ಕರ್ನಾಟಕ ಯುದ್ಧದಲ್ಲಿ ಫ್ರೆಂಚರನ್ನು ಸೋಲಿಸಿ ಆರ್ಕಾಟನ್ನು ತಮ್ಮ ವಶಪಡಿಸಿಕೊಂಡು ದಖನ್‌ನಲ್ಲಿ ಬ್ರಿಟೀಷರ ಪ್ರಭಾವವನ್ನು ಹೆಚ್ಚಿಸಿ ಸಾಮ್ರಾಜ್ಯ ಸ್ಥಾಪನೆ ಮಾಡಿದನು.

ಇತರೇ ಪ್ರದೇಶಗಳಲ್ಲಿ ತಮ್ಮ ಕೇಂದ್ರಗಳನ್ನು ಸ್ಥಾಪಿಸಿಕೊಂಡಂತೆ ಬಂಗಾಳದಲ್ಲಿಯೂ ಸಹ ಇಂಗ್ಲೀಷರು ತಮ್ಮ ಕೇಂದ್ರಗಳನ್ನು ಸ್ಥಾಪಿಸಿಕೊಂಡರು. ಬಂಗಾಳದ ರಾಜ ನವಾಬ ಅಲಿವರ್ಧಿಖಾನ್ ಅಧಿಕಾರದಲ್ಲಿ ಇರುವವರೆಗೆ ಇಂಗ್ಲೀಷರಿಗೆ ಯಾವುದೇ ರೀತಿಯ ಸಮಸ್ಯೆಗಳು ಇರಲಿಲ್ಲ. ಆದರೆ ಸಿರಾಜ್-ಉದ್-ದೌಲನು ಅಧಿಕಾರ ವಹಿಸಿದ ನಂತರ ಅವನು ಮತ್ತು ಇಂಗ್ಲೀಷರ ನಡುವೆ ಸಾಕಷ್ಟು ಭಿನ್ನಾಭಿಪ್ರಾಯ ತಲೆದೋರಿತು. ಸಿರಾಜ್-ಉದ್-ದೌಲನು ಕಾಸಿಂಬಜಾರ್‌ನ್ನು ವಶಪಡಿಸಿಕೊಂಡು ಕಲ್ಕತ್ತಾದ ಕಡೆಗೆ ತನ್ನ ಸೈನ್ಯವನ್ನು ಮುನ್ನುಗ್ಗಿಸಿದನು. ನಂತರ 1756ರಲ್ಲಿ ಫೋರ್ಟ್ ವಿಲಿಯಂನ್ನು ತನ್ನ ವಶಪಡಿಸಿಕೊಂಡನು. ಇದರ ನಂತರ ಕಲ್ಕತ್ತಾದಲ್ಲಿ ಪ್ರಸಿದ್ಧ ಘಟನೆಯಾದ "ಬ್ಲಾಕ್ ಹೋಲ್ ಟ್ರಾಜೆಡಿ" ಎಂಬ ದುರಂತವು ನಡೆದು ಕತ್ತಲೆ ಕೋಣೆಯಲ್ಲಿ ಗಾಳಿ ಬೆಳಕು ಇಲ್ಲದೇ ಸುಮಾರು 123ಇಂಗ್ಲೀಷ್ ಅಧಿಕಾರಿಗಳು ಉಸಿರುಗಟ್ಟಿ ಸತ್ತುಹೋದ ಘಟನೆಯು ನಡೆಯಿತು. ಇದನ್ನು ಸಿರಾಜ್-ಉದ್-ದೌಲನ ಅಧಿಕಾರಿಗಳೇ ಮಾಡಿದ್ದರು ಎಂಬುದು ಮಾಹಿತಿಗಳಿಂದ ತಿಳಿದು ಬರುತ್ತದೆ.

ಬ್ರಿಟೀಷರಿಗೆ ಆದ ಅವಮಾನಕ್ಕೆ ಸೇಡು ತೀರಿಸಿಕೊಳ್ಳಲು ಹಾಗೂ ತಾವುಗಳು ಕಳೆದುಕೊಂಡಿದ್ದ ಪ್ರದೇಶಗಳನ್ನು ವಾಪಸ್ಸು ಪಡೆಯಲು ಕ್ಲೈವನು ಬಂಗಾಳಕ್ಕೆ ಬಂದನು. ಸಿರಾಜ್ ಉದ್ ದೌಲ ಸೈನ್ಯವನ್ನು ಸೋಲಿಸಿ ಕಲ್ಕತ್ತಾವನ್ನು ತನ್ನ ವಶಪಡಿಸಿಕೊಂಡನು. ಆದರೆ 1757ರ ಫೆಬ್ರವರಿ ತಿಂಗಳಲ್ಲಿ ಒಂದು ಒಪ್ಪಂದವನ್ನು ಮಾಡಿಕೊಂಡನು. ಕ್ಲೈವನು ಸಿರಾಜ್ ಉದ್ ದೌಲನೊಂದಿಗೆ ಶಾಂತಿ

ಒಪ್ಪಂದವನ್ನು ಮಾಡಿಕೊಂಡಿದ್ದರೂ ಕೂಡ ಕತ್ತಲುಕೋಣೆಯ ಘಟನೆಯ ವಿರುದ್ಧ ನವಾಬನ ವಿರುದ್ಧ ಹಗೆ ತೀರಿಸಿಕೊಳ್ಳಬೇಕೆಂಬ ಮನಸ್ಸನ್ನು ಮಾಡಿಕೊಂಡಿದ್ದನು. ಆದ್ದರಿಂದ ಮೀರ್ ಜಾಫರ್‌ನೊಂದಿಗೆ, ಒಪ್ಪಂದ ಮಾಡಿಕೊಂಡು, ಪಿತೂರಿ ನಡೆಸಲು ಇತರರೊಂದಿಗೆ ಕೂಡಿ ಸಿರಾಜ್ ಉದ್ ದೌಲನ ವಿರುದ್ಧ ಜೂನ್ 23, 1757ರಂದು ಪ್ಲಾಸಿ ಕದನವನ್ನು ಮಾಡಿದನು. ಈ ನಿರ್ಣಾಯಕ ಯುದ್ಧದಲ್ಲಿ ಸಿರಾಜ್ ಉದ್ ದೌಲವು ಸೋತುಹೋಗಿ, ಸೆರೆಸಿಕ್ಕಿದ ಅವನನ್ನು ಬ್ರಿಟೀಷರು ಕೊಂದುಹಾಕಿದರು ಮತ್ತು ಮೀರ್ ಜಾಫರ್‌ನನ್ನು ಬಂಗಾಳ, ಬಿಹಾರ ಮತ್ತು ಒರಿಸ್ಸಾ ರಾಜ್ಯಗಳ ರಾಜನೆಂದು ಘೋಷಿಸಿದರು. ಇದನ್ನು ಒಪ್ಪಿಕೊಂಡ ಮೀರ್ ಜಾಫರ್‌ನು ಬ್ರಿಟೀಷ್‌ರಿಗೆ 24 ಪರಗಣಗಳನ್ನು ನೀಡಿದನು ಜೊತೆಗೆ ಒಂದು ಕೋಟಿ ರೂಪಾಯಿಗಳನ್ನು ಸಹ ನೀಡಿದನು. ಇದರ ಜೊತೆಗೆ ಕ್ಲೈವನು ಡಚ್ಚರೊಂದಿಗೆ ಯುದ್ಧ ಮಾಡಿ ಅವರನ್ನು ಸೋಲಿಸಿ 1759ರಲ್ಲಿ ಬಂಗಾಳದಲ್ಲಿ ಅವರಿಗೆ ಸೇರಿದ ಚಿನ್ಸುರಾಪಟ್ಟಣವನ್ನು ತನ್ನ ವಶಪಡಿಸಿಕೊಂಡನು.

ಕ್ಲೈವನು ಇಂಗ್ಲೆಂಡಿಗೆ ತೆರಳಿದ ನಂತರ ಮೀರ್ ಜಾಫರ್‌ನನ್ನು ಸಿಂಹಾಸನದಿಂದ ಕೆಳಗಿಳಿಸಲಾಯ್ತು ಮತ್ತು ಅವನ ಅಳಿಯನಾದ ಮೀರ್ ಖಾಸಿಂನನ್ನು 1760ರಲ್ಲಿ ಬಂಗಾಳದ ನವಾಬನನ್ನಾಗಿ ನೇಮಕ ಮಾಡಲಾಯಿತು. ಮೀರ್ ಖಾಸಿಂ ಇದರ ಸಂತೋಷಕ್ಕಾಗಿ ಬರದ್ವಾನ್, ಮಿಡ್ನಾಪೂರ್ ಮತ್ತು ಚಿತ್ತಗಾಂಗ್‌ನ್ನು ಕಂಪನಿಗೆ ನೀಡಿದನು. 1763ರಲ್ಲಿ ಮೀರ್‌ಖಾಸಿಂನು ಕಂಪನಿಯ ಮೇಲೆ ವ್ಯಾಪಾರೀ ಪ್ರತಿಬಿಂಧಕಗಳನ್ನು ನಿಗಧಿಪಡಿಸಿದಾಗ ಕಲ್ಕತ್ತಾದ ಪ್ರತಿನಿಧಿ ಸಭೆ ಅವನನ್ನು ಕೆಳಗಿಳಿಸಿ ಮತ್ತೆ ಮೀರ್ ಜಾಫರ್‌ನನ್ನು ನವಾಬನನ್ನಾಗಿ ಕೂರಿಸಿತು.

ಈ ಪಿತೂರಿಯ ವಿರುದ್ಧ ಸೇಡು ತೀರಿಸಿಕೊಳ್ಳಲು ಮೀರ್‌ಕಾಸಿಂನು ಔದ್‌ನ ನವಾಬ ಶೂಜಾ ಉದ್‌ವಾಲ. ಮೊಗಲರ ದೊರೆಯಾದ ಎರಡನೇ ಷಾ ಅಲಂನೊಂದಿಗೆ ಕೂಡಿ ಒಂದು ಒಪ್ಪಂದವನ್ನು ಮಾಡಿಕೊಂಡನು. ಆದರೆ ಇವರ ಈ ಸ್ನೇಹಪೂರ್ವಕ ಸೈನ್ಯವು 1764ರ ಬಕ್ಸಾರ್ ಕದನದಲ್ಲಿ ಬ್ರಿಟೀಷರ ಸೈನ್ಯದೊಂದಿಗೆ ಹೋರಾಡಿ ಸೋಲನ್ನು ಅನುಭವಿಸಬೇಕಾಯಿತು. ಈ ಯುದ್ಧವು ಬ್ರಿಟೀಷ್‌ರಿಗೆ ಅಧಿಕಾರ ಗದ್ದುಗೆಯ ಭರವಸೆಯನ್ನು ತಂದಿತ್ತಿತ್ತು. ಇದರ ನಂತರ ಕ್ಲೈವನು ಎರಡನೆಯ ಬಾರಿ ಬಂಗಾಳದ ಗೌರ್‍ನರಾಗಿ ಬಂದು 1765ರಲ್ಲಿ ಎರಡು ಅಲಹಾಬಾದ್ ಒಪ್ಪಂದಗಳನ್ನು ಮಾಡಿಕೊಂಡನು. ಮೊದಲನೆಯ ಒಪ್ಪಂದದ ಪ್ರಕಾರ ಔದ್ ಪ್ರಾಂತ್ಯವನ್ನು ಶೂಜಾ ಉದ್ ದೌಲನಿಗೆ ನೀಡಿ ಅವನ ಹಕ್ಕನ್ನು ಒಪ್ಪಿಕೊಳ್ಳಲಾಯಿತು. ಇನ್ನೂ ಸಂತುಷ್ಟನಾದ ಶೂಜಾ ಉದ್‌ದೌಲನು ಕಂಪನಿ ಕಾರಾ ಮತ್ತು ಅಲಹಾಬಾದ್ ಪ್ರಾಂತ್ಯಗಳನ್ನು ಕಂಪನಿಗೆ ನೀಡಿದನು ಮತ್ತು 15ಲಕ್ಷ ರೂಪಾಯಿಗಳನ್ನು ಯುದ್ಧದ ವೆಚ್ಚವಾಗಿ ಕಂಪನಿಗೆ ನೀಡಲು ಒಪ್ಪಿಗೆ ನೀಡಿದನು. ಎರಡನೇ ಒಪ್ಪಂದದ ಪ್ರಕಾರ ಕಂಪನಿಯು ಕಾರಾ ಮತ್ತು ಅಲಹಾಬಾದ್‌ನ್ನು ಮೊಗಲ್‌ದೊರೆ ಎರಡನೇ ಷಾ ಅಲಂಗೆ ನೀಡಲೂ ಮತ್ತು ದೊರೆಗೆ 26ಲಕ್ಷ ರೂಪಾಯಿಗಳನ್ನು ವಾರ್ಷಿಕವಾಗಿ ಕೊಡಲು ಒಪ್ಪಿಕೊಂಡು ಮೊಗಲರಿಂದ ಬಂಗಾಳ, ಬಿಹಾರ ಮತ್ತು ಒರಿಸ್ಸಾ ರಾಜ್ಯಗಳ ದಿವಾನರ ಹಕ್ಕನ್ನು ಪಡೆದುಕೊಂಡರು. ಇದು ಇವರ ಸ್ಥಾನವನ್ನು ಮತ್ತೊಮ್ಮೆ ಭದ್ರಪಡಿಸಿತು. ಮೊಗಲ್‌ದೊರೆಯು ಕಂಪನಿಯ ಅಧೀನ ರಾಜನಾಗಿದ್ದುಕೊಂಡು ಮತ್ತು ಬಂಗಾಳದ ನವಾಬನು ಎರಡು ಬಹು ಮುಖ್ಯ ಕಾರ್ಯಗಳನ್ನು ಮತ್ತು ಅಧಿಕಾರವನ್ನು ಬ್ರಿಟೀಷ್ ಕಂಪನಿಗೆ ನೀಡಲಾಯಿತು. ಅವುಗಳು (a) ದಿವಾನಿಹಕ್ಕು ಅಥವಾ ತೆರಿಗೆಯನ್ನು ವಸೂಲಿ ಮಾಡುವ ಹಕ್ಕು ಮತ್ತು (b) ನಿಜಾಮತ್ ಅಥವಾ ಮಿಲಿಟರಿ ಅಧಿಕಾರ ಮತ್ತು ಆಡಳಿತವನ್ನು ನೋಡಿಕೊಳ್ಳುವ ಅಧಿಕಾರವನ್ನು ನವಾಬನು ಪಡೆದುಕೊಂಡನು.

ಈ 1765ರಲ್ಲಿ ಮೊಗಲ್ ಸಾಮ್ರಾಟನು ದಿವಾನಿ ಹಕ್ಕನ್ನು ಕಂಪನಿಗೆ ನೀಡಿದ್ದರಿಂದ ನವಾಬನ ನಿಯಂತ್ರಣದಲ್ಲಿ ಕೇವಲ ನಿಜಾಮತ್ ಹಕ್ಕು ಮಾತ್ರ ಉಳಿಯಿತು. ಇದರಿಂದಾಗಿ ಅಧಿಕಾರವು ಕಂಪನಿ ಮತ್ತು ನವಾಬನ ನಡುವೆ ಹಂಚಿಕೆಯಾಗಿ ಹೋಯಿತು. ಕಂಪನಿಯು ದಿವಾನಿಯ ಪ್ರದೇಶಗಳಲ್ಲಿ ಹೆಚ್ಚು ಕಂದಾಯವನ್ನು ವಸೂಲು ಮಾಡುವ ಹಕ್ಕನ್ನು ಪಡೆಯಿತು ಮತ್ತು ಜನರ ಯೋಗಕ್ಷೇಮ ಕಾಪಾಡುವುದು ಮತ್ತು ರಾಜ್ಯದಲ್ಲಿ ಶಾಂತಿ ಸುಭದ್ರತೆಯನ್ನು ಕಾಪಾಡುವ ಕಾರ್ಯವು ನವಾಬರ ಕೈಯಲ್ಲಿ ಉಳಿಯಿತು. ಇದರಿಂದಾಗಿ

ಕಂಪನಿಗೆ ಹಲವು ರೀತಿಯ ಲಾಭಗಳಿದ್ದವು. ಉದಾ: ಕಂಪನಿಯು ಯಾವುದೇ ಭಾದ್ಯತೆಯಿಲ್ಲದೇ ಹಕ್ಕುಗಳನ್ನು ಪಡೆಯಲಾಯಿತು. ಯಾವುದೇ ರೀತಿಯ ಕೃಷಿ ಮಾಡದೇ, ನೀರು ಹಾಯಿಸದೇ ಗಿಡದಿಂದ ಹೂವುಗಳನ್ನು ಕೊಯ್ದುಕೊಳ್ಳುವ ಹಕ್ಕನ್ನು ಕಂಪನಿ ಪಡೆಯಿತು. ಇನ್ನು ನವಾಬನು ಕೇವಲ ನಾಮಕಾವಸ್ತೆ ರಾಜನಾಗಿದ್ದು ಕಂಪನಿಯು ನಿಜವಾದ ಅಧಿಕಾರವನ್ನು ಪಡೆದು ಯಾವುದೇ ಇತರೇ ದೇಶೀಯ ರಾಜರೂ ಕೂಡ ಕಂಪನಿಯ ವಿರುದ್ಧ ಧ್ವನಿ ಎತ್ತದಂತೆ ಇರುವ ಸ್ಥಿತಿಯು ಭಾರತದಲ್ಲಿ ಉಂಟಾಯಿತು.

## 2.4 ಇಂಗ್ಲೀಷರು ಮತ್ತು ಮರಾಠರು

ಪ್ರಾರಂಭದಲ್ಲಿ ಮರಾಠರು ಬ್ರಿಟೀಷರೊಂದಿಗೆ ಸ್ನೇಹದಿಂದಿದ್ದು, ಮೈಸೂರಿನ ಹೈದರ್ ಆಲಿ ವಿರುದ್ಧ ಹೋರಾಡಿದರು. ಆದರೆ 1772ರ ನಂತರ ಬ್ರಿಟೀಷರೊಂದಿಗೆ ಆದಂತಹ ಭಿನ್ನಾಭಿಪ್ರಾಯದಿಂದಾಗಿ ಮರಾಠರ ಪೇಶ್ವೆಗಳು ಕುಪಿತಗೊಂಡರು. ಅವರು ಬ್ರಿಟೀಷರ ವಿರುದ್ಧ ಹೋರಾಡಲು ಮನಸ್ಸು ಮಾಡಿದರಲ್ಲದೇ, ಕಂಪನಿಯ ವಿರುದ್ಧ ಮೂರು ಯುದ್ಧಗಳನ್ನು ಮಾಡಿದರು. ನಾನಾ ಫಢ್ನವೀಸ್ ಎಂಬ ವೀರ ಮತ್ತು ಮರಾಠ ನಾಯಕನು ರಘೋಬನೆಂಬುವನು ಪೇಶ್ವೆಯಾಗುವುದನ್ನು ವಿರೋಧಿಸಿದನು. ನಾನಾ ಫಢ್ನವೀಸನನ್ನು ಹಲವು ಮರಾಠ ಸಾಮಂತರು ಬೆಂಬಲಿಸಿದರು. ಆದರೆ 1775ರಲ್ಲಿ ಬಾಂಬೆ ಸರ್ಕಾರದೊಂದಿಗೆ ಒಂದು ಸೂರತ್ ಒಪ್ಪಂದವನ್ನು ಮಾಡಿಕೊಂಡನಲ್ಲದೇ ಕಂಪನಿಯ ಸಹಕಾರಕ್ಕಾಗಿ ಸಾಲ್ಸೆಟ್ ಮತ್ತು ಬೇಸ್ಸೀನ್‌ಗಳನ್ನು ನೀಡುವುದಾಗಿ ಒಪ್ಪಿಕೊಂಡನು. ಆದರೆ ಇದನ್ನು ಬಂಗಾಳವು ಒಪ್ಪದೇ ಧಿಕ್ಕರಿಸಿತು. ಇದಲ್ಲದೆ 1776ರಲ್ಲಿ ಬಂಗಾಳ ಸರ್ಕಾರವೇ ನಾನಾ ಫಢ್ನವೀಸನೊಂದಿಗೆ ಪ್ರಾರಂಭದ ಒಪ್ಪಂದವನ್ನು ಮಾಡಿಕೊಂಡಿತು. ಇವರೀರ್ವರ ಸಹಕಾರದಿಂದ ಬ್ರಿಟೀಷರ ವಿರುದ್ಧ ಹೋರಾಟ ನಡೆದಾಗ ಬ್ರಿಟೀಷರು ಸೋತುಹೋದರು ಮತ್ತು ಒಂದು ಅವಮಾನಕರವಾದ ವಾರ್ಗಾಂವ್ ಒಪ್ಪಂದವನ್ನು 1769ರಲ್ಲಿ ಸಹಿ ಮಾಡಿದರಲ್ಲದೇ ಅವರು ಗೆದಿದ್ದ ಎಲ್ಲಾ ಪ್ರದೇಶಗಳನ್ನು ಹಿಂದಿರುಗಿಸಿದರು. ಬಂಗಾಳದ ಗೌರ್ನರ್ ಜನರಲ್‌ರವರು ಎರಡು ಸೈನ್ಯಗಳನ್ನು ಗೊಡ್ಡಾರ್ಡ್ ಮತ್ತು ಪೋಪ್ಹಾಮ್‌ರವರ ನೇತೃತ್ವದಲ್ಲಿ ಕಳುಹಿಸಿದರು. ಗೋಡ್ಡಾರ್ಡ್ ಅಹಮದಾಬಾದನ್ನು ವಶಪಡಿಸಿಕೊಂಡನಲ್ಲದೇ ಗಾಯಕ್‌ವಾಡನನ್ನು ಸೋಲಿಸಿದನು. ಆದರೆ ಪೂನಾದಲ್ಲಿ ನಾನಾ ಫಢ್ನವೀಸನ ವಿರುದ್ಧ ಜಯಶಾಲಿಯಾಗಲಿಲ್ಲ. ಆದರೆ ಪೋಪ್ಹಾಮನು ಮರಾಠರ ಚತುರ ಸಾಮಂತ ಮಹದಾಜಿ ಸಿಂಧ್ಯನನ್ನು ಸೋಲಿಸಿದನಲ್ಲದೇ ಗ್ವಾಲಿಯರ್ ಆಕ್ರಮಿಸಿಕೊಂಡನು. ವರೀರ್ವರೂ ಕೂಡ ಒಂದು ಒಪ್ಪಂದಕ್ಕೆ ಬಂದರು. ಈ ವಿಜಯಗಳು ಇಂಗ್ಲೀಷರ ಗೌರವ-ಪ್ರತಿಷ್ಟೆಯನ್ನು ಹೆಚ್ಚಿಸಿದವು. 1782ರ ಸಾಲ್ಬಾಯಿ ಒಪ್ಪಂದದ ಪ್ರಕಾರ ಮಾಧವರಾವ್ ನಾರಾಯಣನನ್ನು ಪೇಶ್ವೆಯಾಗಿ ನೇಮಿಸಿ ಸಾಲ್ಸೆಟ್‌ನ್ನು ಕಂಪನಿಗೆ ತೆಗೆದುಕೊಳ್ಳಲಾಯಿತು. ಮೂರು ಲಕ್ಷ ರೂಪಾಯಿಗಳನ್ನು ರಘೋಬನಿಗೆ ಪಿಂಚಣಿಯಾಗಿ ಕೊಡಲಾಯಿತು ಮತ್ತು ಜಮುನಾ ನದಿಯ ಪಶ್ಚಿಮದ ಒಂದು ಪ್ರದೇಶವನ್ನು ಸಿಂಧ್ಯನಿಗೆ ಬಿಟ್ಟು ಕೊಡಲಾಯಿತು.

ಪೇಶ್ವೆ ಎರಡನೇ ಬಾಜಿರಾಯನು 1802ರಲ್ಲಿ ಕಂಪನಿಯೊಂದಿಗೆ ಸಹಾಯಕ ಸೈನ್ಯ ಪದ್ಧತಿಗೆ ಸಹಿ ಹಾಕಿದನು. ಆದರೆ ಬೀರಾರ್‌ನ ರಘೂಜಿ ಭೋಂಸ್ಲೆ, ದೌಲತ್‌ರಾವ್ ಸಿಂಧಿಯಾ ಮತ್ತು ಜಸ್ವಂತ್‌ರಾವ್ ಹೋಳ್ಕರ್ ಇವರುಗಳು ಸೈನಿಕ ಒಪ್ಪಂದಕ್ಕೆ ಸಹಿ ಹಾಕಲು ಒಪ್ಪಲಿಲ್ಲ. ಇಂಗ್ಲೀಷರು ವೆಲ್ಲೆಸ್ಲಿಯ ನಾಯಕತ್ವದಲ್ಲಿ ಅವರ ವಿರುದ್ಧ ಶಸ್ತ್ರ ಸನ್ನದ್ದರಾದರು ಮತ್ತು 2ನೇ ಮರಾಠಯುದ್ಧ ಪ್ರಾರಂಭವಾಯಿತು. ಮರಾಠರು ಯುದ್ಧದಲ್ಲಿ ಸೋಲನ್ನನುಭವಿಸಿದರು. ಸಿಂಧ್ಯಾ ಮತ್ತು ಭೋಂಸ್ಲೆ 1803ರಲ್ಲಿ ಸಹಾಯಕ ಸೈನ್ಯ ಪದ್ಧತಿಗೆ ಒಪ್ಪಿಕೊಂಡರು. ಇದರಿಂದಾಗಿ ಇಂಗ್ಲೀಷರು ಅಹಮದ್‌ನಗರ, ಅಸ್ಸಾಂ, ಅರಗಾಂವ್, ಅಟ್ಟಕ್, ಡೆಲ್ಲಿ, ಆಗ್ರಾ, ಬ್ರೋಚ್ ಮುಂತಾದ ಪ್ರದೇಶಗಳ ಯಜಮಾನರಾದರು.

1817-18ರಲ್ಲಿ ಇಂಗ್ಲೀಷರು ಮತ್ತು ಮರಾಠರ ನಡುವೆ ಮೂರನೇ ಯುದ್ಧವು ಪ್ರಾರಂಭವಾಯಿತು. ಈ ಯುದ್ಧದಲ್ಲಿ ಮರಾಠರ ಎಲ್ಲಾ ರಾಜರುಗಳೂ ಸೋಲನ್ನನುಭವಿಸಿ ಅವರ ಅಧಿಕಾರ ನುಚ್ಚು ನೂರಾಯಿತು. ಇದರ ನಂತರ ಅವರ್‍ಯಾರೂ ಸಹ

ಇಂಗ್ಲೀಷರಿಗೆ ಅಪಾಯಕಾರಿ ಶತ್ರುಗಳಾಗಲು ಅವಕಾಶವಾಗಲಿಲ್ಲ ಮತ್ತು ಬ್ರಿಟೀಷರ ವಿಸ್ತರಣಾ ನೀತಿಗೆ ಅಡ್ಡಿ ಬರಲಿಲ್ಲ. 1818ರ ಹೊತ್ತಿಗೆ ಲಾರ್ಡ್ ಹೇಸ್ಟಿಂಗ್ಸನು ಭಾರತದಲ್ಲಿ ಬ್ರಿಟೀಷರ ಆಡಳಿತಕ್ಕೆ ಒಂದೇ ಒಂದು ಅಪಾಯದ ಮುಳ್ಳಾದ ಮರಾಠರನ್ನು ಬಗ್ಗುಬಡಿಯಲು ಗೌರ್ನರ್ ಸಹಾಯಕನಾದನು.

## 2.5 ಇಂಗ್ಲೀಷರು ಮತ್ತು ಪಂಜಾಬ್, ಸಿಂಧ್ ರಾಜ್ಯಗಳು

1809ರಲ್ಲಿ ಲಾರ್ಡ್ ಮಿಂಟೋನೂ ಸಿಖ್ ರಾಜ್ಯದ ಸ್ಥಾಪಕನಾದ ರಣಜಿತ್ ಸಿಂಗ್‌ನನ್ನು ಕಾಣಲು ಸರ್ ಚಾರ್ಲ್ಸ್ ಮೆಟ್‌ಕಾಫ್‌ನನ್ನು ಕಳುಹಿಸಿ ಅವರೀರ್ವರ ನಡುವೆ ಏಪ್ರಿಲ್ 25, 1809ರಂದು ಅಮೃತಸರ ಒಪ್ಪಂದವನ್ನು ಮಾಡಿಕೊಳ್ಳಲಾಯಿತು. ಈ ಒಪ್ಪಂದದಿಂದಾಗಿ ಬ್ರಿಟೀಷರ ರಾಜ್ಯ ಮತ್ತು ಸಿಖ್ಖರ ರಾಜ್ಯದ ನಡುವೆ ಸಟ್ಲೆಜ್ ಒಂದು ಗಡಿ ರೇಖೆಯಾಯಿತು. ಎರಡೂ ಸರ್ಕಾರಗಳೂ ಸಹ ಸ್ನೇಹದಿಂದಿರಲು ಒಪ್ಪಿಕೊಂಡು ಸಹಿ ಮಾಡಿದವು. ಇದರೊಂದಿಗೆ ಸುಮಾರು ಆರು ರಾಜ್ಯಗಳು ಇಂಗ್ಲೀಷರ ನಿಯಂತ್ರಣಕ್ಕೆ ಬಂದು ಸೇರಿಕೊಂಡಂತಾಯಿತು. ಮಹಾರಾಜ ರಣಜಿತ್ ಸಿಂಗನು ತನ್ನ ಜೀವಿತದ ಅಂತ್ಯದವರೆಗೂ ಬ್ರಿಟೀಷರಿಗೆ ನಿಯತ್ತಿನಿಂದ ಸ್ನೇಹದಿಂದ ನಡೆದುಕೊಂಡನು. ಇದರಿಂದಾಗಿ ಅವನು ಎಲ್ಲಾ ಸಿಖ್ ರಾಜ್ಯಗಳನ್ನು ಒಂದಾಗಿ ಮಾಡಲು ಕಾಣುತ್ತಿದ್ದ ಕನಸುಗಳು ನನಸಾಗಲಿಲ್ಲ. ಆದರೂ ಸಟ್ಲೇಜ್‌ನ ಪೂರ್ವ ಭಾಗದ ಕೆಲವು ಭಾಗಗಳನ್ನು ಅವನು ತನ್ನ ನಿಯಂತ್ರಣಕ್ಕೆ ತೆಗೆದುಕೊಳ್ಳಲು ಅವಕಾಶಕೊಡಲಾಯಿತು.

1831ರಲ್ಲಿ ಪುನಃ ಲಾರ್ಡ್ ವಿಲಿಯಂ ಬೆಂಟಿಂಕ್‌ನು ರಣಜಿತ್‌ಸಿಂಗನನ್ನು ರೋಪಾರ್‌ನಲ್ಲಿ ಭೇಟಿಯಾದನು ಮತ್ತು ಮತ್ತೊಂದು ಸ್ನೇಹದ ಒಪ್ಪಂದವನ್ನು ಅವನೊಂದಿಗೆ ಮಾಡಿಕೊಂಡನು. ಈ ಒಪ್ಪಂದದ ಸ್ಥಳವನ್ನು ಬಹಳಷ್ಟು ಸುಂದರವಾಗಿ ಸಜ್ಜುಗೊಳಿಸಿದರು. ರಣಜಿತ್‌ಸಿಂಗ್‌ನು ಸಿಂದ್‌ಪ್ರಾಂತ್ಯವನ್ನು ತನ್ನ ಪೂರ್ಣ ನಿಯಂತ್ರಣದಲ್ಲಿಟ್ಟುಕೊಳ್ಳಲು, ಅದರಲ್ಲೂ ವಾಣಿಜ್ಯ ನಗರವಾದ ಶಿಖರ್‌ಪುರನ್ನು ತನ್ನದಾಗಿಸಿಕೊಳ್ಳಲು ಪ್ರಯತ್ನಿಸಿದನು. ಆದರೆ ಬ್ರಿಟೀಷರ ವಿರೋಧದಿಂದಾಗಿ ಅದನ್ನು ಪಡೆಯಲು ಆಗಲಿಲ್ಲ. 1838ರಲ್ಲಿ ಇವನು ಲಾರ್ಡ್ ಆಕ್ಲೆಂಡ್ ಮತ್ತು ಷಾ ಷೂಜಾರೊಂದಿಗೆ ತ್ರಿಪಕ್ಷ ಒಪ್ಪಂದವನ್ನು ಮಾಡಿಕೊಂಡು ಆಫ್ಘಾನಿಸ್ತಾನದ ಅಮೀರದೋಸ್ತ್ ಮಹಮದ್‌ಖಾನನ್ನು ಕೆಳಗಿಳಿಸಿ ಷಾ ಷೂಜಾನನ್ನು ಸಿಂಹಾಸನ್ನೇರಿಸಲು ಪ್ರಯತ್ನಿಸಿದ್ದು, ಮೊದಲನೇ ಆಫ್ಘನ್‌ಯುದ್ಧಕ್ಕೆ ಕಾರಣವಾಯಿತು.

***ಮೊದಲನೇ ಸಿಖ್‌ಯುದ್ಧ (1845-46)***

1839ರ ಜೂನ್‌ನಲ್ಲಿ ರಣಜಿತ್‌ಸಿಂಗ್‌ನ ನಿಧನದ ನಂತರ ಅವನ ಪುತ್ರ ಖರಗ್‌ಸಿಂಗ್‌ನ್ನು ರಾಜರಾಗಿ ಮುಂದುವರೆದನು. ಇದಾದ ನಂತರದ ಆರು ವರ್ಷಗಳಲ್ಲಿ ಹಲವು ಕ್ರಾಂತಿಗಳು, ಕೊಲೆಗಳು ನಡೆಯಲ್ಪಟ್ಟವು. 1845ರಲ್ಲಿ ಮಹಾರಾಜನ ಚಿಕ್ಕಮಗ ದಲೀಪ್‌ಸಿಂಗ್‌ನು ರೀಜೆಂಟರಾದ ರಾಣಿ ಜಿಂದನ್‌ಗಳ ಹೆಸರಿನಲ್ಲಿ ಆಳ್ವಿಕೆ ಪ್ರಾರಂಭಿಸಿದನು. 1845ರ ಡಿಸೆಂಬರ್‌ನಲ್ಲಿ ಸಿಖ್‌ರ ಸೇನೆಯು ಬ್ರಿಟೀಷ್‌ರು ಪಂಜಾಬನ್ನು ಕಬಳಿಸಬಹುದೆಂದೆನಿಸಿ ಸಟ್ಲೇಜ್‌ನ್ನು ದಾಟಿ ಬ್ರಿಟೀಷರ ವಿರುದ್ಧ ಹೊರಟರು. ಇದರೊಂದಿಗೆ ಲಾರ್ಡ್ ಹಾರ್ಡಿಂಜ್ ಸಿಖ್ಖರ ಮೇಲೆ ಯುದ್ಧವನ್ನು ಘೋಷಿಸಿದನು. ಬ್ರಿಟೀಷರ ಸೇನೆಯ ಮುಖ್ಯಸ್ಥನಾಗಿ ಸರ್ ಹ್ಯೂಗಫ್‌ನ್ನು ಕಾರ್ಯನಿರ್ವಹಿಸಿದನು. ಸಿಖ್ಖರು ಧೈರ್ಯದಿಂದ ಹೋರಾಟ ನಡೆಸಿದರು. ಆದರೆ ಅವರ ಅನೇಕ ನಾಯಕರಾದ ಲಾಲ್‌ಸಿಂಗ್, ತೇಜಾಸಿಂಗ್‌ರವರ ವಿಶ್ವಾಸಘಾತುಕತನ ಮತ್ತು ಕುತಂತ್ರದಿಂದಾಗಿ ಸಿಖ್ಖರು ಹೆಚ್ಚಿನ ತೊಂದರೆಗಳಿಗೆ ಸಿಲುಕಿದರು. ಈ ಮೊದಲಯುದ್ಧವು ಮಡಕಿಯಲ್ಲಿ ನಡೆಯಿತ್ತು. ಸಿಖ್ಖರು ದೈರ್ಯದಿಂದ ಯುದ್ದ ಮಾಡಿದರೂ ಅವರು ಕೊನೆಯಲ್ಲಿ ಸೋತುಹೋದರು. ಎರಡನೇ ಯುದ್ಧವು

ಫೆರೋಷಾನಲ್ಲಿ ನಡೆಯಿತು. ಇದೊಂದು ದೊಡ್ಡ ಘೋರವಾದ ಯುದ್ಧವಾಗಿತ್ತು. ಸಿಖ್ಖರು ತೇಜಾಸಿಂಗ್‌ನ ನಾಯಕತ್ವದಲ್ಲಿ ಘೋರವಾಗಿ ಯುದ್ಧ ನಡೆಸಿದರೂ ಸಹ ಇಂಗ್ಲೀಷರು ವೀರಾವೇಶದಿಂದ ಹೋರಾಡಿ ಸಿಖ್ಖರನ್ನು ಸೋಲಿಸಿ ಅವರನ್ನು ಅಲ್ಲಿಂದ ಕಾಲ್ತೆಗೆಯುವಂತೆ ಮಾಡಿದರು. ಮೂರನೇ ಕದನವು ಬಾದ್ರೋವಾಲ್‌ನಲ್ಲಿ ನಡೆದು ಇಂಗ್ಲೀಷ್‌ರಿಗೆ ನಿರ್ಣಾಯಕವಾಗಿ ಸೋತುಹೋದರು. ಬ್ರಿಟೀಷರು ಲಾಹೋರ್‌ನ್ನು ಆಕ್ರಮಿಸಿ ಸಿಖ್ಖರನ್ನು ಸಂಧಿ ಮಾಡಿಕೊಳ್ಳಲು ಒತ್ತಾಯಿಸಿದರು. ಲಾಹೋರ್ ಒಪ್ಪಂದದಿಂದ ಸಿಖ್ಖರು ಬ್ರಿಟೀಷರು ಹೊಂದಿದ್ದ ಸಟ್ಲೇಜ್‌ನ ಕಡೆಯೂ ಎಲ್ಲಾ ಪ್ರದೇಶಗಳನ್ನು ಬ್ರಿಟೀಷರಿಗೆ ಬಿಟ್ಟುಕೊಟ್ಟರು. ಸಟ್ಲೇಜ್ ಮತ್ತು ಬೀಸ್ ನಡುವಿನ ಪ್ರದೇಶಗಳಾದ ಜಲಂದರ್‌ದೋಲಬ್‌ನ್ನು ಸಹ ಬಿಟ್ಟುಕೊಟ್ಟರು. ಇದಲ್ಲದೇ ತಮ್ಮ ಸೈನ್ಯದ ಬಲವನ್ನು ಕಡಿಮೆ ಮಾಡಿಕೊಳ್ಳಲು ಸುಮಾರು ಒಂದೂವರೆಕೋಟಿ ರೂಪಾಯಿಗಳನ್ನು ಕೊಡಲು ಒಪ್ಪಿಕೊಂಡರು. ಆದರೆ ಇದಕ್ಕೆ ಬದಲಾದ ಒಂದು ತೀರ್ಮಾನವನ್ನು ತೆಗೆದುಕೊಂಡು, ಇಂಗ್ಲೀಷರು ಕಾಶ್ಮೀರವನ್ನು ಗುಲಾಬ್‌ಸಿಂಗನಿಗೆ ಒಂದು ಕೋಟಿ ರೂಪಾಯಿಗೆ ಮಾರಿದರು. ಇದು ಇಂಗ್ಲೀಷರಿಗೆ ಬಹಳಷ್ಟು ಸಹಾಯಕವಾಯಿತೆನ್ನಬಹುದು. ಸರ್ಕಾರವನ್ನು ಯುವಕ ದಲೀಪ್‌ಸಿಂಗನಿಗೆ ನೀಡಿ ಲಾಲ್‌ಸಿಂಗನನ್ನು ಮಂತ್ರಿಯನ್ನಾಗಿ ಮಾಡಿ ಒಬ್ಬ ಬ್ರಿಟೀಷ್ ರೆಸಿಡೆಂಟ್‌ರ ಮೇಲುಸ್ತುವಾರಿಯಲ್ಲಿ ಸರ್ಕಾರ ನಡೆಯುವಂತೆಯೂ ಮಾಡಿದರಲ್ಲದೇ ಬ್ರಿಟೀಷರ ಒಂದು ಸೈನ್ಯವು ಲಾಹೋರ್‌ನಲ್ಲಿ ಇರುವಂತೆಯೂ ತೀರ್ಮಾನವಾಯಿತು.

*ಎರಡನೇ ಸಿಖ್ ಯುದ್ಧ (1848-49)*

ಪಂಜಾಬ್‌ನಲ್ಲಿ ಲಾರ್ಡ್ ಹಾರ್ಡಿಂಜ್‌ರು ಮಾಡಿದ ವ್ಯವಸ್ಥೆಯ ಸರಿಯಾದ ರೀತಿಯಲ್ಲಿ ಕಾರ್ಯನಿರ್ವಹಿಸದೇ ಸಿಖ್ ರಾಜರು ಬ್ರಿಟೀಷ್ ರೆಸಿಡೆಂಟ್‌ರು ತಮ್ಮ ಮೇಲೆ ಹೊಂದಿದ ನಿಯಂತ್ರಣವನ್ನು ಧಿಕ್ಕರಿಸಿದರು. 1848ರಲ್ಲಿ ಮುಲ್ತಾನಿನ ಗೌರ್ನರಾದ ಮುಲ್ಕ್‌ರಾಜನು ದಂಗೆಯೆದ್ದನು. ಇದೇ ಸಮಯದಲ್ಲಿದ್ದ ಬನ್ನುವಿನಲ್ಲಿದ್ದ ಸರ್‌ಹರ್‌ಬರ್ಟ್ ಎಡ್ವರ್ಡ್ಸ್ ಎಂಬ ಇಂಗ್ಲೀಷ್ ಅಧಿಕಾರಿಯು ಒಂದು ಸಣ್ಣ ಸೈನ್ಯ ಮುಲ್ಕ್‌ರಾಜನು ಮೇಲರಗಿ ಅವನನ್ನು ಮುತ್ತಿಗೆ ಹಾಕಿದನು. ಈ ವಿಷಯವು ಲಾಹೋರನ್ನು ತಲುಪಿದಾಗ ಸರ್ಕಾರವು ಬ್ರಿಟೀಷರ ಸಹಾಯಕ್ಕೆ ಒಂದು ಸೈನ್ಯವನ್ನು ಶೇರ್‌ಸಿಂಗನ ನೇತೃತ್ವದಲ್ಲಿ ಕಳುಹಿಸಿದರು. ಆದರೆ ಶೇರ್‌ಸಿಂಗನು ಮುಲ್ಕ್‌ರಾಜನ ಕಡೆಗೆ ಹೋಗಿ ಸೇರಿಕೊಂಡನು. ಇದೇ ಸಮಯದಲ್ಲಿ ದಂಗೆಯು ಪಂಜಾಬ್ ಪ್ರಾಂತ್ಯದ ಸುತ್ತಲೂ ಹರಡಿತು. ಇದನ್ನು ನೋಡಿದ ಡಾಲ್‌ಹೌಸಿಯು ಸಿಖ್ಖರ ವಿರುದ್ಧ ಯುದ್ಧ ಘೋಷಿಸಿದನು.

ಲಾರ್ಡ್‌ಗೋಫನು ತನ್ನ ಸೈನ್ಯದ ನೇತೃತ್ವವನ್ನು ವಹಿಸಿ ರಾಮನಗರ್‌ನಲ್ಲಿ ಶೇರ್‌ಸಿಂಹನ ಮೇಲೆ ಧಾಳಿ ಇಟ್ಟನು. ಆದರೆ ಯಾವುದೇ ರೀತಿಯಲ್ಲೂ ಅದು ಪ್ರಯೋಜನವಿಲ್ಲದಂತಾಯಿತು. ನಂತರ ಅವನು ಜನವರಿ 1849ರಲ್ಲಿ ಜಲಿಯನ್‌ವಾಲಾದಲ್ಲಿ ಸಿಖ್ ಸೈನ್ಯದ ಮೇಲೆ ಯುದ್ಧ ಸಾರಿದನು. ಸಿಖ್ಖರು ಧೈರ್ಯವಾಗಿ ಯುದ್ಧಮಾಡಿದರು. ಘೋರಯುದ್ಧ ಮಾಡಿ ಬ್ರಿಟೀಷ್ ಬ್ರಿಗೇಡನ್ನು ಸೋಲಿಸಿ ಸಾಕಷ್ಟು ನಷ್ಟವನ್ನುಂಟುಮಾಡಿದರು. ನಂತರದಲ್ಲಿ ಗುಜರಾತ್‌ನ ಚೀನಾಬ್ ನದಿಯ ತೀರದ ಒಂದು ನಗರದಲ್ಲಿ ಒಂದು ನಿರ್ಣಾಯಕ ಯುದ್ಧವು ನಡೆಯಿತು. ಇಲ್ಲಿ ಲಾರ್ಡ್ ಗಫ್‌ನು ತನ್ನೆಲ್ಲಾ ಬುದ್ಧಿ ಚಾತುರ್ಯ ಮತ್ತು ಸೈನಿಕ ನೈಪುಣ್ಯತೆಯನ್ನು ಉಪಯೋಗಿಸಿ, ಸಿಖ್ಖರನ್ನು ಸೋಲಿಸಿ ತನ್ನ ಜಯಭೇರಿ ಸಾಧಿಸಿದನು.

ಈ ಯುದ್ಧದಿಂದಾಗಿ ಸ್ವತಂತ್ರವಾದ ಒಂದೇ ಒಂದು ರಾಜ್ಯವಾಗಿದ್ದ ಪಂಜಾಬ್, ಬ್ರಿಟೀಷರ ಸಾಮ್ರಾಜ್ಯಕ್ಕೆ ಸೇರಿ ಹೋಯಿತು. ಮಹಾರಾಜ ದಲೀಪ್‌ಸಿಂಗ್‌ನನ್ನು ತನ್ನ ರಾಜ್ಯದಿಂದ ದೂರಮಾಡಿ ಇಂಗ್ಲೇಂಡಿಗೆ ಕಳುಹಿಸಿದನಲ್ಲದೇ ವಾರ್ಷಿಕ 50,000 ಪೌಂಡ್‌ಗಳನ್ನು ಪಿಂಚಣಿಯಾಗಿ ಕೊಡುವ ವ್ಯವಸ್ಥೆ ಮಾಡಿದನಲ್ಲದೇ, ಮುಲ್ಕ್ ರಾಜನನ್ನು ಗಡಿಪಾರುಮಾಡಿ ಅವನ ಸಾವಿಗೆ ಕಾರಣರಾದರು. ಸಿಂಧ್ ರಾಜ್ಯವನ್ನು ಅಂದು ಸಿಂಧ್‌ನ ಅಮೀರರು ಎಂದು ಕರೆಯಲ್ಪಡುತ್ತಿದ್ದ ಕೆಲವು ಬಲೂಚಿ ಸಾಮಂತರು ಆಳುತ್ತಿದ್ದರು. ಅವರು ಸಿಂಧ್‌ನಲ್ಲಿ

ಮೂರು ರಾಜ್ಯಗಳನ್ನು ಅಂದರೆ ಖೈರ್‌ಪುರ, ಹೈದರಾಬಾದ್ ಮತ್ತು ಮೀರ್‌ಪುರಖಾಸ್‌ಗಳನ್ನು ಸ್ಥಾಪಿಸಿದರು. ಇವರು ಮೊದಲನೇ ಲಾರ್ಡ್ ಮಿಂಟೋನ ಕಾಲದಲ್ಲಿ ಭಾರತದ ಬ್ರಿಟೀಷ್ ಸರ್ಕಾರದೊಂದಿಗೆ ವ್ಯವಹಾರ ಮಾಡಿಕೊಳ್ಳಬೇಕಾಯಿತು. ಆ ಸಮಯದಲ್ಲಿ ಭಾರತಕ್ಕೆ ಫ್ರೆಂಚರಿಂದ ಅಪಾಯವಾಗುವುದಿತ್ತು. ಇದನ್ನರಿತ ಲಾರ್ಡ್ ಮಿಂಟೊ 1809ರಲ್ಲಿ ಸಿಂಧ್‌ನ ಅಮೀರರೊಂದಿಗೆ ಒಂದು ಒಪ್ಪಂದವನ್ನು ಮಾಡಿಕೊಂಡರು. ಈ ಒಪ್ಪಂದದ ಪ್ರಕಾರ ಅಮೀರರು ಫ್ರೆಂಚರು ತಮ್ಮ ಪ್ರದೇಶಗಳ ಮೇಲೆ ಹಾದು ಹೋಗಲು ಅವಕಾಶ ಕೊಡುವುದಿಲ್ಲವೆಂಬುದಕ್ಕೆ ಸಹಿ ಹಾಕಿದರು.

ಲಾರ್ಡ್ ವಿಲಿಯಂ ಬೆಂಟಿಂಕನ ಕಾಲದಲ್ಲಿ ಅಂದರೆ 1832ರಲ್ಲಿ ಬ್ರಿಟೀಷ್ ಸರ್ಕಾರ ಮತ್ತು ಸಿಂಧ್‌ನ ಅಮೀರರ ನಡುವೆ ಒಂದು ಒಪ್ಪಂದವೇರ್ಪಟ್ಟಿತು. ಈ ಒಪ್ಪಂದದ ರೀತ್ಯ ಸಿಂಧ್‌ನಲ್ಲಿ ಬ್ರಿಟೀಷರು ವ್ಯಾಪಾರದ ಕೆಲವು ಹಕ್ಕುಗಳನ್ನು ಪಡೆದುಕೊಂಡರು ಮತ್ತು ಅವರು ಸಿಂಧ್‌ನ ಮೂಲಕ ತಮ್ಮ ಯಾವುದೇ ಸೈನ್ಯವನ್ನು ತೆಗೆದುಕೊಂಡು ಹೋಗುವುದಿಲ್ಲವೆಂಬ ಶರತ್ತಿಗೆ ಒಪ್ಪಿಕೊಂಡರು. ಅಂದರೆ ಪ್ರಥಮ ಆಫ್ಘನ್‌ಯುದ್ಧದಲ್ಲಿ ತಮ್ಮ ಶರತ್ತಿನ ಒಪ್ಪಿಗೆಯ ವಿರುದ್ಧ, ತಮ್ಮ ಒಪ್ಪಿಗೆ ಮುರಿದು, ಸಿಂಧ್‌ನ ಮೂಲಕ ತಮ್ಮ ಸೈನ್ಯವನ್ನು ತೆಗೆದುಕೊಂಡು ಹೋದರು. ಈ ರೀತಿಯ ನಂಬಿಕೆ ದ್ರೋಹ ಮಾಡಿದರೂ ಸಹ ಅಮೀರರು ತಮ್ಮ ಮೇಲೆ ಸಾಕಷ್ಟು ತೊಂದರೆಗಳು ಬಂದರೂ ಬ್ರಿಟೀಷರಿಗೆ ನಿಯತ್ತಿನಿಂದ ನಡೆದುಕೊಂಡರು. ಆದರೆ ಯುದ್ಧದ ನಂತರ ಲಾರ್ಡ್ ಎಲೆನ್‌ಬರೋ ಸಿಂಧ್‌ನ ಮೇಲೆ ಸಲ್ಲದ ಆರೋಪ ಮಾಡಿದನು. ಅಂದರೆ ಯುದ್ಧದಲ್ಲಿ ಅಮೀರರುಇಂಗ್ಲೀಷರ ವಿರುದ್ಧ ಪಿತೂರಿ ಮಾಡುತ್ತಿದ್ದಾರೆಂದು ದೂರಿತ್ತರು. ಸರ್ ಚಾರ್ಲ್ಸ್ ನೇಪಿಯರನ್ನು ಹೆಚ್ಚು ಅಧಿಕಾರವನ್ನು ನೀಡಿ ಇದರ ಬಗ್ಗೆ ವಿಚಾರಣೆ ಮಾಡಲು ಕಳುಹಿಸಿದರು. ಆದರೆ ಸತ್ಯವೇನೆಂದರೆ ಬ್ರಿಟೀಷರು ಸಿಂಧ್‌ನ್ನು ಏನಾದರೂ ಮಾಡಿ ತಮ್ಮ ಆಡಳಿತಕ್ಕೆ ತೆಗೆದುಕೊಳ್ಳಬೇಕೆಂಬ ಮಹಾದಾಶೆಯನ್ನು ಹೊಂದಿದ್ದು, ತಮ್ಮ ವಾಣಿಜ್ಯ ದಾರಿಗಳಲ್ಲಿ ಸಿಂಧ್‌ನ್ನು ಒಂದು ಮಧ್ಯಸ್ಥಿಕೆ ರಾಜ್ಯವನ್ನಾಗಿ ಉಪಯೋಗಿಸಿಕೊಳ್ಳುವ ಪ್ರಥಮ ಹುನ್ನಾರವನ್ನು ಮಾಡಿಕೊಂಡಿದ್ದರು. ಎರಡನೇಯದಾಗಿ ಸಿಂಧೂ ನದಿಯು ವಾಣಿಜ್ಯದ ಹೆದ್ದಾರಿಯಾಗುವುದಾಗಿತ್ತು. ಮೂರನೆಯದಾಗಿ ಬ್ರಿಟೀಷ್ ಸರ್ಕಾರ ತನ್ನ ಗಡಿ ಭಾಗದಲ್ಲಿ ಸಿಂಧ್‌ನಂತಹ ಒಂದು ಅಶಕ್ತ ರಾಜ್ಯವನ್ನು ಇಟ್ಟುಕೊಳ್ಳಲು ಇಷ್ಟಪಡಲಿಲ್ಲ. ನಾಲ್ಕನೆಯದಾಗಿ ಬ್ರಿಟೀಷರು ಆಫ್ಘಾನಿಸ್ತಾನದಿಂದ ಹೊಂದಿದ ಸೋಲನ್ನು ಸರಿಗಟ್ಟಲು ಯಾವುದಾದರೂ ಒಂದು ಜಯ ಸಾಧಿಸಬೇಕೆನ್ನುವ ದೃಷ್ಟಿಯಿಟ್ಟುಕೊಂಡು ಸಿಂದ್‌ನ್ನು ತನ್ನ ವಶಪಡಿಸಿಕೊಳ್ಳುವ ಪ್ರಯತ್ನದಲ್ಲಿದ್ದನು. ಇದಲ್ಲದೇ ನೇಪಿಯರನು ಸಿಂಧ್‌ನ್ನು ವಶಪಡಿಸಿಕೊಳ್ಳುವ ನೀತಿಗೆ ಪ್ರಥಮ ರೂವಾರಿಯಾಗಿದ್ದನು. ಇವನ ಈ ಭಕ್ಷಣಾ ನೀತಿಯಿಂದ ಹಾಗೂ ಕಾರಣವಿಲ್ಲದ ಹಲವು ಬೇಡಿಕೆಗಳನ್ನು ಮುಂದಿಟ್ಟುಕೊಂಡು ಅಮೀರರನ್ನು ಯುದ್ಧದಲ್ಲಿ ತೊಡಗುವಂತೆ ಮಾಡಿದನು. ಸಿಂಧ್‌ನ ಅಮೀರರು ಬ್ರಿಟೀಷ್ ರೆಸಿಡೆನ್ಸಿಯನ್ನು ದಾಳಿ ಮಾಡುವ ಪ್ರಯತ್ನ ಮಾಡಿದರು. ಇದೇ ಕಾರಣವು ನೇಪಿಯರ್‌ಗೆ ಬೇಕಾಗಿತ್ತು. ಕೆಲವೇ ಕ್ಷಣಗಳಲ್ಲಿ ಯುದ್ಧ ಪ್ರಾರಂಭವಾಯಿತು. ಅಮೀರರು ಮಾಯಿಸಿ ಮತ್ತು ದಾಬೋಗಳಲ್ಲಿ ಸೋತುಹೋದರು. 1843ರಲ್ಲಿ ಸಿಂಧ್ ಪ್ರಾಂತ್ಯವನ್ನು ಬ್ರಿಟೀಷ್ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಲಾಯಿತು. ನಂತರ ಅಮೀರರನ್ನು ದೇಶಬಿಟ್ಟು ಗಡಿಪಾರು ಮಾಡಲಾಯಿತು.

## 2.6 ಇಂಗ್ಲೀಷರು ಮತ್ತು ಮೈಸೂರು ರಾಜ್ಯ

ಮೈಸೂರು ರಾಜ್ಯದಲ್ಲಿ ಹೈದರ್ ಆಲಿಯ ಏಳ್ಗೆಯು ಬ್ರಿಟೀಷ್‌ರ ಅಸ್ತಿತ್ವಕ್ಕೆ ಅಪಾಯಕಾರಿಯಾಗಿತ್ತು. ಆದ್ದರಿಂದ ಇಂಗ್ಲೀಷರು ಹೈದರನ ವಿರುದ್ಧ ಹೋರಾಡಲು ಹೈದರಾಬಾದಿನ ನಿಜಾಮ ಮತ್ತು ಮರಾಠರೊಂದಿಗೆ ಒಂದು ಮೈತ್ರಿಕೂಟವನ್ನು ಸ್ಥಾಪಿಸಿದರು. ಆದರೆ ಹೈದರನು ತನ್ನ ಮುತ್ಸುದ್ಧಿತನದಿಂದ ಮರಾಠರನ್ನು ಕೊಂಡು ಕೊಂಡು, ಇಂಗ್ಲೀಷರೊಂದಿಗೆ ಆಗುತ್ತಿದ್ದ ಹೈದರಾಬಾದಿನ ನಿಜಾಮನನ್ನು ಸ್ನೇಹದಿಂದ ಬೇರ್ಪಡಿಸಿದನು. ನಂತರ ನಿಜಾಮ ಮತ್ತು ಹೈದರ್‌ನ ಮೈತ್ರಿಯ ಸೈನ್ಯವನ್ನು ಬ್ರಿಟೀಷರ ವಿರುದ್ಧ

ಪ್ರಥಮ ಆಂಗ್ಲೋ ಮೈಸೂರು ಯುದ್ಧಕ್ಕೆ ತಳ್ಳಿದನು. ಆದರೆ ಈ ಸೈನ್ಯವು ಕರ್ನಲ್‌ಸ್ಮಿತ್‌ನ ಸೈನ್ಯದಿಂದ 1767ರಲ್ಲಿ ತ್ರಿಣೋಮಾಲೈನಲ್ಲಿ ಸೋಲನ್ನು ಅನುಭವಿಸಬೇಕಾಯಿತು. ನಿಜಾಮನು ಹೈದರನನ್ನು ಬಿಟ್ಟು ಇಂಗ್ಲೀಷ್‌ರೊಂದಿಗೆ ಶಾಂತಿ ಒಪ್ಪಂದವನ್ನು ಮಾಡಿಕೊಂಡನೂ ಆದರೆ ಹೈದರನು ಧೈರ್ಯವನ್ನು ಕಳೆದುಕೊಳ್ಳದೇ ಮದ್ರಾಸ್‌ನ ಹತ್ತಿರ ಪ್ರತ್ಯಕ್ಷನಾದನು. ಇದರಿಂದ ಭಯಬೀತರಾದ ಮದ್ರಾಸ್ ಸರ್ಕಾರವು ಹೈದರನೊಂದಿಗೆ 1769ರಲ್ಲಿ ಒಂದು ಮದ್ರಾಸ್ ಒಪ್ಪಂದವನ್ನು ಮಾಡಿಕೊಂಡಿತು. ಈ ಒಪ್ಪಂದದ ಪ್ರಕಾರ ತಾನು ವಶಪಡಿಸಿಕೊಂಡ ಮೈಸೂರಿನ ಎಲ್ಲಾ ಪ್ರದೇಶಗಳನ್ನು ವಾಪಸ್ಸು ಕೊಡಲು ಬ್ರಿಟೀಷ್ ಸರ್ಕಾರ ಒಪ್ಪಿಕೊಂಡಿತಲ್ಲದೇ ಯಾವುದೇ ಯುದ್ಧದಲ್ಲಿ ಪರಸ್ಪರ ರಕ್ಷಣೆಗೆ ಬರಬೇಕೆನ್ನುವುದಕ್ಕೂ ಸಹ ಸಹಿ ಮಾಡಲಾಯಿತು.

ಹೈದರ್ ಅಲಿ, ನಿಜಾಮ ಮತ್ತು ಮರಾಠರ ಮೈತ್ರಿಯುತ ಪ್ರಯತ್ನವು ದ್ವಿತೀಯ ಆಂಗ್ಲೋ ಮೈಸೂರು ಯುದ್ಧಕ್ಕೆ ಕಾರಣವಾಗಿ ಇದರಿಂದಾಗಿ ಇಂಗ್ಲೀಷರನ್ನು ಅಶಕ್ತರಾಗಿ ಮಾಡಲು ಈ ಪ್ರಯತ್ನವು ಮುಂದಾಯಿತು. ನಿಜಾಮನು ಬ್ರಿಟೀಷರು 1768ರಲ್ಲಿ ಒಪ್ಪಿಕೊಂಡಂತೆ ತನಗೆ ಕೊಡಬೇಕಾದ ಏಳು ಲಕ್ಷ ರೂಪಾಯಿಗಳನ್ನು ಕೊಡಲಿಲ್ಲವಾದ್ದರಿಂದ ಕೋಪಗೊಂಡಿದ್ದನು. ಇದಕ್ಕೋಸ್ಕರವೇ ಕರ್ನಾಟಿಕದ ನವಾಬನಿಗೆ ಸಹಾಯ ಮಾಡಿ ತಂಜಾವೂರು ಮತ್ತು ನಿಜಾಮನ ಸಂಬಂಧಿಯಿಂದ ಗುಂಟೂರನ್ನು ತೆಗೆದುಕೊಳ್ಳುವಂತೆಯೂ ಸಹ ಸಹಾಯ ಮಾಡಿದನು. 1771ರಲ್ಲಿ ಮರಾಠರು ಹೈದರನನ್ನು ಆಕ್ರಮಿಸಲು ಪ್ರಯತ್ನಿಸಿದಾಗ ಒಪ್ಪಂದದಂತೆ ಇಂಗ್ಲೀಷರು ಅವನ ಸಹಾಯಕ್ಕೆ ಬರಲಿಲ್ಲವಾಗಿ ಹೈದರ್ ಕೋಪಗೊಂಡಿದ್ದನು. ಇಂಗ್ಲೀಷರು ಮರಾಠರ ಆಂತರಿಕ ವಿಷಯಗಳಲ್ಲಿ ಪ್ರವೇಶ ಮಾಡಿದ್ದುದರಿಂದ ಇಂಗ್ಲೀಷ್ ಮತ್ತು ಮರಾಠರ ನಡುವೆ ಪ್ರಥಮ ಯುದ್ಧ ಪ್ರಾರಂಭವಾಯಿತು. ಆದುದರಿಂದ ಹೈದರ್‌ಅಲಿಯು ನಿಜಾಮ ಮತ್ತು ಮರಾಠರಲ್ಲಿಯು ಒಂದೇ ಸಮಾನ ಕಾರಣವನ್ನು ಮುಂದೆ ಮಾಡಿಕೊಂಡು ಅವರಲ್ಲಿ ಸ್ನೇಹ ಮಾಡಿಕೊಂಡು ಮೂರೂ ಜನರೂ ಸಹ ಇಂಗ್ಲೀಷರ ವಿರುದ್ಧ ಹೋರಾಟ ಮಡೆಸಲು ಒಪ್ಪಿಕೊಂಡರು. ಜುಲೈ 1780ರಲ್ಲಿ ಹೈದರನು ಕರ್ನಾಟಿಕದ ಮೇಲೆ ಧಾಳಿ ನಡೆಸಿದನು. ಹೈದರನ ಮಗ ಟಿಪ್ಪುವೂ ಕಾಂಚೀವರಂನ ಹತ್ತಿರ ಕರ್ನಲ್ ಬೈಲಿಯ ನೇತೃತ್ವದ ಸೈನ್ಯವನ್ನು ನಾಶಪಡಿಸಿದನು. ಇದನ್ನು ಗಮನಿಸಿದ ಇಂಗ್ಲೀಷ್ ಅಧಿಕಾರಿ ಮನ್ರೋನು ಮದರಾಸಿಗೆ ಹೋಗಲು ತೀರ್ಮಾನಿಸಿದನು. ಹೈದರನು ಆರ್ಕಾಟನ್ನು ವಶಪಡಿಸಿಕೊಂಡನಲ್ಲದೇ ಇಂಗ್ಲೀಷರನ್ನು ಬಹಳಷ್ಟು ಕಷ್ಟದಲ್ಲಿ ಸಿಲುಕಿದನು. ಆದರೂ ಇಂಗ್ಲೀಷರು ವ್ಯವಹಾರ ಚಾತುರ್ಯವನ್ನು ತೋರಿದರು. ಅವರು ನಿಜಾಮ ಮತ್ತು ಮರಾಠರೊಂದಿಗೆ ಶಾಂತಿ ಒಪ್ಪಂದವನ್ನು ಮಾಡಿಕೊಂಡರು. ಇದರಿಂದಾಗಿ ಹೈದರ್‌ಅಲಿ ಒಬ್ಬಂಟಿಗನಾದನು. ಒಬ್ಬನೇ ಯುದ್ಧ ಮಾಡಲು ಕಷ್ಟವಾಯಿತು. ಪೋರ್ಟೋನೋವೋನಲ್ಲಿ 1781ರಲ್ಲಿ ಸರ್ ಐರ್‌ಕೂಟನು ಹೈದರನನ್ನು ಸೋಲಿಸಿದನು ಮತ್ತು ವಾಂಡಿವಾಶನ್ನು ಆಕ್ರಮಿಸಿಕೊಂಡ ಟಿಪ್ಪುವು ಅದನ್ನು ಪುನಃ ಬಿಡಲು ಒಪ್ಪಿಕೊಂಡನು ಡಿಸೆಂಬರ್ 7, 1782ರಲ್ಲಾದ ಹೈದರನ ಅಂತ್ಯದವರೆಗೆ ಯುದ್ಧವು ಸಣ್ಣಪುಟ್ಟ ಲಾಭ ನಷ್ಟಗಳೊಂದಿಗೆ ಯುದ್ಧವು ಮುಂದುವರೆಯಿತು. ಟಿಪ್ಪು ಪುನಃ ಯುದ್ಧವನ್ನು ಎರಡು ವರ್ಷಗಳ ಕಾಲ ಮುಂದುವರೆಸಿದನು. ಇದು ಎರಡೂ ಪಕ್ಷಗಳೂ ಸಹ ನಿಶಕ್ತರಾಗುವವರೆಗೆ ಮುಂದುವರೆಯಿತು. ಈ ಯುದ್ಧವು ಮಾರ್ಚ್7,1784ರಲ್ಲಿ ಮಾಡಿಕೊಂಡ ಮಂಗಳೂರು ಒಪ್ಪಂದದೊಂದಿಗೆ ಕೊನೆಗೊಂಡಿತು. ಇವರು ತಾವು ತಮ್ಮ ಪ್ರದೇಶಗಳನ್ನು ಹಂಚಿಕೊಂಡರಲ್ಲದೇ ಮತ್ತು ಯುದ್ಧ ಖೈದಿಗಳನ್ನು ವಿನಿಮಯ ಮಾಡಿಕೊಂಡರು.

1790-92ರಲ್ಲಿ ಮೂರನೇ ಆಂಗ್ಲೋ ಮೈಸೂರು ಯುದ್ಧವು ಕಾರ್ನ್‌ವಾಲೀಸನು ಕಂಪನಿಯ ಗೌರ್ನರ್ ಜನರಲ್‌ರಾಗಿ ಭಾರತಕ್ಕೆ ಬಂದನು. ಇಂಗ್ಲೀಷರಿಗೆ ಕಟ್ಟಾ ವೈರಿಯಾಗಿದ್ದ ಟಿಪ್ಪುಸುಲ್ತಾನನು ಫ್ರಾನ್ಸ್ ಮತ್ತು ಪರ್ಶಿಯಾ ದೇಶಗಳಿಂದ ಸಹಾಯ ಪಡೆದು ಇಂಗ್ಲೀಷರ ಮೇಲೆ ಯುದ್ಧ ಮಾಡಲು ತವಕದಿಂದಿದ್ದನು. ಕಾರ್ನ್‌ವಾಲೀಸನು ಟಿಪ್ಪುವನ್ನು ಶಿಕ್ಷಿಸಿ ಸೋಲಿಸಲು ನಿರ್ಧರಿಸಿದನು. ಡಿಸೆಂಬರ್ 1784ರಲ್ಲಿ ಟಿಪ್ಪುವು ಇಂಗ್ಲೀಷರ ಅಧೀನದ ತಿರುವಾಂಕೂರಿನ ರಾಜನ ಮೇಲೆ ದಾಳಿ ನಡೆಸಿದನು. ಕಾರ್ನ್‌ವಾಲೀಸನು ನಿಜಾಮನು ಮತ್ತು ಮರಾಠರೊಂದಿಗೆ ಮಾತುಕತೆ ನಡೆಸಿ, ಒಪ್ಪಂದ ಮಾಡಿಕೊಂಡು ಟಿಪ್ಪುವಿನ ವಿರುದ್ಧ ಯುದ್ಧ ಘೋಷಿಸಿದನು.

ಟಿಪ್ಪುವು ಎರಡು ವರ್ಷ ಯುದ್ಧ ನಡೆಸಿದರೂ ಸಹ ಜಯ ಸಾಧಿಸಲಿಲ್ಲ. ಕಾರ್ನ್‌ವಾಲೀಸನು ಹಲವು ಕೋಟೆ ಕೊತ್ತಲಗಳನ್ನು ವಶಪಡಿಸಿಕೊಂಡು ಶ್ರೀರಂಗಪಟ್ಟಣದ ಕಡೆಗೆ ಸೈನ್ಯ ನಡೆಸಿದನು. ಆದ್ದರಿಂದ ಟಿಪ್ಪುವು ಒಂದು ಶಾಂತಿ ಒಪ್ಪಂದಕ್ಕೆ ಒಪ್ಪಿಕೊಂಡನು. ಇದರಿಂದಾಗಿ ಮಾರ್ಚಿ1792ರಲ್ಲಿ ಶ್ರೀರಂಗಪಟ್ಟಣ ಒಪ್ಪಂದವನ್ನು ಮಾಡಿಕೊಳ್ಳಲಾಯಿತು. ಟಿಪ್ಪುವು ತನ್ನ ಅರ್ಧ ರಾಜ್ಯವನ್ನು ಬಿಟ್ಟುಕೊಡಬೇಕೆಂದೂ, 3ಲಕ್ಷ ಡಾಲರ್ ಹಣವನ್ನು ಕೊಡಬೇಕೆಂದೂ ಮತ್ತು ತನ್ನ ಇಬ್ಬರು ಮಕ್ಕಳನ್ನು ಒತ್ತೆಯಾಳುಗಳಾಗಿ ಕಳಿಸಲು ಒಪ್ಪಿಕೊಂಡನು.

1799ರಲ್ಲಿ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧವು ವೆಲ್ಲೆಸ್ಲಿಯು ಗೌರ್‍ನರ್ ಜನರಲ್‌ನಾಗಿದ್ದಾಗ ಪ್ರಾರಂಭವಾಯಿತು. ಆದರೂ ಟಿಪ್ಪುವು ತಮಗಾದ ಅವಮಾನಕ್ಕೆ ಸೇಡು ತೀರಿಸಿಕೊಳ್ಳಲು ಪುನಃ ಯುದ್ಧ ಮಾಡಲು ತಯಾರಿ ನಡೆಸುತ್ತಿದ್ದನು. ಆದರೆ ವೆಲ್ಲಸ್ಲಿಯು ಟಿಪ್ಪುವನ್ನು ಸಂಪೂರ್ಣವಾಗಿ ನಾಶಮಾಡಲು ನಿರ್ಧರಿಸಿದಂತಿತ್ತು. ಜೊತೆಗೆ ಇಂಗ್ಲೀಷರು ನಿಜಾಮನನ್ನು ತಮ್ಮೆಡೆಗೆ ಸೆಳೆದುಕೊಂಡರು ಮತ್ತು ಮರಾಠರನ್ನು ತಟಸ್ಥರಾಗಿಸುವಲ್ಲಿ ಯಶಸ್ವಿಯಾದರು ಇದಲ್ಲದೆ ನಂತರ ಇಂಗ್ಲೀಷ್‌ರು ಮೈಸೂರಿನ ಮೇಲೆ ದಾಳಿ ಮಾಡಿದರು. 1799ರ ಮೇನಲ್ಲಿ ಶ್ರೀರಂಗಪಟ್ಟಣವನ್ನು ಆಕ್ರಮಿಸಿದರು. ಟಿಪ್ಪುವು ಯುದ್ಧದಲ್ಲಿ ಮಡಿದನು ಅವನ ಮಗನು ಇಂಗ್ಲೀಷರಿಗೆ ಶರಣಾಗತನಾದನು. ಇಂಗ್ಲೀಷರು ಅವನಿಗೆ ಕೆಲವು ಪ್ರದೇಶಗಳನ್ನು ಕೊಟ್ಟರು ನಂತರ ಮೈಸೂರನ್ನು ಹಿಂದಿನ ಮೈಸೂರು ಒಡೆಯರ ವಂಶಕ್ಕೆ ಬಿಟ್ಟುಕೊಟ್ಟರು. ಕೃಷ್ಣರಾಜ ಒಡೆಯರ್ ಇಂಗ್ಲೀಷರ ಸಾರ್ವಭೌಮಾಧಿಕಾರವನ್ನು ಒಪ್ಪಿಕೊಂಡು ಅವರೊಂದಿಗೆ ಸಹಾಯಕ ಸೈನ್ಯ ಪದ್ಧತಿಗೆ ಸಹಿ ಹಾಕಿದನು.

## 2.7 ಬ್ರಿಟೀಷ್ ಚಕ್ರಾಧಿಪತ್ಯ ಸ್ಥಾಪನೆ

ಈ ಮೇಲೆ ಅಧ್ಯಯನ ನಡೆಸಿದ ಘಟನೆಗಳು ಇಂಗ್ಲೀಷರು ಹೇಗೆ ತಮ್ಮ ನೀತಿಯಿಂದ ಯುದ್ಧ, ಶಾಂತಿ ಒಪ್ಪಂದಗಳಿಂದ ಹಲವು ರಾಜ್ಯಗಳನ್ನು ತಮ್ಮ ವಶಪಡಿಸಿಕೊಂಡು ಭಾರತದ ಪೂರ್ಣ ಯಜಮಾನರಾದರು ಎಂಬುದು ತಿಳಿಯುತ್ತದೆ. ಬ್ರಿಟೀಷರು ಬಂಗಾಳದ ಒಂದು ಸುಭಾದಿಂದ ತಮ್ಮ ನಿಯಂತ್ರಣವನ್ನು ಪ್ರಾರಂಭಿಸಿ ಪ್ಲಾಸಿಕದನ, ಬಕ್ಸಾರ್ ಕದನಗಳನ್ನು ಮಾಡಿ ಇಡೀ ಬಂಗಾಳ ಪ್ರಾಂತ್ಯದ ಯಜಮಾನರಾದರಲ್ಲದೇ, ಮೈಸೂರು ಮರಾಠ ರಾಜ್ಯ, ಪಂಜಾಬ್, ಸಿಂಧ್ ಮುಂತಾದ ರಾಜ್ಯಗಳನ್ನು ಸಹ ತಮ್ಮ ವಶಪಡಿಸಿಕೊಂಡು ಸಹಾಯಕ ಸೈನ್ಯ ಪದ್ಧತಿ, ದತ್ತು ಮಕ್ಕಳಿಗೆ ಹಕ್ಕಿಲ್ಲ ಮತ್ತು ಅನೇಕ ಯುದ್ಧಗಳ ಕುಟಿಲೋಪಾಯಗಳಿಂದ ಎಲ್ಲಾ ಪ್ರದೇಶಗಳನ್ನು ತಮ್ಮ ವಶಪಡಿಸಿಕೊಂಜು ದೇಶಿಯ ರಾಜರ ಮೇಲೆ ಪ್ರಭುತ್ವ ಸಾಧಿಸಿ, ಹಣಕಾಸಿನ ಸಾಮ್ರಾಜ್ಯವನ್ನು ವೃದ್ಧಿಸಿಕೊಂಡು 1856ರಲ್ಲಿ ಕೊನೆಯ ರಾಜ್ಯ ಔದ್‌ನ್ನು ತಮ್ಮ ವಶಪಡಿಸಿ, ಬ್ರಿಟೀಷ್ ಚಕ್ರಾಧಿಪತ್ಯವನ್ನ ಭಾರತದಲ್ಲಿ ಸ್ಥಾಪಿಸಿದರು.

## 2.8 ಘಟಕದ ಸಾರಾಂಶ

ಈ ಘಟಕದ ಅಧ್ಯಯನದ ನಂತರ ನಾವು

- ಬ್ರಿಟೀಷರು ಹೇಗೆ ವ್ಯಾಪಾರಿಗಳಾಗಿ ಭಾರತಕ್ಕೆ ಬಂದರು
- ಅವರು ತಮ್ಮ ವ್ಯಾಪಾರೀಕೋಟೆಗಳನ್ನು ಸ್ಥಾಪಿಸಿಕೊಳ್ಳಲು ಹೇಗೆ ಪರವಾನಗಿ ಪಡೆದರು.
- ಅವರು ಹೇಗೆ ಸಂದಾನಗಳು ಮತ್ತು ಸ್ನೇಹ ಒಪ್ಪಂದಕ್ಕೆ ಸಹಿ ಹಾಕಿದರು.
- ಅವರು ಹೇಗೆ ದೇಶೀಯ ರಾಜರೊಂದಿಗೆ ಯುದ್ಧ ಮತ್ತು ಸ್ನೇಹ ಮಾಡಿಕೊಂಡರು.

- ತಮ್ಮ ದತ್ತು ಮಕ್ಕಳಿಗೆ ಹಕ್ಕಿಲ್ಲ ಮತ್ತು ಸಹಾಯಕ ಸೈನ್ಯ ಪದ್ಧತಿಗಳಿಂದ ಹೇಗೆ ಅನೇಕ ಪ್ರದೇಶಗಳನ್ನು ತಮ್ಮದಾಗಿಸಿಕೊಂಡರು ಮತ್ತು
- ಭಾರತದಲ್ಲಿ ಬ್ರಿಟೀಷ್ ಚಕ್ರಾಧಿಪತ್ಯವನ್ನು ಹೇಗೆ ಕಟ್ಟಿದರು ಎಂಬ ವಿಷಯಗಳನ್ನು ತಿಳಿದುಕೊಂಡೆವು.

## 2.9 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಬ್ರಿಟೀಷರು ಮತ್ತು ದೇಶೀಯ ರಾಜರುಗಳ ನಡುವಿನ ಸಂಬಂಧವನ್ನು ವಿವರಿಸಿ.
2. ಬ್ರಿಟೀಷರು ಭಾರತದಲ್ಲಿ ಸಾಮ್ರಾಜ್ಯ ಸ್ಥಾಪಿಸಲು ಯಾವ ಯಾವ ತಂತ್ರಗಳನ್ನು ಉಪಯೋಗಿಸಿದರು?ವಿವರಿಸಿ.

## 2.10 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


1. Prasad. L.V. : History of Modern India
2. Hansraj : Modern India
3. Agarwala : History of Freedom Movement in India
4. Sumit Sarkar : History of Modern India


ಡಾ. ಎ. ಸೋಮಶೇಖರ್

## ಘಟಕ-3 ಭಾರತದಲ್ಲಿ ಬ್ರಿಟೀಷರ ಆರ್ಥಿಕ ಪ್ರಭಾವ

*ವಿಷಯಸೂಚಿ*



## 3.0 ಉದ್ದೇಶಗಳು

ಈ ಘಟಕದ ಅಧ್ಯಯನದಿಂದ ನಾವು

- ಭಾರತಕ್ಕೆ ಬ್ರಿಟೀಷರ ಆಗಮನ ಮತ್ತು ಬ್ರಿಟೀಷರು ಭಾರತದಲ್ಲಿ ಬಂದು ನೆಲೆಸಿದ ಬಗ್ಗೆ ತಿಳಿಯುತ್ತೇವೆ.
- ಕೃಷಿ ವ್ಯವಸ್ಥೆ, ಕೈಗಾರಿಕೊಧ್ಯಮ, ವಿದೇಶಿ ವ್ಯಾಪಾರ ಮತ್ತು ಇತರೇ ಕ್ಷೇತ್ರಗಳಲ್ಲಿ ಬ್ರಿಟೀಷರ ಆರ್ಥಿಕ ನೀತಿಯನ್ನು ಅರ್ಥ ಮಾಡಿಕೊಳ್ಳುತ್ತೇವೆ.
- ಭಾರತದಲ್ಲಿ ಬ್ರಿಟೀಷರ ಆರ್ಥಿಕ ನೀತಿಯ ಪ್ರಭಾವವನ್ನು ಅರಿತುಕೊಳ್ಳುತ್ತೇವೆ.

## 3.1 ಘಟಕದ ಪೀಠಿಕೆ

ಬ್ರಿಟೀಷರು ಭಾರತಕ್ಕೆ ವ್ಯಾಪಾರಗಾರರಾಗಿ ಬಂದು ಇಲ್ಲಿ ತಮ್ಮ ರಾಜಕೀಯ ಶಕ್ತಿಯನ್ನು ಬೆಳಸಿಕೊಂಡರೂ ಸಹ ತಮ್ಮ ವ್ಯಾಪಾರೀ ಬಾವನೆಯನ್ನು ಬಿಟ್ಟುಕೊಡಲಿಲ್ಲ. ಭಾರತದಲ್ಲಿ ಆರ್ಥಿಕ ಅಭಿವೃದ್ಧಿಯನ್ನು ಮತ್ತು ದೇಶದ ಏಳ್ಗೆಯನ್ನು ಗಮನಿಸದೇ ಈ ದೇಶದ ಜನರನ್ನು ಸಾಕಷ್ಟು ರೀತಿಯಲ್ಲಿ ತೊಂದರೆಕೊಟ್ಟು ತಮ್ಮ ಉಪಯೋಗಕ್ಕಾಗಿ ಈ ಸಂದರ್ಭವನ್ನು ಉಪಯೋಗಿಸಿಕೊಂಡರು. ಬ್ರಿಟೀಷರು ಭಾರತದ ದೇಶೀಯ ಕೈಗಾರಿಕೆಗಳನ್ನು ಹಾಳು ಮಾಡಿದರಲ್ಲದೇ ಗ್ರಾಮೀಣ ನಿರುದ್ಯೋಗಕ್ಕೆ ಕಾರಣರಾದರು. ಗ್ರಾಮೀಣ ಸಾಲಭಾದೆಯು ಬಹಳಷ್ಟು ರೀತಿಯಲ್ಲಿ ಹೆಚ್ಚಾಗಿ ಹೋಯಿತು. ಕೃಷಿ ಕ್ಷೇತ್ರವನ್ನು ಅಭಿವೃದ್ಧಿಗೊಳಿಸಲು ಮತ್ತು ಮುಂದುವರೆಸಲು ಬ್ರಿಟೀಷರು ಯಾವುದೇ ರೀತಿಯಲ್ಲಿ ಪ್ರಯತ್ನ ಪಡಲಿಲ್ಲ ಹಾಗೂ ಗಮನಹರಿಸಲಿಲ್ಲ ಮತ್ತು ಕೃಷಿಕ್ಷೇತ್ರವನ್ನು ಆಧುನಿಕಗೊಳಿಸುವ ಪ್ರಯತ್ನವನ್ನು ಸಹ ಮಾಡಲಿಲ್ಲ. ಇದರ ಪರಿಣಾಮದಿಂದಾಗಿ ಕೃಷಿಕ್ಷೇತ್ರವು ಹಿಂದುಳಿದು ಅದು ದಿನದಿಂದ ದಿನಕ್ಕೆ ಹೆಚ್ಚಾಯಿತು. ಕೃಷಿಯ ಉತ್ಪಾದನೆಯು ಸಾಕಷ್ಟು ಕಡಿಮೆಯಾಗಿ, ಕೃಷಿಕರ ಸ್ಥಿತಿಯು ಸಾಕಷ್ಟು ತೊಂದರೆದಾಯಕವಾಗಿತ್ತು. ಎಲ್ಲಾ ರೀತಿಯ ಮಾರ್ಗಗಳು

ಮತ್ತು ನೀತಿಗಳಿಂದ ಭಾರತದ ಸಂಪತ್ತು ಸೋರಿಕೆಯಾಯಿತು. 1947ರ ಹೊತ್ತಿಗೆ ಬ್ರಿಟೀಷರು ಭಾರತವನ್ನು ಬಿಟ್ಟು ಹೋದಾಗ ಭಾರತೀಯರ ಬಡತನ ಮತ್ತು ನಿರಕ್ಷರತೆಯು ತಾಂಡವವಾಡುತ್ತಿತ್ತು. ದೇಶದಲ್ಲಿ ಯಾವುದೇ ರೀತಿಯ ಕೈಗಾರಿಕೀಕರಣವನ್ನು ಮಾಡಲು ಸಾಧ್ಯವಾಗಲಿಲ್ಲ, ಸ್ವಲ್ಪವೇ ಕೈಗಾರಿಕೀಕರಣವು ಆಗಿದ್ದು, ಇದರ ಪರಿಣಾಮದಿಂದಾಗಿ ಬಂಡವಾಳಶಾಹಿತ್ವ ಬೆಳವಣಿಗೆಯಾಗಿ ದೇಶದಲ್ಲಿ ಹಲವು ತೊಂದರೆಗಳು ಆಗಲು ಕಾರಣವಾಯಿತು.

## 3.2 ಬ್ರಿಟೀಷರ ಆರ್ಥಿಕ ನೀತಿಗಳು

ಬ್ರಿಟೀಷರು ಭಾರತದಲ್ಲಿ ತಮ್ಮ ಆಶೋತ್ತರಗಳನ್ನು ಈಡೇರಿಸಿಕೊಳ್ಳಲು ಹಲವು ರೀತಿಯ ಬ್ರಿಟೀಷರು ಅನೇಕ ರೀತಿಯ ಆರ್ಥಿಕ ನೀತಿಗಳನ್ನು ಜಾರಿಗೆ ತಂದರು. ಈ ವಿಷಯವನ್ನು ವಿಸ್ತಾರವಾಗಿ ತಿಳಿಯೋಣ.

### *3.2.1 ಕೃಷಿಕ್ಷೇತ್ರದ ವಾಣಿಜ್ಯೀಕರಣ*

ಭಾರತದಲ್ಲಿ ಬ್ರಿಟೀಷರ ಕೈಗಾರಿಕೆಗಳಿಗೆ ಉದ್ಯೋಗ ಒದಗಿಸಲು ಕೃಷಿಕ್ಷೇತ್ರದ ವಾಣಿಜ್ಯೀಕರಣ ಪ್ರಾರಂಭವಾಯಿತೆನ್ನಬಹುದು. ಗ್ರಾಮೀಣ ಭಾರತದ ಸ್ವಯಂ ಪರಿಪೂರ್ಣತೆಯಿಂದ ಪ್ರತ್ಯೇಕಿಸಿದರು. ಈ ಗ್ರಾಮಗಳು ಸ್ವಯಂಪರಿಪೂರ್ಣತೆಯನ್ನು ತೊಲಗಿಸಿ ಅವುಗಳು ಬೇರೆಯವರಿಗೆ ಅವಲಂಬಿತರಾಗುವಂತೆ ಮಾಡಿದರು. ಜನರು ಹೊಸ ಹೊಸ ನಗರ ಕೇಂದ್ರಗಳನ್ನು ಸ್ಥಾಪಿಸಿ ಜನರು ಅಲ್ಲಿಗೆ ಬಂದು ವ್ಯಾಪಾರ ಮಾಡಿಕೊಳ್ಳುವಂತೆ ಮಾಡಿದರು. ಈ ಕೃಷಿಕ್ಷೇತ್ರದ ವಾಣಿಜ್ಯೀಕರಣದ ಆರಂಭವು ಹೆಚ್ಚು ಹೆಚ್ಚು ಬೆಳೆಗಳನ್ನು ಬೆಳೆದು ತಮ್ಮ ಉಪಯೋಗಕ್ಕಿಂತ ಹೆಚ್ಚು ಹಣಗಳಿಸಲು ಈ ಬೆಳೆಗಳ ವ್ಯಾಪಾರವನ್ನು ಉಪಯೋಗಿಸಿಕೊಂಡರು. ಬ್ರಿಟೀಷರು ಈ ನೀತಿಯನ್ನು 19ನೇ ಶತಮಾನದ ಆದಿಭಾಗದಲ್ಲಿ ಪ್ರಾರಂಭಮಾಡಿ ಭಾರತವನ್ನು ಬಿಟ್ಟು ಹೋಗುವವರೆಗೂ ಮುಂದುವರೆಯಿತು. ಈ ಕೃಷಿ ಉತ್ಪನ್ನಗಳಲ್ಲಿ ಮೊದಲ ಸ್ಥಾನವನ್ನು ಹತ್ತಿ ಬೆಳೆ ತೆಗೆದುಕೊಂಡಿತ್ತು. ಬ್ರಿಟನ್‌ನಲ್ಲಿಯೂ ಹತ್ತಿ ಬಟ್ಟೆಯ ಕೈಗಾರಿಕೆಗೆ ಬಂದು ಕಚ್ಚಾ ಹತ್ತಿ ಮತ್ತು ಒಳ್ಳೆಯ ಪ್ರಮಾಣದ ಹತ್ತಿಯ ಅತ್ಯಾವಶ್ಯಕವಾಗಿತ್ತು. ಇದರಿಂದ ಭಾರತದಲ್ಲಿ ಹೆಚ್ಚು ಹೆಚ್ಚು ಹತ್ತಿ ಬೆಳೆಯ ವಾಣಿಜ್ಯೀಕರಣವು ಹೆಚ್ಚಾಯಿತು. ಹತ್ತಿ ಬೆಳೆಯ ಭೂಮಿಯ ವಿಸ್ತರಣೆ ಮಾಡಿದರಲ್ಲದೇ ಹತ್ತಿ ಬೆಳೆಯನ್ನು ಹೆಚ್ಚು ಮಾಡುವ ಬೆಳೆಯ ವಿವಿಧ ರೂಪಗಳನ್ನು ಬಳಸಿಕೊಂಡರು. ಹತ್ತಿಯ ನಂತರವಲ್ಲಿ ನೀಲಿ ಬೆಳೆ, ಟೀ, ಕಾಫಿ, ಸೇಬು ಮುಂತಾದುವನ್ನು ಹೆಚ್ಚು ಹೆಚ್ಚಾಗಿ ಬೆಳೆಯಲು ಪ್ರಾರಂಭಿಸಿದರು. ಈ ವಾಣಿಜ್ಯೀಕರಣವು ಭಾರತದಲ್ಲಿ ಹಲವು ಕೈಗಾರಿಕೆಗಳನ್ನು ಸ್ಥಾಪಿಸಿದರಲ್ಲದೇ, ಕಚ್ಚಾ ವಸ್ತುಗಳನ್ನು ರಫ್ತು ಮಾಡುವ ಕಾರ್ಯವು ವಿಸ್ತರಣೆಯಾಯಿತಾದರೂ ಇದು ಬಹುಜನರ ಅನುಕೂಲಕ್ಕೆ ಇರಲಿಲ್ಲವೆಂಬುದು ಸ್ಪಷ್ಟ. ಈ ವಾಣಿಜ್ಯೀಕರಣ ಇವು ಆಹಾರಧಾನ್ಯಗಳ ಉತ್ಪಾದನೆಯ ಮೇಲೆ ಕೆಟ್ಟ ಪರಿಣಾಮ ಬೀರಿತಲ್ಲದೇ ಭಾರತೀಯ ಜನತೆಗೆ ಎರಡು ಹೊತ್ತಿನ ಊಟವನ್ನು ದೊರಕಿಸುವ ಆಹಾರವನ್ನು ಉತ್ಪಾದನೆ ಮಾಡುವ ಸ್ಥಿತಿಯಿಂದ ಭಾರತವು ದೂರವಾಯಿತೆನ್ನಬಹುದು. ಇನ್ನು ಕೆಲವು ಪ್ರದೇಶಗಳಲ್ಲಿ ಹಣದ ಬೆಳೆಗಳನ್ನು ಬೆಳೆಯಲು ಗುರುತಿಸಿ ಅವುಗಳನ್ನು ಆಯ್ಕೆ ಮಾಡಿಕೊಳ್ಳಲಾಯಿತು. ಆಲೂಗೆಡ್ಡೆ, ಕಡಲೆಕಾಯಿ ಮತ್ತು ಹಲವು ವಿಧದ ಎಣ್ಣೆಕಾಳುಗಳನ್ನು ಬೆಳೆಯುವ ಕಾರ್ಯ ಹೆಚ್ಚಾಯಿತು ಮತ್ತು ಭಾರತೀಯ ಸರಕುಗಳ ಮಾರುಕಟ್ಟೆಗಳು ವಿಸ್ತಾರವಾದವು. ಈ ಕೃಷಿಕ್ಷೇತ್ರದ ವಾಣಿಜ್ಯೀಕರಣವು ಕೆಲವೊಂದು ಒಳ್ಳೆಯ ಗುಣಗಳನ್ನು ಹೊಂದಿದ್ದರೂ, ಇದರಿಂದ ಬಹಳಷ್ಟು ರೀತಿಯ ಹವಾಗುಣಗಳನ್ನು ಹೊಂದಿದೆ ಎಂಬುದು ಪ್ರಕಟವಾಯಿತು. ಈ ಕಾರ್ಯವು ಗ್ರಾಮೀಣ ಬಡಜನರನ್ನು ದೌರ್ಜನ್ಯಕ್ಕೆ ಒಳಗಾಗಿಸಿದರಲ್ಲದೇ ಗ್ರಾಮಗಳಲ್ಲಿ ಗ್ರಾಮೀಣ ಸಾಲಬಾದೆಯು ಹೆಚ್ಚಾಗಲು ಕಾರಣರಾದರು. ಇದಲ್ಲದೇ ಗ್ರಾಮಗಳಲ್ಲಿ ಲೇವಾದೇವಿಗಾರರ ಪಾತ್ರವು ಹೆಚ್ಚಾಯಿತು. ಆದರೆ ಇದರ ಒಳ್ಳೆಯ ಗುಣಗಳು ಭಾರತೀಯ ಜನರಿಗೆ ಅನುಕೂಲವಾಗಿ ಪರಿಣಮಿಸಿದೇ ಇವುಗಳ ಉಪಯೋಗವನ್ನು ಬ್ರಿಟೀಷರು ಉಪಯೋಗಿಸಿಕೊಂಡರು ಮತ್ತು ಭಾರತೀಯರ ಹಿತಾಸಕ್ತಿಯನ್ನು ಗಾಳಿಗೆ ತೂರಿ ತಮ್ಮ ಶಕ್ತಿಯನ್ನು ಬೆಳಿಸಿಕೊಂಡರು.

### 3.2.2 ಗ್ರಾಮೀಣ ಸಾಲಭಾದೆ

ಗ್ರಾಮೀಣ ಸಾಲಭಾದೆ ಅಥವಾ ಋಣಭಾದೆಯು ಭಾರತೀಯ ಅರ್ಥ ವ್ಯವಸ್ಥೆಯ ಒಂದು ಪ್ರಮುಖ ಲಕ್ಷಣ. ಇಂಗ್ಲೀಷರು ಭಾರತಕ್ಕೆ ಬರುವ ಮುನ್ನ ಲೇವಾದೇವಿ ಅಥವಾ ಹಣವನ್ನು ಸಾಲವಾಗಿ ನೀಡುವುದು ನ್ಯಾಯವಾಗಿರಲಿಲ್ಲ. ಆದರೆ ಇವರು ಬಂದ ನಂತರ ಇದು ಶಾಸನಬದ್ಧವಾಯಿತಲ್ಲದೇ ಲೇವಾದೇವಿಗಾರರು ತಮ್ಮ ಸಾಲಕ್ಕೆ ಭೂಮಿಯನ್ನು ಅಡವಾಗಿಡುವಂತೆಯೂ ಮತ್ತು ತೀರ್ಮಾನವಾಗಿರುವಂತೆ ಬಡ್ಡಿಯನ್ನು ಕೊಡುವಂತೆ ಒತ್ತಾಯ ಮಾಡುತ್ತಿದ್ದನು. ಈ ಲೇವಾದೇವಿ ವರ್ಗವು ಕ್ರಿಯಾಶಾಲಿಗಳೇ ಅಲ್ಲದೇ ಶಕ್ತಿಯುತ ವ್ಯಕ್ತಿಗಳಾದರು. ಇದರಿಂದ ಬಡವರನ್ನು ದೌರ್ಬಲ್ಯಕ್ಕೊಳಪಡಿಸಲಾಯಿತು ಮತ್ತು ಇಂಗ್ಲೀಷರಿಗೆ ಕಡಿಮೆ ಬೆಲೆಯಲ್ಲಿ ಕಚ್ಚಾ ವಸ್ತುಗಳು ದೊರೆಯುವಂತಾದವು. ಇದಲ್ಲದೇ ಹೆಚ್ಚಿನ ಹಣಕ್ಕೆ ರಫ್ತುದಾರರಿಗೆ ಸರಕುಗಳನ್ನು ಮಾಡುವ ಕಾರ್ಯವು ನಡೆಯಿತು. ಈ ಗ್ರಾಮೀಣ ಋಣಭಾದೆಯು ಬ್ರಿಟೀಷರ ಆಡಳಿತದ ಕೊನೆಯವರೆಗೂ ಭಾರತದಲ್ಲಿ ಮನೆ ಮಾಡಿದ್ದಿತು. ಇದಕ್ಕೆ ಕಾರಣಗಳು ಹಲವು -ಅವುಗಳೆಂದರೆ, ಬ್ರಿಟೀಷರ ಕಂದಾಯ ನೀತಿ, ಕೃಷಿಕ್ಷೇತ್ರದಲ್ಲಿ ಹೆಚ್ಚಾದ ಜನಸಂಖ್ಯೆಯ ಒತ್ತಡ, ರೈತ ಮತ್ತು ಸರ್ಕಾರಗಳ ನಡುವೆ ಇದ್ದ ನೂರಾರು ಜನ ಮಧ್ಯವರ್ತಿಗಳು ಭೂಹಿಡುವಳಿಯ ವಿಭಜನೆ ಮತ್ತು ಮರುವಿಂಗಡಣೆ ಮುಂತಾದವುಗಳು. ಇವುಗಳಿಂದಾಗಿ ದೇಶದ ರೈತಾಪಿ ಜನರು ಬಡತನಕ್ಕೊಳಗಾದರು. ಸ್ಥಿತಿಯಿಂದ ತಪ್ಪಿಸಿಕೊಳ್ಳಲು ಅವರೆಲ್ಲರೂ ಸಾಲಗಳ ಸೂಲಗಳಿಗೆ ಸಿಲುಕಿಕೊಳ್ಳಲಾಯಿತು. ಇದಲ್ಲದೇ ಇಲ್ಲಿ ಸಾಮಾಜಿಕ ಮತ್ತು ದಾರ್ಮಿಕ ಕಟ್ಟಳೆಗಳು ಮತ್ತು ನೀತಿಗಳು ಭಾಗವಹಿಸಿದವು. ಇದಲ್ಲದೇ ಕೃಷಿಕರಿಗೆ ಅವಶ್ಯಕವಾದ ನ್ಯಾಯ ಮಾರುಕಟ್ಟೆಗಳ ಕೊರತೆ, ಕೃಷಿಯ ವಾಣಿಜ್ಯೀಕರಣದ ಬೆಳವಣಿಗೆ ಮುಂತಾದವುಗಳು ಇದಕ್ಕೆ ಕಾರಣವಾದವು. ಹಳ್ಳಿಯ ಲೇವಾದೇವಿ ದಾರರ ದೌರ್ಜನ್ಯವು ರೈತವರ್ಗಗಳ ತೊಂದರೆಗಳನ್ನು ಇನ್ನೂ ಜಾಸ್ತಿ ಮಾಡಿದವು. ರೈತರ ತೊಂದರೆಗಳನ್ನು ತೊಡೆದು ಹಾಕಲು ಸರ್ಕಾರವು ಪ್ರಯತ್ನಿಸಿ ಜಾರಿಗೆ ತರಲು ಯತ್ನಿಸಿದ ಸಾಲದ ಕಾಯ್ದೆ ಮತ್ತು ಸಹಕಾರಿ ಸಂಘಗಳ ಕಾಯ್ದೆಗಳು ಬೇಕಾದ ರೀತಿಯಲ್ಲಿ ಜಾರಿಗೆ ಬರದೆ ಅವರ ಸಂಕಟ ಮತ್ತು ತೊಂದರೆಗಳು ಬಹಳಷ್ಟು ಹೆಚ್ಚಾದವೆನ್ನಬಹುದು.

### 3.2.3 ಆಧುನಿಕ ಕೈಗಾರಿಕಾ ಅಭಿವದ್ಧಿ - ಬಂಡವಾಳದಾರ ವರ್ಗ - ವಿದೇಶೀ ಬಂಡವಾಳ

19ನೇ ಶತಮಾನದ ದ್ವಿತೀಯಾರ್ಧದಲ್ಲಿ ಆಧುನಿಕ ಕೈಗಾರಿಕೆಗಳ ಅಭಿವೃದ್ಧಿಯು ಭಾರತದಲ್ಲಿ ಪ್ರಾರಂಭವಾಯಿತು. ಇದು ಬ್ರಿಟೀಷ ದೇಶವು ಸಾಕಷ್ಟು ಬಂಡವಾಳವನ್ನು ಇಟ್ಟುಕೊಂಡಿದ್ದು ಇದನ್ನು ಯಾವುದಾದರೂ ಕ್ಷೇತ್ರದಲ್ಲಿ ತೊಡಗಿಸುವ ಸ್ಥಿತಿಗೆ ಬಂದಾಗ ಪ್ರಾರಂಭವಾಯಿತು. ಈ ಹಂತದಲ್ಲಿ ಭಾರತವು ಬ್ರಿಟೀಷರು ಬಂಡವಾಳದಾರರು ಬಂಡವಾಳ ತೊಡಗಿಸಿಲು ಒಳ್ಳೆಯ ಅವಕಾಶಕೊಟ್ಟರು ಸಹ ಬ್ರಿಟೀಷ್ ಹಣಕಾಸಿನ ವರ್ಗದವರಿಗೆ ಅನುಕೂಲವಾಗಿ ಪರಿಣಮಿಸಿತು. ಇದಲ್ಲದೇ ಪ್ರಥಮ ಮಹಾಯುದ್ಧವು ಭಾರತದಲ್ಲಿ ಕೈಗಾರಿಕೆಗಳ ಅಭಿವೃದ್ಧಿಯನ್ನು ಮಾಡಲು ಒಳ್ಳೆಯ ಅವಕಾಶಗಳನ್ನು ಮಾಡಿಕೊಟ್ಟಿತಲ್ಲದೇ, ಈ ಯುದ್ಧಕಾಲದಲ್ಲಿ ವಿದೇಶೀಯರ ಪೈಪೋಟಿಯು ಇಲ್ಲವಾಗಿದ್ದುದು ಎಲ್ಲಾವೂ ಹಲವು ವಸ್ತುಗಳ ಉತ್ಪಾದನೆಯನ್ನು ಮಾಡಲು ಅವಕಾಶಗಳನ್ನು ದೊರಕಿಸಿಕೊಟ್ಟವು. ಎರಡನೇ ಮಹಾಯುದ್ಧವೂ ಸಹ ಭಾರತದಲ್ಲಿ ಕೈಗಾರಿಕಾಭಿವೃದ್ಧಿಗೆ ಹೊಸ ಹಂತವನ್ನು ಹುಡುಕಿಕೊಟ್ಟಿತೆನ್ನಬಹುದು. ಭಾರತಕ್ಕೆ ಆಮದುಗಳನ್ನು ನಿಷೇಧಿಸಲಾಯ್ತು, ಯುದ್ಧ ವಸ್ತುಗಳಿಗೆ ಬೇಡಿಕೆಯಿತ್ತು ಮತ್ತು ಯುದ್ದದ ನಂತರವೂ ಹಲವು ಕೈಗಾರಿಕೆಗಳಿಗೆ ರಕ್ಷಣೆ ಕೊಡಲು ಸರ್ಕಾರವು ಭರವಸೆ ನೀಡಿತು. ಈ ಎಲ್ಲಾ ಕಾರಣಗಳೂ ಸಹ ಭಾರತದಲ್ಲಿ ಕೈಗಾರಿಕೆಗಳ ಅಭಿವೃದ್ದಿಗೆ ಹಾಗೂ ವಿಸ್ತರಣೆಗೆ ಸಹಾಯಕವಾದವು. ಈ ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಅಭಿವೃದ್ಧಿಗೊಂಡ ಆಧುನಿಕ ಕೈಗಾರಿಕೆಗಳೆಂದರೆ ಮುಖ್ಯವಾಗಿ ಜವಳಿ, ಕೈಗಾರಿಕೆ, ಸೆಣಬು, ಎಣ್ಣೆಕಾಳುಗಳು ಮುಂತಾದವುಗಳು ಪ್ರಮುಖವಾದವುಗಳು. ಇವುಗಳಲ್ಲಿ ಜವಳಿಗಳು ಮತ್ತು ನಂತರ ಸೆಣಬು ಪ್ರಮುಖ ಸ್ಥಾನಗಳನ್ನು ಪಡೆದಿವೆಯೆಂದು ಹೇಳಬಹುದು. ಈ ಕೈಗಾರಿಕೆಗಳ ಅಭಿವೃದ್ಧಿಯು ಬಹಳ ಮಂದವಾಗಿಯಾದರೂ, ಬ್ರಿಟೀಷರು ಭಾರತವನ್ನು ಬಿಟ್ಟು ಹೋಗುವ ಹೊತ್ತಿಗೆ ಅವುಗಳೆಲ್ಲವೂ ಸಹ ಒಳ್ಳೆಯ ಅಸ್ಥಿಭಾರವನ್ನು ಹಾಕಿಕೊಂಡಿದ್ದವು.

ಭಾರತವು ಬಹಳ ಪ್ರಾಚೀನ ಕಾಲದಿಂದಲೂ ಸಹ ಅದರ ಕರಕುಶಲ ಕೈಗಾರಿಕೆಗಳಿಗೆ ಜಾಗತಿಕ ಪ್ರಸಿದ್ಧಿಯನ್ನು ಪಡೆದಿದೆಯೆಂಬುದನ್ನು ಇತಿಹಾಸವು ಉದಾಹರಣೆ ಸಹಿತ ನಮಗೆ ನೀಡುತ್ತದೆ. ಬಂಗಾಳ, ಕಲ್ಲಿಕೋಟೆ, ಉತ್ತರ ಪ್ರದೇಶ, ಗುಜರಾತ್ ಮತ್ತು ಬಿಹಾರ್ ಮುಂತಾದವುಗಳು ಹತ್ತಿ ಬಟ್ಟೆಯ ಕೈಗಾರಿಕೆಗಳಿಗೆ ಪ್ರಸಿದ್ಧಿಯನ್ನು ಪಡೆದಿದ್ದವು. ಅದೇ ಬಂಗಾಳ, ಬಿಹಾರ್ ಮತ್ತು ಒರಿಸ್ಸಾಗಳು ರೇಷ್ಮೆ ಬಟ್ಟೆಯ ಉತ್ಪನ್ನಕ್ಕೆ ಹೆಸರಿವಾಸಿಯಾಗಿದ್ದವು. ಡಾಕಾ ಒಳ್ಳೆಯ ಉತ್ಕೃಷ್ಟ ಮಸ್ಲಿನ್ ಬಟ್ಟೆಯ ತಯಾರಿಕೆಗೆ ಪ್ರಸಿದ್ಧ ಪಡೆದಿತ್ತು. ಮಕ್ಲೋ ಒಳ್ಳೆಯ ಹತ್ತಿಗೆ ಪ್ರಸಿದ್ಧಿ ಮತ್ತು ಬನಾರಸ್ ಮತ್ತು ಮುರ್ಷಿದಾಬಾದ್ ಪ್ರಖ್ಯಾತ ರೇಷ್ಮೆ ಬಟ್ಟೆಗೆ ಪ್ರಸಿದ್ಧಿ. ಇನ್ನು ತಂಜಾವೂರು, ನಾಸಿಕ್ ಮತ್ತು ಪೂನಾಗಳು ಹಿತ್ತಾಳೆ ಮತ್ತು ತಾಮ್ರದ ವಸ್ತುಗಳಿಗೆ ಅಂತರರಾಷ್ಟ್ರೀಯ ಖ್ಯಾತಿಯನ್ನು ತಂದಿದ್ದವು. ಇದು ಭಾರತೀಯ ಕರಕುಶಲ ಕೈಗಾರಿಕೆಗಳನ್ನು ನಾಶಪಡಿಸಲು ಕಾರಣವಾಯಿತು. ಈ ರೀತಿಯ ಭಾರತೀಯ ಕರಕುಶಲ ಕೈಗಾರಿಕೆಯು ವಿನಾಶವು ಭಾರತೀಯರಿಗೆ ವಿನಾಶಕಾರಿ ಮತ್ತು ಅಪಾಯಕಾರಿಯೂ ಆಯಿತೆನ್ನಬಹುದು. ದೇಶದಲ್ಲಿ ನಿರುದ್ಯೋಗವು ಹೆಚ್ಚಾಯಿತಲ್ಲದೇ ಭಾರತೀಯ ಕರಕುಶಲಿಗರು ಕೃಷಿ ಕಾರ್ಮಿಕರುಗಳು ಒತ್ತಾಯ ತಂದಂತಾಯಿತು. ಜನರ ಜೀವನ ಮಟ್ಟವು ಕಡಿಮೆಯಾಯಿತು. ಒಳ್ಳೆಯ ಶುದ್ಧ ಹಾಗೂ ಒಳ್ಳೆಯ ಕುಶಲತೆಗೆ ಹೆಸರಾದ ಹಳೆಯ ಕಾಲದ ಕರಕೌಶಲ್ಯತೆಯು ಕೊಲೆ ಮಾಡಲ್ಪಟ್ಟಿತು. ಈ ಭಾರತೀಯರ ವಿರೋಧ ನೀತಿಯು ಸರ್ಕಾರದ ವಿರುದ್ಧ ಜನ ವಿರೋಧಿ ನಿಲುವು ತಾಳಲು ಕಾರಣವಾಯಿತು. ಇದಲ್ಲದೇ ಸರ್ಕಾರವು ಬ್ರಿಟೀಷರ ಬಟ್ಟೆ ತಯಾರಕರ ರಕ್ಷಣೆಯಾಗಿ ಭಾರತೀಯ ಕರಕುಶಲ ಕೈಗಾರಿಕೆಗಳು ನಾಶವಾದವು. ಭಾರತದಲ್ಲಿ ಆಧುನಿಕ ಕೈಗಾರಿಕೆಗಳನ್ನು ಸ್ಥಾಪನೆಮಾಡಿದ್ದು ಭಾರತದ ಒಂದು ಹೊಸ ವರ್ಗ ಅಂದರೆ ಬಂಡವಾಳ ವರ್ಗದ ಹುಟ್ಟಿಗೆ ಕಾರಣವಾಯಿತು. ಈ ಬದಲಾವಣೆ ಕಾರ್ಯವು ಮಂದಗತಿಯೂ ಮತ್ತು ಸಣ್ಣ ಪ್ರಮಾಣದಲ್ಲಿ ಆಯಿತು. ಭಾರತವು ಬಂಡವಾಳದಲ್ಲಿ ಕೊರತೆಯನ್ನು ಅನುಭವಿಸುತ್ತಿತ್ತು ಬಂಡವಾಳದ ವೃದ್ಧಿಗೆ ಸಂಪನ್ಮೂಲಗಳ ಕೊರತೆ ಎದ್ದು ಕಾಣುತ್ತಿತ್ತು. ಬ್ಯಾಂಕುಗಳು ಮತ್ತು ಜಾಯಿಂಟ್ ಸ್ಟಾಕ್ ಕಂಪನಿಗಳು ಎಲ್ಲವು ಬ್ರಿಟೀಷ್‌ರಿಗಿದ್ದವು. ಅಲ್ಲದೇ ಸರ್ಕಾರವೂ ಸಹ ಬ್ರಿಟೀಷ್ ಬಂಡವಾಳಗಾರರು ಮತ್ತು ಉತ್ಪಾದಕರಿಗೆ ಎಲ್ಲಾ ರೀತಿಯ ಅನುಕೂಲಗಳನ್ನು ಮಾಡಿಕೊಟ್ಟಿತು. ಆದರೆ ಭಾರತೀಯರಿಗೆ ಅಂತಹ ಉತ್ತೇಜನವು ಯಾವುದೇ ರೀತಿಯಲ್ಲಿ ಬರಲಿಲ್ಲ. ಇದರಿಂದಲೇ ಸ್ವಾತ್ತಂರ್ಯಪೂರ್ಣದಲ್ಲಿ ಭಾರತದಲ್ಲಿ ಕೆಲವೇ ಬಂಡವಾಳಗಾರರ ವರ್ಗವನ್ನು ಕಾಣುತ್ತಿದ್ದು, ರೈಲ್ವೆಮಾರ್ಗ, ಟೀ, ಕಾಫಿ, ಸೆಣಬು ಮುಂತಾದ ಕಾರ್ಖಾನೆಗಳನ್ನು ಬ್ರಿಟೀಷರು ತಮ್ಮ ಏಕಸ್ವಾಮ್ಯದಲ್ಲಿಟ್ಟುಕೊಂಡರು ಅಲ್ಲದೆ, ಇನ್ನು ಕೆಲವರಿಗೆ ಬ್ರಿಟೀಷ್ ಬಂಡವಾಳದಾರರು ಹಣಕಾಸಿನ ಸಹಾಯವನ್ನು ನೀಡಿದ್ದಾರೆನ್ನಬಹುದು.

### *3.2.4 ವಿದೇಶೀ ವ್ಯಾಪಾರ ಮತ್ತು ತೆರಿಗೆ ನೀತಿ*

ಬ್ರಿಟೀಷರು ಭಾರತಕ್ಕೆ ವ್ಯಾಪಾರ ಮಾಡಲು ಬಂದರು. ಆರಂಭದಲ್ಲಿ ಇತರ ವ್ಯಾಪಾರವು ಭಾರತದ ಆರ್ಥಿಕ ಆಸಕ್ತಿಯನ್ನು ಕಾಪಾಡಿತೆನ್ನಬಹುದು. ಅವರು ಅನೇಕ ಬೆಲೆಬಾಳುವ ಲೋಹಗಳು ಮತ್ತು ಒಳ್ಳೆಯ ವಸ್ತುಗಳನ್ನು ತಂದು ಭಾರತೀಯ ವಸ್ತುಗಳಿಗೆ ವಿನಿಮಯ ಮಾಡಿಕೊಂಡು ವಿದೇಶಗಳಲ್ಲಿ ಬಹುದೊಡ್ಡ ಮಾರುಕಟ್ಟೆಯನ್ನು ನಿರ್ಮಿಸಿದರು. ಆದರೆ ಈ ಇಂಗ್ಲೀಷ್ ಕಂಪನಿಯ ವ್ಯಾಪಾರವು ಬ್ರಿಟನ್ನಿನ ಆಸಕ್ತಿಗೆ ವಿರುದ್ಧವಾಗಿದ್ದವು. ಆದ್ದರಿಂದ ಬ್ರಿಟೀಷ್ ಸರ್ಕಾರವು ಭಾರತೀಯ ಸರಕುಗಳ ಮೇಲೆ ನಿರ್ಬಂಧಿತ ತೆರಿಗೆಗಳನ್ನು ಹಾಕಿದ್ದು ಬ್ರಿಟನ್ನಿಗೆ ಬತ್ತಿ ಬಟ್ಟೆಗಳು ಬರುವುದನ್ನು ತಡೆದವು. ಆದರೆ ಕ್ರಮೇಣ ಸಮಯ ಬದಲಾವಣೆಯಾಯಿತು ಮತ್ತು ಭಾರತವು ಬ್ರಿಟನ್ನಿನ ದೌರ್ಜನ್ಯಕ್ಕೆ ಒಳಗಾದ ದೇಶವಾಯಿತು ಭಾರತ. ಇದಕ್ಕೆ ಮೂಲ ಕಾರಣಗಳು ಎರಡು, ಒಂದನೇಯದು ಪ್ಲಾಸಿಕದನ ನಂತರ ಬ್ರಿಟೀಷರು ಭಾರತದ ರಾಜಕೀಯ ನಿಯಂತ್ರಣವನ್ನು ತಂದುದ್ದು. ಇದಲ್ಲದೇ ಬ್ರಿಟೀಷರು ಭಾರತದ ಮೇಲೆ ದೌರ್ಜನ್ಯ ನಡೆಸಿದ್ದು ಪ್ರಮುಖ ಕಾರಣವಾಯಿತೆನ್ನಬಹುದು. ಕಂಪನಿಯು ಮೊದಲು ಯಾವುದೇ ತೆರಿಗೆ ಕೊಡದೇ ವ್ಯಾಪಾರ ಮಾಡುತ್ತಿದ್ದರು ಮತ್ತು ಕೆಲವು ಅತ್ಯಾವಶ್ಯಕ ವಸ್ತುಗಳಾದ ಉಪ್ಪು, ಅಡಿಕೆ ಮತ್ತು ಹೊಗೆಸೊಪ್ಪು ವಸ್ತುಗಳಲ್ಲಿ ಭಾರತವು ಏಕಸ್ವಾಮ್ಯವನ್ನು ಪಡೆದಿದ್ದಿತು. ಕ್ರಮೇಣ ಇದನ್ನು ಎಲ್ಲಾ ವಸ್ತುಗಳ ಮೇಲೂ ಸಹ ಏಕಸ್ವಾಮ್ಯ ಪಡೆಯಲು ಕಾರಣವಾಯಿತೆನ್ನಬಹುದು. ಇದರಿಂದಾಗಿ

ಕಂಪನಿಗಳು ಹೆಚ್ಚಿನ ಲಾಭವನ್ನು ಗಳಿಸಿದರಲ್ಲದೇ ಕಂಪನಿಯ ಅಧಿಕಾರಿಗಳೂ ಸಹ ಹೆಚ್ಚಿನ ಲಾಭಗಳಿಸಿ ಶ್ರೀಮಂತರಾದರು. ಕೊನೆಗೆ ಅವರ ದುರಾಶೆಯು ಬಂಗಾಳದಲ್ಲಿ ಭಾರತೀಯ ಕೈಗಾರಿಕೆಗಳನ್ನು ವಿನಾಶಕ್ಕೆ ತಳ್ಳಿತು. ಸಿಲ್ಕ್ ಮತ್ತು ಹತ್ತಿ ಬಟ್ಟೆಯ ಕಾರ್ಖಾನೆಗಳ ಅಭಿವೃದ್ಧಿಯು ಬಂಗಾಳ, ಬಿಹಾರ ಮತ್ತು ಒರಿಸ್ಸಾಗಳ ದೇಶೀಯ ಕಾರ್ಖಾನೆಗಳನ್ನು ವಿನಾಶದ ಅಂಚಿಗೆ ದೂಡಿತು. ಇದೇ ಸಮಯದಲ್ಲಿ ಬ್ರಿಟನ್‌ನಲ್ಲಿ ಕೈಗಾರಿಕಾ ಕ್ರಾಂತಿಯು ಪ್ರಾರಂಭವಾಗಿ, ಭಾರೀ ಯಂತ್ರಗಳ ಸಹಾಯದಿಂದ ಕೈಗಾರಿಕಾ ವಸ್ತುಗಳ ಉತ್ಪಾದನೆಯಾಗಲು ಪ್ರಾರಂಭವಾಯಿತು. ಒಂದು ರೀತಿಯಲ್ಲಿ ಕೈಯಿಂದ ತಯಾರಿಸಲ್ಪಟ್ಟವು ಭಾರತೀಯ ವಸ್ತುಗಳು ಯಂತ್ರಗಳಿಂದ ತಯಾರಿಸಿದ ವಸ್ತುಗಳ ಮೇಲೆ ದೇಶೀಯ ಮತ್ತು ವಿದೇಶೀಯ ಮಾರುಕಟ್ಟೆಗಳಲ್ಲಿ ಪೈಪೋಟಿ ನಡೆಸುವುದು ದುಸ್ತರವಾಯಿತು. ಇನ್ನೊಂದೆಡೆ ಬ್ರಿಟೀಷ್ ಸರ್ಕಾರ ಮತ್ತು ಭಾರತದಲ್ಲಿ ಇಂಗ್ಲೀಷ್ ಸರ್ಕಾರಗಳು ಭಾರತದಿಂದ ಸಾಕಷ್ಟು ಪ್ರಮಾಣದಲ್ಲಿ ಕಚ್ಚಾ ವಸ್ತುಗಳನ್ನು ತೆಗೆದುಕೊಂಡು ಹೋಗಿ ಇಂಗ್ಲೇಡಿನಲ್ಲಿ ಸಿದ್ಧ ವಸ್ತುಗಳನ್ನು ಮಾಡಿಕೊಂಡು ಬಂದು ಮಾರಾಟ ಮಾಡುತ್ತಿದ್ದರು. ಇದು ಭಾರತಕ್ಕೆ ಎರಡೂ ರೀತಿಯಲ್ಲಿ ಸಮಸ್ಯೆಯಾಯಿತು. 1813ರಲ್ಲಿ ಭಾರತದಲ್ಲಿ ಈಸ್ಟ್ ಇಂಡಿಯಾ ಕಂಪನಿಯು ಹೊಂದಿದ್ದ ವ್ಯಾಪಾರದ ಏಕಸ್ವಾಮ್ಯತೆಯು ಕೊನೆಗೊಂಡು ಯಾವುದೇ ಬ್ರಿಟೀಷ್ ಕಂಪನಿ ಅಥವಾ ವ್ಯಕ್ತಿ ಭಾರತದೊಂದಿಗೆ ವ್ಯಾಪಾರವನ್ನು ಮಾಡಿಕೊಳ್ಳಲು ಅವಕಾಶವಾಯಿತು. ಇದಲ್ಲದೇ ಬ್ರಿಟೀಷ್ ಸರ್ಕಾರವು ಬ್ರಿಟನ್ನಿಗೆ ಬರುವ ಎಲ್ಲಾ ವಸ್ತುಗಳ ಮೇಲೂ ರಕ್ಷಣಾ ತೆರಿಗೆಯನ್ನು ವಿಧಿಸಲು ಪ್ರಾರಂಭಿಸಿತು. ಇದೇ ತೆರಿಗೆಯನ್ನು ಬ್ರಿಟನ್ನಿನಿಂದ ಬಂದ ವಸ್ತುಗಳ ಮೇಲೆಯೂ ವಿಧಿಸಲಾಯ್ತು ಇದರಿಂದ 1833ರಿಂದ ಮುಕ್ತ ವ್ಯಾಪಾರ ನೀತಿಯು ಪ್ರಾರಂಭವಾಯಿತು. ಇದು ಬ್ರಿಟೀಷ್ ಉದ್ಯಮಿಗಳು ಮತ್ತು ಬಂಡವಾಳಗಾರರು ಭಾರತದೊಂದಿಗೆ ವ್ಯಾಪಾರ ಸಂಪರ್ಕವಿಟ್ಟುಕೊಂಡು ಭಾರತದ ಆರ್ಥಿಕ ಸ್ಥಿತಿಯನ್ನು ಲೂಟಿ ಮಾಡಲು ಎಲ್ಲಾ ರೀತಿಯ ಅವಕಾಶಗಳು ದೊರೆತವು. ಈ ನೀತಿಯಿಂದಾಗಿ ಬ್ರಿಟನ್ನಿನ ಬೆಳೆಯುತ್ತಿರುವ ಕೈಗಾರಿಕೆಗಳಿಗೆ ಕಚ್ಚಾ ವಸ್ತುಗಳನ್ನು ಒದಗಿಸುವ ಒಂದು ಕೃಷಿ ಕ್ಷೇತ್ರದಂತೆ ಭಾರತದ ಸ್ಥಿತಿಯಾಯಿತು ಮತ್ತು ಬ್ರಿಟನ್ನಿನ ಹೆಚ್ಚಿನ ಸಂಖ್ಯೆಯಲ್ಲಿ ತಯಾರಿಸಿದ ವಸ್ತುಗಳ ಮಾರುಕಟ್ಟೆಯಾಗಿಯೂ ಮಾರ್ಪಟ್ಟಿತು. ಇದು ಭಾರತದ ಎಲ್ಲಾ ಕರಕುಶಲ ಕೈಗಾರಿಕೆಗಳು ಮತ್ತು ಸಣ್ಣ ಕೈಗಾರಿಕೆಗಳನ್ನು ನಾಶಮಾಡಿತು. ಮುಂದೆ ಈ ಸ್ಥಿತಿಯು ಭಾರತವನ್ನು ಬಡತನದ ಬವಣೆಯಲ್ಲಿ ಬೇಯುವಂತೆ ಮಾಡಿತು.

## 3.2.5 ಸಂಪತ್ತಿನ ಸೂರೆ

ಭಾರತದ ದುರದೃಷ್ಟವೆಂದರೆ ಭಾರತದಲ್ಲಿ ಕಷ್ಟಪಟ್ಟು ಸಂಪಾದಿಸಿದ ಸಂಪತ್ತು ಭಾರತದಿಂದ ಹೊರಹೋಗಿ ಸಂಪತ್ತಿನ ಸೂರೆಯಾಗತೊಡಗಿತು. ಭಾರತೀಯ ಅರಸರ ಕಾಲದಲ್ಲಿ ಕಷ್ಟಪಟ್ಟು ಸಂಪಾದಿಸಿದ ಬೆಲೆಬಾಳುವ ಸಂಪತ್ತು ಮುಸ್ಲಿಮ್ ಮತ್ತು ಬ್ರಿಟೀಷರ ಕಾಲದ ಆಡಳಿತದ ಅವಧಿಯಲ್ಲಿ ಸೂರೆಯಾಗತೊಡಗಿತು. ಭಾರತೀಯ ಸಂಪತ್ತು ಬ್ರಿಟನ್ನಿಗೆ ಸೂರೆಯಾಗತೊಡಗಿತು. ಇದಲ್ಲದೇ ಇನ್ನು ಇತರೇ ವಿಧಗಳಲ್ಲೂ ಸಹ ಸಂಪತ್ತಿನ ಸೋರಿಕೆಯಾಗತೊಡಗಿತು. ನಿವೃತ್ತಿ ಹೊಂದಿದ ಬ್ರಿಟೀಷ್ ಅಧಿಕಾರಿಗಳ ನಿವೃತ್ತಿ ವೇತನ, ಈಗ ಹಾಲಿ ಇರುವ ಅಧಿಕಾರಿಗಳ ಸಂಬಳ ಮತ್ತು ಇತರೇ ಭತ್ಯಗಳು, ಖಾಸಗಿ ವ್ಯಾಪಾರದಿಂದ ಬಂದ ಲಾಭ, ದೇಶೀಯ ರಾಜರಿಂದ ಬಂದಂತಹ ಕೊಡುಗೆಗಳು ಹಣವನ್ನು ತೊಡಗಿಸಿದ ಬಂಡವಾಳದಾರರಿಗೆ ಬಂದಂತಹ ಲಾಭ, ವ್ಯಾಪಾರಿಗಳ, ತೋಟದ ಬೆಳೆಗಾರರು ಮತ್ತು ಇತರೇ ಕಾರ್ಯಗಳಲ್ಲಿ ತೊಡಗಿಸಿದ ಹಣಕ್ಕೆ ಬಂದಂತಹ ಲಾಭಗಳು ಭಾರತದಲ್ಲಿದ್ದ ಸಂಪತ್ತು ಸೂರೆಯಾಗಲು ಕಾರಣವಾಯಿತು. ಭಾರತದ ಭೂಕಂದಾಯವೂ ಸಹ ಅತೀ ಹೆಚ್ಚಿನ ಬ್ರಿಟೀಷರ ಲಾಭವಾಯಿತು. ಇದರಿಂದ ಭಾರತೀಯರ ಮೇಲೆ ಹೆಚ್ಚಿನ ತೆರಿಗೆಯಾಗಿ ಕೃಷಿಕ್ಷೇತ್ರ ತೊಂದರೆಗೀಡಾಯಿತು. ಬ್ರಿಟೀಷರು ಹೊರದೇಶಗಳಿಂದ ಯಾವುದೇ ವಸ್ತುಗಳನ್ನು ತರಿಸಿಕೊಳ್ಳದೇ ಭಾರತೀಯ ಭೂಕಂದಾಯದಿಂದ ಬರುತ್ತಿದ್ದ ಹಣದಿಂದ ಎಲ್ಲಾ ವಸ್ತುಗಳನ್ನು ಭಾರತದಲ್ಲೇ ಕೊಂಡುಕೊಳ್ಳುತ್ತಿದ್ದರು. ಅಂದರೆ ಭಾರತೀಯರು ಅದನ್ನು ರಫ್ತುಮಾಡಿದರೂ ಅದಕ್ಕೆ ಯಾವುದೇ ಹಣವನ್ನೂ ತೆಗೆದುಕೊಳ್ಳುತ್ತಿರಲಿಲ್ಲ, ಇದೂ ಸಹ ಭಾರತದ ಸಂಪತ್ತು ಸೋರಿಕೆಯಾಗಲು ಕಾರಣವಾಯಿತು.

## 3.3 ಘಟಕದ ಸಾರಾಂಶ

ಈ ಘಟಕದ ಅಧ್ಯಯನದ ನಂತರ ನಾವುಗಳು

- ಬ್ರಿಟೀಷರು ಭಾರತಕ್ಕೆ ಬಂದು ಇಲ್ಲಿ ನೆಲೆನಿಂತುದನ್ನು ತಿಳಿದುಕೊಂಡೆವು
- ಬ್ರಿಟೀಷರು ತಮ್ಮ ಸ್ವಾರ್ಥ ಸಾಧನೆಗೆ ಭಾರತದ ಕೃಷಿ ಕ್ಷೇತ್ರವನ್ನು ಯಾವ ರೀತಿಯಲ್ಲಿ ವಾಣಿಜ್ಯೀಕರಣಗೊಳಿಸಿದ್ದರು.
- ಭಾರತದಲ್ಲಿ ಗ್ರಾಮೀಣ ಋಣಭಾದೆಯು ಹೇಗೆ ಆಯಿತು.
- ಆಧುನಿಕ ಕೈಗಾರಿಕೆಗಳ ಸ್ಥಾಪನೆಯಿಂದ ಭಾರತದಲ್ಲಿ ಬ್ರಿಟೀಷ್ ಬಂಡವಾಳಗಾರರ ವರ್ಗ ಮತ್ತು ಇದರಿಂದ ಹೆಚ್ಚು ವಿದೇಶೀ ಹಣವನ್ನು ಗಳಿಸುವಂತಾದುದು
- ಭಾರತದಲ್ಲಿ ಕರಕುಶಲ ಕೈಗಾರಿಕೆಗಳು ಹೇಗೆ ವಿನಾಶದ ಅಂಚಿಗೆ ದೂಡಲ್ಪಟ್ಟವು.
- ಹೇಗೆ ವಿದೇಶೀ ವ್ಯಾಪಾರ ಮತ್ತು ತೆರಿಗೆಯ ನೀತಿ ಬ್ರಿಟೀಷರಿಗೆ ಸಾಕಷ್ಟು ಲಾಭದಾಯಕವಾಗಿತ್ತು.
- ಭಾರತದ ಸಂಪತ್ತು ಬ್ರಿಟನ್ನಿಗೆ ಹೇಗೆ ಸೋರಿಹೋಯಿತು ಎಂಬ ಇದೇ ಮುಂತಾದ ವಿಷಯಗಳನ್ನು ತಿಳಿದುಕೊಂಡೆವು.

## 3.4 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಬ್ರಿಟೀಷ್ ಭಾರತದ ಆರ್ಥಿಕ ನೀತಿಗಳನ್ನು ವಿವರಿಸಿ.
2. ಭಾರತದ ಮೇಲೆ ಬ್ರಿಟೀಷ್ ಆರ್ಥಿಕ ನೀತಿಯ ಪ್ರಭಾವವನ್ನು ತಿಳಿಸಿ.
3. **ಲಘು ಟಿಪ್ಪಣಿ ಬರೆಯಿರಿ :**
   (a) ಗ್ರಾಮೀಣ ಋಣಭಾದೆ
   (b) ಸಂಪತ್ತಿನ ಸೋರಿಕೆ
   (c) ಭಾರತದಲ್ಲಿ ವಾಣಿಜ್ಯ ಕೃಷಿ

## 3.5 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು

1. Agarwal A.N. : History of Modern India
2. Venkatasubaiah : The British India
3. Prasad L.V : History of Modern India
4. Hansraj : History of Modern India

ಡಾ. ಎ.ಸೋಮಶೇಖರ್

# ಘಟಕ - 4 1857ರ ಮಹಾದಂಗೆ

*ವಿಷಯಸೂಚಿ*

## 4.0 ಉದ್ದೇಶಗಳು

ಈ ಘಟಕದ ಅಧ್ಯಯನದಿಂದ ನಾವು

- 1857ರ ಮಹಾದಂಗೆಯು ಹೇಗೆ ಪ್ರಾರಂಭವಾಯಿತು.
- 1857ರ ದಂಗೆಯ ಕಾರಣಗಳು
- 1857ರ ದಂಗೆಯ ರಾಜಕೀಯ, ಸಾಮಾಜಿಕ, ಧಾರ್ಮಿಕ ಮಿಲಿಟರಿ, ಆಡಳಿತ ಮುಂತಾದ ಕಾರಣಗಳು
- 1857ರ ಮಹಾದಂಗೆಯ ಗತಿಯ ಬಗ್ಗೆ
- 1857ರ ಈ ದಂಗೆಯನ್ನು ಬ್ರಿಟೀಷರು ಹೇಗೆ ಅಡಗಿಸಿದರು ಎಂಬುದನ್ನು ಮತ್ತು
- 1857ರ ಈ ಮಹಾದಂಗೆಯ ಪರಿಣಾಮಗಳನ್ನು ಸಹ ತಿಳಿಯುತ್ತೇವೆ

## 4.1 ಪೀಠಿಕೆ

ಬ್ರಿಟೀಷರ ಆಳ್ವಿಕೆಯ ಭಾರತದ ಇತಿಹಾಸದಲ್ಲಿ 1857ರ ಮಹಾದಂಗೆಯು ಬಹಳ ಪ್ರಮುಖವಾದ ಘಟನೆಯಾಗಿದೆ. ಬ್ರಿಟೀಷರು ಈಸ್ಟ್ ಇಂಡಿಯಾ ಕಂಪನಿಯ ಆಡಳಿತದ ಅವಧಿಯಲ್ಲಿ ಇಲ್ಲಿಯ ಜನರು ಕಂಪನಿಯ ಆಳ್ವಿಕೆಯಲ್ಲಿ ಸಾಕಷ್ಟು ರೀತಿಯ ಪ್ರಗತಿಯನ್ನು ಸಾಧಿಸಿದ್ದರು ಎಂಬುದರ ಬಗ್ಗೆ ಸಾಕಷ್ಟು ಗ್ರಂಥಗಳು ಕಂಡುಬರುತ್ತವೆ. ಆದರೆ ನಿಜವಾಗಿ ನೋಡಿದಾಗ ಭಾರತೀಯ ಪ್ರಜೆಗಳು ಕಂಪನಿಯ ಆಳ್ವಿಕೆಯಲ್ಲಿ ಸಾಕಷ್ಟು ರೀತಿಯ ತೊಂದರೆಗಳಿಗೆ ಸಿಲುಕಿದ್ದರು ಹಾಗೂ ಜನರು ಬೇಸತ್ತು ಬದಲಾವಣೆಗೆ ಕಾಯುತ್ತಿದ್ದರು. ಇಂತಹ ಅವಕಾಶವು 1857ರಲ್ಲಿ ಅವರಿಗೆ ಬಂದಿತು. 1857ರ ದಂಗೆಯು ಪ್ರಾರಂಭವಾಗಲು ಯಾವುದೇ ಒಂದು ಕಾರಣವು ಜವಾಬ್ದಾರಿಯಾಗಿರುವುದಿಲ್ಲ. ಆದರೆ ಹಲವು ಕಾರಣಗಳಾದ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಇತರೇ ಕಾರಣಗಳು ಕಾರಣವಾಗಿರುತ್ತದೆ. ಕಂಪನಿಯ ಆಡಳಿತದ ಬಗ್ಗೆ ಜನರ ಅತೃಪ್ತಿಯು ತಕ್ಷಣದಲ್ಲಿ ಬಂದದ್ದಾಗಿರಲಿಲ್ಲ. ಆದರೆ ಈ ಅತೃಪ್ತಿಯು ಸಾಕಷ್ಟು ಬೆಳೆದು ಕೊನೆಗೆ 1857ರಲ್ಲಿ ಇದು ಮಹಾದಂಗೆಯಲ್ಲಿ ಅವಸಾನವಾಯಿತು. ಈ ದಂಗೆಯಲ್ಲಿ ಜನರು ಅತೃಪ್ತಿಯನ್ನು ಕಂಪನಿಯ ಆಡಳಿತದ ಬಗ್ಗೆ ಇಟ್ಟುಕೊಂಡಿದ್ದು ಮತ್ತು ಭಾರತೀಯರನ್ನು ಹಲವಾರು ಸಮಸ್ಯೆಗೆ ಸಿಲುಕಿಸಿದ್ದು ಮತ್ತು ಅವರ ಜೀವನದ ಸ್ಥಿತಿ ಮುಂತಾದವುಗಳೆಲ್ಲವೂ ಈ ದಂಗೆಯಲ್ಲಿ ಹೊರಬಂದಿತು. ಭಾರತೀಯರು 1816ರಲ್ಲಿಯೇ ತಮ್ಮ ಮೇಲಿನ ದೌರ್ಜನ್ಯವನ್ನು ಹೊರಪಡಿಸಿದರು ಅಂದರೆ ಬರೇಲಿಯಲ್ಲಿ ಚಿಕ್ಕ ದಂಗೆಯಾಯಿತು ಮತ್ತು 1848ರಲ್ಲಿ ಕಾಂಗ್ರಾದಲ್ಲಿ ದಂಗೆಗಳು ಸರಿಯಾಗಿ ನಡೆಯಲಿಲ್ಲ. 1857ರಲ್ಲಿ ನಡೆದ ಮಹಾದಂಗೆಯು ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿಯ ದುರಾಡಳಿತದ ಬಗ್ಗೆ ಒಂದು ರೀತಿಯಲ್ಲಿ ವ್ಯವಸ್ಥಿತವಾಗಿ ನಡೆದ ಪ್ರಥಮ ದಂಗೆಯೆಂಬುದು ಈ ಘಟನೆಯಲ್ಲಿ ತಿಳಿದುಹೋಯಿತು.

## 4.2 1857ರ ಮಹಾದಂಗೆ ಮತ್ತು ಅದರ ಕಾರಣಗಳು

1857ರ ಮಹಾದಂಗೆಯು ಪ್ರಾರಂಭವಾದಾಗ ಜನರಲ್ಲಿ ಅನೇಕ ಸಾಮಾಜಿಕ ಮತ್ತು ರಾಜಕೀಯ ಅರಾಜಕತೆಗಳು ಕಾಣಿಸಿದ್ದುದಲ್ಲದೇ ಇವುಗಳೆಲ್ಲವೂ ಡಾಲ್‌ಹೌಸಿಯ ನೀತಿಯಿಂದ ಉಂಟಾದವುಗಳು. ಇವನ ಕೆಲವು ನೀತಿಗಳು ಜನರ ಮನಸ್ಸಿನಲ್ಲಿ ಆತಂಕಗಳನ್ನುಂಟುಮಾಡಿದವು. ಆದರೆ ಅದೃಷ್ಟವಶಾತ್ ಈ ಮಹಾದಂಗೆಯು ಅಷ್ಟೊಂದು ಭಾರತಾದ್ಯಂತ ವಿಸ್ತರಣೆಯಾಗಿರಲಿಲ್ಲ. 1857ರ ಈ ದಂಗೆಯು ಭಾರತೀಯ ಇತಿಹಾಸದಲ್ಲಿ ಪ್ರಮುಖವಾದ ಘಟನೆಯಾಗಿದೆ. ಇದು ತತ್‌ಕ್ಷಣದಲ್ಲಿ ಆದ ಘಟನೆಯಲ್ಲ.

ಅಥವಾ ಕೆಲವು ಪ್ರದೇಶಗಳಿಗೆ ಸೀಮಿತವಾಗಿರಲಿಲ್ಲ. ಈ ಘಟನೆಯ ಕಿಡಿಯು ಒಬ್ಬ ಮಿಲಿಟರಿ ಅಧಿಕಾರಿಯಿಂದ ಪ್ರಾರಂಭವಾದರೂ ಈ ಘಟನೆಯಲ್ಲಿ ಅನೇಕ ಜನರು ಅಂದರೆ ಸೈನಿಕರು ಕೃಷಿಕರು, ಕಾರ್ಮಿಕರು, ಕಲಾವಿದರು ಮತ್ತು ದೇಶೀಯ ರಾಜರುಗಳೂ ಸಹ ಭಾಗವಹಿಸಿದ್ದುದು ಒಂದು ವಿಶೇಷವಾಗಿ ಕಾಣುತ್ತದೆ.

ಕೆಲವು ವಿದ್ವಾಂಸರ ಪ್ರಕಾರ ಬ್ರಿಟೀಷರು ಭಾರತೀಯ ಸೇನೆಯಲ್ಲಿ ಕೆಲಸ ಮಾಡುತ್ತಿದ್ದ ಸೈನಿಕರಲ್ಲಿ ಕೊಬ್ಬಿನಿಂದ ಸವರಿದ ಗುಂಡುಗಳನ್ನು ಉಪಯೋಗಿಸಲು ನೀಡುತ್ತಿದ್ದಾರೆಂಬ ವಿಷಯದಲ್ಲಿ ಅಸಮಾಧಾನಗೊಂಡಿದ್ದ ಸೈನಿಕರ ಅತೃಪ್ತಿಯೇ ಈ 1857ರ ದಂಗೆ ಪ್ರಾಥಮಿಕ ಕಾರಣವಾಯಿತೆಂಬುದನ್ನು ತಿಳಿಸುತ್ತಾರೆ. ಆದರೆ ಇದರ ಜೊತೆ ಹಲವಾರು ಅಷ್ಟೇ ಪ್ರಮುಖವಾದ ಮತ್ತು ಒಪ್ಪಿಕೊಳ್ಳಬಹುದಾದ ರಾಜಕೀಯ, ಆಡಳಿತ ಆರ್ಥಿಕ, ಸಾಮಾಜಿಕ ಮತ್ತು ಮಿಲಿಟರಿ ಕ್ಷೇತ್ರಗಳಲ್ಲಿ ಇಂಗ್ಲೀಷರು ಅನುಸರಿಸಿದ ನೀತಿಗಳು ಈ ದಂಗೆಗೆ ಕಾರಣವಾಗಿರುವುದನ್ನು ನಾವು ಕಾಣುತ್ತೇವೆ. ಬ್ರಿಟೀಷರು ಭಾರತೀಯರ ಮೇಲೆ ನಡೆಸಿದ ದೌರ್ಜನ್ಯ ಮತ್ತು ನೀತಿಗಳು ಮತ್ತು ಭಾರತೀಯರ ಮನಸ್ಸಿನ ದ್ವೇಷ ಮನೋಭಾವನೆಗಳೆಲ್ಲವೂ ಸೇರಿ ಕೊನೆಗೆ ಈ 1857ರ ದಂಗೆಗೆ ಕಾರಣವಾಯಿತೆಂದು ಹೇಳಬಹುದು.

*ಮಹಾದಂಗೆಯ ಪ್ರಮುಖ ಕಾರಣಗಳು*

### *4.2.1 ರಾಜಕೀಯ ಕಾರಣಗಳು*

ಡಾಲ್‌ಹೌಸಿಯ ನೀತಿಯಿಂದಾಗಿ ಭಾರತೀಯ ದೇಶೀಯ ರಾಜ್ಯಗಳನ್ನು ಸರ್ಕಾರದ ವಶಕ್ಕೆ ತೆಗೆದುಕೊಂಡರು. ದೇಶೀಯ ರಾಜರ ಮನಸ್ಸಿನಲ್ಲಿ ಸಾಕಷ್ಟು ರೀತಿಯ ಅತೃಪ್ತಿ ಮತ್ತು ಅಸಂತುಷ್ಟಿಯನ್ನು ಉಂಟುಮಾಡಿದ್ದಿತು. ಕೆಲವು ರಾಜರು ಬ್ರಿಟೀಷರಿಂದ ಬೇರ್ಪಡೆಯಾದರು ತಮ್ಮ ಪ್ರದೇಶಗಳನ್ನು ಕಳೆದುಕೊಂಡರು. ಇನ್ನು ಕೆಲವರು ಬ್ರಿಟೀಷರ ಇಂಗಿತದ ಬಗ್ಗೆ ತಮ್ಮದೇ ಆದ ಬಹಳ ಅನುಮಾನ ಮತ್ತು ಆತಂಕಗಳನ್ನಿಟ್ಟುಕೊಂಡಿದ್ದರು. ಅವರಿಗೆ ಬ್ರಿಟೀಷರು ತಮ್ಮನ್ನು ಮುಳುಗಿಸಿ, ಅಸ್ತಿತ್ವವನ್ನು ಹಾಳು ಮಾಡಲು ನಿರ್ಧರಿಸಿದ್ದಾರೆಂಬುದಾಗಿ ತಿಳಿದುಕೊಂಡರು. ಹೀಗಾಗಿ ಬ್ರಿಟೀಷರ ವಿರುದ್ಧ ಇವರ ಹೃದಯದಲ್ಲಿ ದ್ವೇಷವು ಬೆಳೆದು ಹೆಮ್ಮರವಾಯಿತೆನ್ನಬಹುದು. ಡಾಲ್‌ಹೌಸಿಯು ನ್ಯಾಯರಹಿತವಾಗಿ ಸೇರಿಸಿಕೊಂಡ ರಾಜ್ಯಗಳಲ್ಲಿ ಭಾರತೀಯರ ಮನದಲ್ಲಿ ಆತಂಕ ಮತ್ತು ದ್ವೇಷವನ್ನು ಮೂಡಿಸಿದವು. ಇದಲ್ಲದೇ ದತ್ತು ಮಕ್ಕಳಿಗೆ ಹಕ್ಕಿಲ್ಲವೆಂಬ ನೀತಿಯಿಂದಾಗಿ ದೇಶೀಯ ರಾಜರು ತಮ್ಮ ರಾಜ್ಯಗಳನ್ನು ಕಳೆದುಕೊಂಡಿದ್ದೂ ಕೂಡ ಜನರು ಬೇಸತ್ತು ದಂಗೆಯೇಳಲು ಕಾರಣವಾಯಿತು. ಪಿ.ಇ.ರಾಬರ್ಟ್ಸ್‌ರವರ ಪ್ರಕಾರ "ಭಾರತದಲ್ಲಿ ಒಂದು ರೀತಿಯ ಕಷ್ಟತರದ ಮತ್ತು ಅಪನಂಬಿಕೆಗಳ ರೋಮಾಂಚನವು ಭಾರತೀಯರಲ್ಲಿತ್ತು."

ದೆಹಲಿಯಲ್ಲಿದ್ದ ಮೊಗಲರ ನಾಮಕಾವಸ್ಥೆ ದೊರೆಯಾದ ಎರಡನೇ ಬಹಾದೂರ್ ಷಾ ಜಫರ್‌ನಿಗೆ ಇಂಗ್ಲೀಷರು ಯಾವುದೇ ರೀತಿಯ ಗೌರವ ನೀಡುತ್ತಿರಲಿಲ್ಲ. ಭಾರತದ ಗೌರ್ನರ್ ಜನರಲ್‌ನಾದ ಲಾರ್ಡ್ ಎಲ್ಲೆನ್‌ಬರೋ ಬಹಾದೂರ್ ಷಾ ನಿಗೆ ನೀಡುತ್ತಿದ್ದ ಕಾಣಿಕೆಗಳ ಪದ್ಧತಿಯನ್ನು ತೆಗೆದು ಹಾಕಿದನು ಮತ್ತು ಅವನಿಗೆ ವಾರ್ಷಿಕವಾಗಿ ಸರ್ಕಾರದಿಂದ ನೀಡುತ್ತಿದ್ದು ಎಂಟು ಲಕ್ಷ ರೂಪಾಯಿಗಳನ್ನು ಕೊಡುವುದನ್ನು ನಿಲ್ಲಿಸಿದನು. ನಂತರ ಡಾಲ್‌ಹೌಸಿಯು ಬಹಾದೂರ್ ಷಾನು ಕೆಂಪುಕೋಟೆಯಲ್ಲಿಯ ವಾಸವನ್ನು ಬಿಟ್ಟು, ದೆಹಲಿಯ ಹೊರಭಾಗದಲ್ಲಿ ಕುತುಬ್ ಪ್ರದೇಶದ (ಮೆಹರೌಲಿ)ದಲ್ಲಿರುವಂತೆ ಆದೇಶ ನೀಡಿದನು. ಲಾರ್ಡ್ ಕ್ಯಾನಿಂಗನು ಒಂದು ಆದೇಶ ಹೊರಡಿಸಿ ಎರಡನೇ ಬಹಾದೂರ್‌ಷಾನ ನಂತರ ಬಂದ ರಾಜರು ಸಾಮ್ರಾಟ್‌ನೆಂಬ ಬಿರುದನ್ನು ಇಟ್ಟುಕೊಳ್ಳಬಾರದು ಮತ್ತು ಅವನ ಸ್ಥಾನವು ಕೇವಲ ಒಬ್ಬ ರಾಜಕುಮಾರನಂತಿರುತ್ತದೆಂದು ಆದೇಶಿಸಿದನು.

ಎರಡನೇ ಬಾಜಿರಾಯನ ದತ್ತುಪುತ್ರ ನಾನಾಸಾಹೇಬನು ತನ್ನ ತಂದೆಯು ಮರಣಾನಂತರ ತನಗೆ ಸರ್ಕಾರದಿಂದ ಬರಬೇಕಾದಂತಹ ನಿವೃತ್ತಿ ವೇತನವನ್ನು ಸರ್ಕಾರ ಕೊಡಲಿಲ್ಲವೆಂದು ಬಹಳಷ್ಟು ರೀತಿಯ ಅವಮಾನ ಎಂದು ಅವನು ತಿಳಿದುಕೊಂಡಿದ್ದನು. ಇದೇ ರೀತಿಯ ಜಾನ್ಸಿ ರಾಣಿಲಕ್ಷ್ಮೀಬಾಯಿ ಬ್ರಿಟೀಷ್ ಸರ್ಕಾರವು ತಾನು ಒಬ್ಬ ದತ್ತುಪುತ್ರನನ್ನು ತೆಗೆದುಕೊಳ್ಳಲು ಅವಕಾಶಕೊಡಲಿಲ್ಲವೆಂದು ಬೇಸರ ಹೊಂದಿದ್ದಳು.

ಇದಲ್ಲದೇ ಬ್ರಿಟೀಷರು ತೆಗೆದುಕೊಂಡ ಹಲವು ರಾಜಕೀಯ ಕ್ರಮಗಳೂ ಸಹ 1857ರ ದಂಗೆಗೆ ಕಾರಣವಾದವು. ಬ್ರಿಟೀಷರು ದೇಶೀಯ ರಾಜರು ದತ್ತುತೆಗೆದುಕೊಳ್ಳುವ ಕ್ರಮವನ್ನು ನಿಷೇಧಿಸಿದ್ದು ಇದಕ್ಕೆ ಪ್ರಮುಖ ಕಾರಣ. ಡೌಲ್‌ಹೌಸಿ ತನ್ನ ಸಾಮ್ರಾಜ್ಯಶಾಹಿ ಆಸೆಯನ್ನು ತೀರಿಸಿಕೊಳ್ಳುವುದಕ್ಕೋಸ್ಕರ ಅನೇಕ ರಾಜ್ಯಗಳನ್ನು ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು ಅವುಗಳಲ್ಲಿ ಸತಾರ (1848) ಸಂಬಾಲ್ ಪುರ್(1849) ಭಗತ್ (1850) ಉದಯಪುರ(1852) ಜ್ಹಾನ್ಸಿ(1853) ಮತ್ತು ನಾಗಪುರ (1854) ಮುಂತಾದ ರಾಜ್ಯಗಳನ್ನು ದತ್ತು ಮಕ್ಕಳಿಗೆ ಹಕ್ಕಿಲ್ಲವೆಂಬ ನೀತಿಯನ್ನು ಅನುಸರಿಸಿ ಸಾಮ್ರಾಜ್ಯಕ್ಕೆ ಸೇರಿಕೊಂಡರು. ತಂಜಾವೂರಿನ ರಾಜ ಕುಟುಂಬ ಮತ್ತು ಕರ್ನಾಟಕದ ನವಾಬನ ಕುಟುಂಬದವರನ್ನು ರಾಜರ ನಿಧನಾನಂತರ ಬ್ರಿಟೀಷರು ಆ ರಾಜ್ಯಗಳನ್ನು ತಮ್ಮದಾಗಿಸಿಕೊಂಡರು. 1831ರ ನಂತರ ಮೈಸೂರಿನ ರಾಜನಿಗೆ ನಿವೃತ್ತಿ ವೇತನ ನೀಡಿದರು. ನಾನಾಸಾಹೇಬನು ಸಿಂಹಾಸನವೇರಲು ನಿರಾಕರಿಸಲಾಯ್ತು. ಇವುಗಳೆಲ್ಲವೂ ಭಾರತ ದೇಶೀಯ ರಾಜರಲ್ಲಿ ದ್ವೇಷ ಮತ್ತು ಅಸೂಯೆಯನ್ನು ತುಂಬಿದವು. ಇದಲ್ಲದೇ ಔದ್‌ಪ್ರಾಂತ್ಯವನ್ನು ಕೊನೆಯ ರಾಜ್ಯವಾಗಿ ಸಾಮ್ರಾಜ್ಯಕ್ಕೆ ಸೇರಿಸಿಕೊಂಡಿದ್ದು ಮುಸ್ಲಿಂ ಜನರಲ್ಲೂ ಸಹ ಅಸಮಾನದ ಹೊಗೆಯಾಗಲು ಕಾರಣವಾಯಿತು. ಏಕೆಂದರೆ ಈ ರಾಜ್ಯವು ಯಾವಾಗಲೂ ಬ್ರಿಟೀಷರಿಗೆ ಗೌರವ ಮತ್ತು ನಿಷ್ಠೆಯಿಂದಿದ್ದರೂ ಕೂಡ ಅದನ್ನು ಬ್ರಿಟೀಷ್‌ರು ತಮ್ಮಲ್ಲಿ ಸೇರಿಸಿಕೊಂಡಿದ್ದು, ಇತರೇ ರಾಜರಲ್ಲಿ ಅಸಮಾದಾನದ ಚಿಹ್ನೆಯನ್ನು ಮೂಡಿಸಿತು. ಇದರ ನವಾಬನಾದ ವಾಜಿದ್ ಅಲಿಷಾ, ಇದಕ್ಕೆ ದ್ವೇಷ ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದನು. ಜಿ.ಬಿ.ಮ್ಯಾಲೆಸನ್‌ರವರ ಪ್ರಕಾರ "ಔದ್‌ನ್ನು ಸ್ವಾದೀನಪಡಿಸಿಕೊಂಡಿದ್ದು ಮತ್ತು ಔದ್ ರಾಜ್ಯದಲ್ಲಿ ಬೇರೆ ರೀತಿಯ ಆಡಳಿತ ಪದ್ಧತಿಯನ್ನು ತಂದಿದ್ದು ಮುಸ್ಲಿಂ ಶ್ರೀಮಂತರಲ್ಲಿ ಸೈನಿಕರು ಮತ್ತೆ ಕೃಷಿಕರಲ್ಲಿ ಬ್ರಿಟೀಷರ ವಿರುದ್ಧ ದ್ವೇಷ ಕಾರುವಂತೆ ಮಾಡಿದರಲ್ಲದೇ ಬ್ರಿಟೀಷ್‌ರು ಮತ್ತು ಔದ್‌ನ ನಡುವಿನ ಅತೃಪ್ತಿಯೇ ಒಂದು ಬೃಹತ್ ಕೇಂದ್ರವಾಯಿತೆನ್ನಬಹುದು.

### *4.2.2 ಆಡಳಿತದ ಕಾರಣಗಳು*

ಬ್ರಿಟೀಷರ ಆಡಳಿತವನ್ನು ಭಾರತೀಯರು ದಿಕ್ಕರಿಸಿದರು. ಬ್ರಿಟೀಷರು ಅನೇಕ ಮಧ್ಯವರ್ತಿಗಳಿಂದ ಜಾಗೀರುದಾರರು, ವಹಾರ್‌ದಾರರು ಮುಂತಾದ ಪದವಿಗಳನ್ನು ರದ್ದುಗೊಳಿಸಿದ್ದರು. ಈ ಮಧ್ಯವರ್ತಿಗಳಿಂದ ಜನರು ಸರ್ಕಾರದಿಂದ ನೇರ ಸಂಪರ್ಕವನ್ನು ಹೊಂದಿದ್ದರು ಮತ್ತು ಇನ್ನೂ ಅನೇಕ ಸವಲತ್ತುಗಳನ್ನು ಪಡೆದು ಳ್ಳುತ್ತಿದ್ದರು. ಬ್ರಿಟೀಷರ ಈ ರದ್ದತಿ ನಿಯಮ ಜನರ ಭಾವನೆಯನ್ನು ಕೆರಳಸಿತು. ಅದರಲ್ಲೂ ಸಾಮಾನ್ಯ ಜನರಿಗೆ ಮಧ್ಯವರ್ತಿಗಳ ಅವಶ್ಯಕತೆ ಇತ್ತು. ಏಕೆಂದರೆ ಸರ್ಕಾರದೊಂದಿಗೆ ಅವರು ನೇರ ಸಂಪರ್ಕ ಹೊಂದಲು ಅವರಲ್ಲಿ ಹಣ, ವೇಳೆ ಮತ್ತು ದೂರಕ್ರಮಣಿಕೆ ಮುಂತಾದ ಸಮಸ್ಯೆಗಳಿದ್ದವು. ಬ್ರಿಟೀಷರ ನ್ಯಾಯಾಂಗ ಪದ್ದತಿಯು ದುಬಾರಿಯಾಗಿದ್ದು, ತಾಂತ್ರಿಕವು ಮತ್ತು ಹೆಚ್ಚು ಸಮಯವನ್ನು ನ್ಯಾಯ ತೀರ್ಮಾನದಲ್ಲಿ ತೆಗೆದುಕೊಳ್ಳಲಾಗುತ್ತಿತ್ತು. ಬಡವರು ಇದರಿಂದ ಹೆಚ್ಚು ಉಪಯೋಗ ಪಡೆಯಲು ಸಾಧ್ಯವಿರಲಿಲ್ಲ. ಶ್ರೀಮಂತರೂ ಸಹ ಈ ಪದ್ಧತಿಯನ್ನು ಒಪ್ಪಲಿಲ್ಲ. ಏಕೆಂದರೆ ಜನ ಸಾಮಾನ್ಯರೂ ಸಹ ಇವರ ವಿರುದ್ದ ಮೊಕದ್ದಮೆ ದಾಖಲು ಮಾಡಬಹುದಾಗಿದ್ದು ತಮ್ಮ ಅಧೀನದಲ್ಲಿ ಜನರನ್ನು ಎದುರಿಸಲು, ನ್ಯಾಯಾಂಗದ ಮೆಟ್ಟಲು ಹತ್ತುವುದು, ಅವರಿಗೆ ಸಹಿಸಲಿಲ್ಲ. ಬ್ರಿಟೀಷ್ ಪೋಲಿಸ್ (ರಕ್ಷಣಾ)ಪದ್ಧತಿಯು ಅಷ್ಟೊಂದು ವ್ಯವಸ್ಥಿತವಾಗಿ ಬೆಳೆಯದಿದ್ದುದು ಜನರಲ್ಲಿ ತಮ್ಮ ಜೀವನದ ಗೌರವ, ಆಸ್ತಿ ಮತ್ತು ಪ್ರಾಣ ರಕ್ಷಣೆ ಮುಂತಾದುವುಗಳ ಭರವಸೆ ಇಲ್ಲದಂತಾಗಿದ್ದವು. ಕಂದಾಯ ಪದ್ಧತಿಯೂ ಸಹ ಕೃಷಿಕರಿಗೆ ತೊಂದರೆದಾಯಕವೇ ಆಗಿತ್ತು. ಖಾಯಂ ಗುತ್ತೇದಾರಿ ಪದ್ಧತಿ, ಮಹಲ್‌ವಾರಿ ಪದ್ಧತಿ ಮತ್ತು ರೈತವಾರಿ

ಪದ್ಧತಿಗಳು ಜಾರಿಗೆ ಬಂದರೂ ಕೂಡ ರೈತರಿಗೆ ಯಾವುದೇ ರೀತಿಯ ಪರಿಹಾರಗಳನ್ನು ಒದಗಿಸಲಿಲ್ಲ ಕಾರಣ ಈ ಎಲ್ಲಾ ಪದ್ಧತಿಯಿಂದಲೂ ರೈತನು ಹೆಚ್ಚಿನ ಕಂದಾಯವನ್ನು ಕೊಡಬೇಕಾಗಿತ್ತು ಮತ್ತು ಕಂದಾಯ ಕೊಡದಿದ್ದಲ್ಲಿ ತನ್ನ ಭೂಮಿಯನ್ನು ಕಳೆದುಕೊಳ್ಳುವ ಅವಕಾಶಗಳೇ ಹೆಚ್ಚಾಗಿದ್ದವು. ಸಮಸ್ಯೆಗಳಾದ ಗ್ರಾಮೀಣ ಋಣಭಾದೆ ಭೂಮಿ ವಿಂಗಡಣೆ ಮತ್ತು ಮರುವಿಂಗಡಣೆ, ಕೃಷಿ ಕಾರ್ಮಿಕರ ಸಂಖ್ಯೆಯ ಹೆಚ್ಚಳ ಮುಂತಾದವುಗಳು ಬ್ರಿಟೀಷರ ಈ ಕಂದಾಯ ಪದ್ಧತಿಗಳ ಬಳುವಳಿಗಳೇ ಆಗಿದ್ದವು. ಇದಲ್ಲದೇ ಅವರು ಭಾರತೀಯರನ್ನು ನಾಗರೀಕ ಸೇವೆ ಮತ್ತು ಮಿಲಿಟರಿ ಸೇವೆಯ ಉನ್ನತ ಸ್ಥಾನಗಳಿಂದ ವಂಚಿತಗೊಳಿಸಿದ್ದರು. ಇವುಗಳು ವಿಶೇಷವಾಗಿ ವಿದ್ಯಾವಂತ ಯುವಕ ಭಾರತೀಯರಲ್ಲಿ ದ್ವೇಷ ಬೆಳೆಯುವಂತೆ ಮಾಡಿದುವೆನ್ನಬಹುದು.

### *4.2.3 ಸಾಮಾಜಿಕ ಕಾರಣಗಳು*

ಈಸ್ಟ್ ಇಂಡಿಯಾ ಕಂಪನಿಯ ಆಡಳಿತದ ವಿರುದ್ಧ ಹಲವಾರು ಕಾರಣಗಳಿದ್ದವು. ಬ್ರಿಟೀಷರು ರಾಜಕೀಯ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಲಾಭವನ್ನು ಅನುಭವಿಸಿದ ನಂತರ ಭಾರತದ ಸಾಮಾಜಿಕ ಜೀವನದಲ್ಲಿ ತಮ್ಮ ಮೂಗನ್ನು ತೂರಿಸತೊಡಗಿದರು. ಆದರೆ ಭಾರತೀಯರು ಬ್ರಿಟೀಷರು ರಾಜಕೀಯವಾಗಿ ತಮ್ಮನ್ನು ಆಧೀನರಾಗಿಸಿಕೊಳ್ಳುವುದು ಮತ್ತು ಆರ್ಥಿಕವಾಗಿ ತಮ್ಮ ಮೇಲೆ ದೌರ್ಜನ್ಯ ನಡೆಸುವುದನ್ನು ಸಹಿಸಿದರು. ಆದರೆ ಅವರು ತಮ್ಮ ಸಾಂಸ್ಕೃತಿಕ ಜೀವನದಲ್ಲಿ ತಲೆ ಹಾಕುವುದನ್ನು ಸಹಿಸಲು ಸಾಧ್ಯವಾಗಲಿಲ್ಲ. ಬ್ರಿಟೀಷರು ದೇವದಾಸಿ ಪದ್ಧತಿಯಲ್ಲಿ ಸುಧಾರಣೆ ತರುವುದನ್ನು, ಸತಿ ಪದ್ಧತಿ ಅಥವಾ ಬಹುಪತ್ನಿತ್ವದಲ್ಲಿ ಸುಧಾರಣೆ ತರುವುದು ಸಹಿಸಲಿಲ್ಲ. ಇದಲ್ಲದೇ ಲಾರ್ಡ್ ಮೆಕಾಲೆಯು ಶಿಕ್ಷಣಾ ಸುಧಾರಣಾ ನೀತಿಯನ್ನು ತರಲು ಹವಣಿಸಿದಾಗ ಭಾರತೀಯರು ತಾವು ಗುರುಕುಲ ಶಿಕ್ಷಣ ಪದ್ಧತಿಯನ್ನು ಬಿಡಲು ಒಪ್ಪದೇ ಈ ಸುಧಾರಣೆಯನ್ನು ಖಂಡಿಸಿದರು. ಈಸ್ಟ್ ಇಂಡಿಯಾ ಕಂಪನಿಯು ಇಂಗ್ಲೀಷ್ ಮಾಧ್ಯಮದ ಶಿಕ್ಷಣದ ಪದ್ಧತಿಯನ್ನು ಜಾರಿಗೆ ತಂದು ತಮ್ಮ ಆಡಳಿತಕ್ಕೆ ಅನುಕಾಲವಾಗುವಂತೆ ಗುಮಾಸ್ತರುಗಳನ್ನು ಸೃಷ್ಟಿ ಮಾಡಿ ಆಡಳಿತದಲ್ಲಿ ಸೇರಿಸಿಕೊಳ್ಳಲು ಪ್ರಯತ್ನಿಸಿದಾಗ, ಭಾರತೀಯರು ಈ ಕಾರ್ಯವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೇ ಬ್ರಿಟೀಷರು ತಮ್ಮ ಸನಾತನ ಶಿಕ್ಷಣ ಪದ್ಧತಿಯನ್ನು ಹಾಳುಮಾಡಲು ಪ್ರಯತ್ನಿಸುತ್ತಿದ್ದಾರೆಂದು ಭಾವಿಸಿದರು. ಇದಲ್ಲದೇ ಸರ್ಕಾರವು ಇಂಗ್ಲೀಷ್ ಶಿಕ್ಷಣ ಪದ್ಧತಿಗೆ ಹೆಚ್ಚು ಹಣವನ್ನು ಆಯವ್ಯಯದಲ್ಲಿ ನಿಗಧಿ ಮಾಡಿದ್ದು ಪ್ರಾಚ್ಯ ಶಿಕ್ಷಣ ಪದ್ಧತಿಗೆ ಸಾಕಷ್ಟು ಹಣವನ್ನು ನೀಡದೇ ಇದ್ದು ಜನರಲ್ಲಿ ಇರುಸು ಮುರುಸಿಗೆ ಕಾರಣವಾಯಿತು.

ಭಾರತದಲ್ಲಿ ಜಾತಿ ಪದ್ಧತಿ ಬೇರೂರಿದ್ದು, ಜಾತಿ ಪದ್ಧತಿಯಲ್ಲಿ ಯಾರು ಯಾವುದೇ ರೀತಿಯಲ್ಲಿ ತಲೆ ಹಾಕುವುದನ್ನು ಜನರು ಸಹಿಸುತ್ತಿರಲಿಲ್ಲ. ಆದರೆ ಈಸ್ಟ್ ಇಂಡಿಯಾ ಕಂಪನಿ ಜಾತಿ ಪದ್ಧತಿಯಲ್ಲೂ ಸಹ ತಲೆ ಹಾಕಲು ಪ್ರಾರಂಭವಾಯಿತು. ನ್ಯಾಯಾಂಗ ಪದ್ಧತಿಯಲ್ಲಿ ಎಲ್ಲಾ ಜನರನ್ನು ಸಮನಾಗಿ ಕಾಣುವುದನ್ನು ನಾವು ಕಾಣುತ್ತೇವೆ. ಆದರೆ ಈ ರೀತಿಯ ಸಮಾನತೆಯ ನೀತಿಯನ್ನು ಮೇಲ್ವರ್ಗದ ಜನರು ತಮ್ಮ ಅಸಮಾಧಾನವನ್ನು ತೋರಿಸಿದರು. ಅವರು ತಾವು ಶೂದ್ರರೊಂದಿಗೆ ಸಮಾನರೆಂದು ಹೇಳಿಕೊಳ್ಳಲು ಹಾಗೂ ನಡೆದುಕೊಳ್ಳಲು ಸಿದ್ದರಿರಲಿಲ್ಲ. ಗ್ರಾಮಗಳಲ್ಲಿ ಗ್ರಾಮ ಪಂಚಾಯಿತಿಗಳಿದ್ದು, ಅಲ್ಲಿಯ ಯಾವುದೇ ವ್ಯಾಜ್ಯ - ಜಗಳಗಳನ್ನು ಪಂಚಾಯಿತಿಯು ತೀರ್ಮಾನ ಮಾಡುತ್ತಿತ್ತು. ಈ ಪಂಚಾಯಿತಿಗಳನ್ನು ಸಂಪೂರ್ಣವಾಗಿ ನಿಯಂತ್ರಿಸುತ್ತಿದ್ದುದು ಮತ್ತು ಪಂಚಾಯಿತಿಯನ್ನು ಅಧ್ಯಕ್ಷರು ಸಾಮಾನ್ಯವಾಗಿ ಮೇಲ್ವರ್ಗದ ಜಾತಿಯವರೇ ಆಗಿರುತ್ತಿದ್ದರು. ಹೀಗಾಗಿ ಶೂದ್ರರು ಯಾವಾಗಲೂ ಇವರ ನಿಯಂತ್ರಣದಲ್ಲಿಯೇ ಇರುತ್ತಿದ್ದರು. ಆದರೆ ಪಂಚಾಯಿತಿಗಳನ್ನು ಸರ್ಕಾರವು ತನ್ನ ಅಧೀನಕ್ಕೆ ತೆಗೆದುಕೊಂಡು ಕೆಲವು ಸುಧಾರಣೆಗಳನ್ನು ಮಾಡಲು ಪ್ರಯತ್ನಿಸಿದಾಗ ಮತ್ತು ಮೇಲ್ವರ್ಗದ ಜನರ ನಿಯಂತ್ರಣವನ್ನು ಕಡಿಮೆ ಮಾಡಿದಾಗ ಮತ್ತು ಕೆಳವರ್ಗದ ಜನರಿಗೆ ಪಂಚಾಯಿತಿಯಲ್ಲಿ ಸ್ಥಾನವನ್ನು ಕಾಯ್ದಿರಿಸಿದ್ದು ಮುಂತಾದ ವಿಷಯಗಳನ್ನು ಜನರು ವಿರೋಧಿಸಿದರು.

ಕ್ರಿಶ್ಚಿಯನ್ ಮಿಷನರಿಗಳ ಪ್ರಚಾರದಿಂದಾಗಿ ನೂರಾರು ದೇಶೀಯರು ಕ್ರೈಸ್ತ ಧರ್ಮಕ್ಕೆ ಮಂತಾತರಗೊಂಡರು. ಈ ವಿಷಯವನ್ನು ಹಿಂದೂಗಳು ಸಾಕಷ್ಟು ಖಂಡಿಸಿದರು. ಆದರೆ ಮಂತಾತರಗೊಂಡ ಜನರಿಗೆ ಒಳ್ಳೆಯ ಸತ್ಕಾರ ಮಾಡಿ ಸರ್ಕಾರದಲ್ಲಿ ನಾಗರೀಕ ಸೇವೆಗಳು ಮತ್ತು ನ್ಯಾಯಾಲಯಗಳಲ್ಲಿ ಹೆಚ್ಚಿನ ಉದ್ಯೋಗಗಳನ್ನು ಕೊಟ್ಟಿದ್ದಲ್ಲದೇ, ಸಮಾಜದಲ್ಲಿ ಅವರಿಗೆ ಉನ್ನತ ಸ್ಥಾನವನ್ನು ನೀಡಿದ್ದರು. ಇದನ್ನು ಎಲ್ಲಾ ಜನರೂ ವಿಶೇಷವಾಗಿ ಮೇಲ್ವರ್ಗದ ಜನರು ಖಂಡಿಸಿದರು. ಇದರ ನಂತರ ಬ್ರಿಟೀಷರು ರೈಲು ಮಾರ್ಗಗಳು ಮತ್ತು ಟೆಲಿಗ್ರಾಫಿಕಲ್ ಪದ್ಧತಿಯನ್ನು ಜಾರಿಗೆ ತಂದರು. ಸರ್ಕಾರವು ಜನರಿಗೆ ಇವುಗಳ ಉಪಯೋಗವನ್ನು ತಿಳಿಸಿದ್ದರೆ ಅವರು ಇವುಗಳನ್ನು ...ಪ್ರತ್ತಿದ್ದಾರೇನೋ, ಆದರೆ ಜನರ ನಂಬಿಕೆಯನ್ನು ಗಳಿಸದೇ ಈ ಪದ್ಧತಿಗಳನ್ನು ಬ್ರಿಟೀಷರು ಜಾರಿಗೊಳಿಸಿದರು. ಇದು ಜನರ ಮನಸ್ಸಿನಲ್ಲಿ ಹಲವು ರೀತಿಯ ವಿರೋಧ ಭಾವನೆಗಳನ್ನು ಬೆಳೆಸಿತು. ಬ್ರಿಟೀಷರ ವಿರುದ್ಧ ಹಲವು ರೀತಿಯ ಅಪಪ್ರಚಾರಗಳು ನಡೆದವು ಮತ್ತು ಇದರಿಂದ ಹಲವಾರು ಸಮಸ್ಯೆಗಳು ಹುಟ್ಟಿಕೊಂಡವು.

ಹಿಂದೂ ಸಾಮಾಜಿಕ ಪದ್ಧತಿಯಲ್ಲಿ ವಿಧವಾ ಪುನರ್ ವಿವಾಹಕ್ಕೆ ಅವಕಾಶವಿರಲಿಲ್ಲ. ಒಬ್ಬ ಸ್ತ್ರೀಯು ವಿಧವೆಯಾದಲ್ಲಿ ಅವಳು ತನ್ನ ಜೀವನವನ್ನು ಒಂಟಿಯಾಗಿ ಯಾವುದೇ ಆಮಿಷಕ್ಕೆ, ಅಥವಾ ಸಾರ್ವಜನಿಕ ಜೀವನವನ್ನು ಎಲ್ಲರಂತೆಯೂ ಮಾಡುವ ಹಾಗಿರಲಿಲ್ಲ. ಆದರೆ ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿಯು ಜನರ ಭಾವನೆಗಳಿಗೆ ಬೆಲೆ ಕೊಡದೇ 1856ರಲ್ಲಿ ವಿಧವಾ ಪುನರ್ ವಿವಾಹ ಕಾಯ್ದೆಯನ್ನು ಜಾರಿಗೆ ತಂದರು. ಈ ಕಾಯ್ದೆಯ ಪ್ರಕಾರ ಯಾವುದೇ ಒಬ್ಬ ವಿಧವೆಯು ಪುನರ್ ವಿವಾಹ ಮಾಡಿಕೊಳ್ಳಲು ಅನುಮತಿ ನೀಡಲಾಗಿತ್ತು. ಈ ಕಾಯ್ದೆಯಿಂದ ಹಿಂದೂಗಳು ಇದರ ವಿರುದ್ಧ ತಮ್ಮ ಧ್ವನಿ ಎತ್ತಿದರು. ಈ ಕಾಯ್ದೆಯನ್ನು ವಿಧವೆಯರೂ ಸಹ ಇಷ್ಟಪಡಲಿಲ್ಲ. ಇದರ ಪರಿಣಾಮ ಸರ್ಕಾರ ಇವರ ಧ್ವನಿಗೆ ಬೆಲೆಕೊಡದೇ ಇದ್ದಾಗ ಜನರ ಸುಮ್ಮನಾದರು ಆದರೂ ಅವರು ಸಮಯ ಬಂದಾಗ ಇದರ ಬಗ್ಗೆ ಒಟ್ಟಭಿಪ್ರಾಯ ವ್ಯಕ್ತಪಡಿಸೋಣವೆಂದು ಕಾಯುತ್ತಿದ್ದರು. ಈ ಅವಕಾಶವು 1857ರ ದಂಗೆಯಲ್ಲಿ ದೊರೆಯಿತು. ಬ್ರಿಟೀಷ್ ಸರ್ಕಾರ ಭಾರತದಲ್ಲಿ 1850ರಲ್ಲಿ ಜಾತಿ ನಿರ್ಭಂದ ತೆಗೆದುಹಾಕುವ ಕಾಯ್ದೆಯನ್ನು ಜಾರಿಗೆ ತಂದರು. ಇದರಿಂದಾಗಿ ಆಸ್ತಿಯಲ್ಲಿ ಉತ್ತರಾಧಿಕಾರತ್ವವನ್ನು ಪಡೆಯುವ ಕಾಯ್ದೆಯಲ್ಲಿ ಬದಲಾವಣೆ ಜಾರಿಗೆ ತಂದುದನ್ನು ಹಿಂದೂಗಳು ಮತ್ತು ಎಲ್ಲಾ ಭಾರತೀಯರು ಒಪ್ಪಲಿಲ್ಲ. ಇದಲ್ಲದೇ ಹಿಂದೂ ಧಾರ್ಮಿಕ ಆಸ್ತಿ ಪಿತ್ರಾರ್ಜಿತವಾದುದನ್ನು ಬದಲಾಯಿಸಲು ಒಪ್ಪದೇ ಇದ್ದಾಗ ಇವರೆಲ್ಲರ ದನಿಗಳು ದಂಗೆಗೆ ಸ್ಪೂರ್ತಿ ನೀಡಿದವು. ಇದನ್ನು ಬ್ರಿಟೀಷ್ ಪತ್ರಿಕೆಗಳೂ ಸಹ ಬರೆದವು.

ಬ್ರಿಟೀಷರು ಭಾರತೀಯ ಜನಾಂಗವನ್ನು ಕೀಳಾಗಿ ನೋಡಿದರು. ಇದಲ್ಲದೇ ಇವರನ್ನು ಸಾಮಾಜಿಕವಾಗಿ ಕೀಳೆಂದು ಪರಿಗಣಿಸಿದರು. ಯೂರೋಪಿಯನ್ನರ ಕ್ಲಬ್‌ಗಳು ಮತ್ತು ಹೋಟೆಲ್‌ಗಳಿಗೆ ಭಾರತೀಯರನ್ನು ಸೇರಿಸುತ್ತಿರಲಿಲ್ಲ. ಸಾರ್ವಜನಿಕ ಸ್ಥಳಗಳಲ್ಲಿ ಭಾರತೀಯರನ್ನು ಮತ್ತು ಅವರ ಮಹಿಳೆಯರನ್ನು ಸರಿಯಾಗಿ ಗೌರವಿಸಲಿಲ್ಲ. ಇದಲ್ಲದೇ ಅವರಿಗೆ ನ್ಯಾಯ ಸರಿಯಾಗಿ ದೊರೆಯಲಿಲ್ಲ. ಭಾರತದಲ್ಲಿ ಬ್ರಿಟೀಷರ ಅಧಿಕಾರ ಜಾಸ್ತಿಯಾದಂತೆ ಬ್ರಿಟೀಷರ ಜನಾಂಗೀಯ ವಿರೋಧ ಭಾವನೆ ಜಾಸ್ತಿಯಾಗಿತ್ತು. ಇದು ಭಾರತೀಯರನ್ನು ವಿರೋಧ ವ್ಯಕ್ತಪಡಿಸುವಂತೆ ಕೆರಳಿಸಿತು.

ಕಂಪನಿಯು ಜಾರಿಗೆ ತಂದ ಇನ್ನೂ ಕೆಲವು ಕಾಯ್ದೆಗಳು ಜನರಲ್ಲಿ ವಿರೋಧ ಭಾವನೆಯನ್ನು ಬೆಳೆಸಲು ಕಾರಣವಾದವು. 1832 ಮತ್ತು 1850ರ ಕಾಯ್ದೆಗಳು ಆಸ್ತಿ ಉತ್ತರಾಧಿಕಾರತ್ವಕ್ಕೆ ಸಂಬಂಧಪಟ್ಟಂತೆ ಜಾರಿಗೊಂಡವು. 1856ರಲ್ಲಿ ಧಾರ್ಮಿಕ ನಿರ್ಬಂಧಿತ ಕಾಯ್ದೆ ಜಾರಿಗೆ ಬಂದು ಧರ್ಮವನ್ನು ಬದಲಾವಣೆ ಮಾಡಿದ ಕ್ಷಣ ಅವರ ಪಿತ್ರಾರ್ಜಿತ ಆಸ್ತಿಯ ಹಕ್ಕನ್ನು ಪಡೆಯಲು ಯಾವುದೇ ನಿರ್ಬಂಧವಿಲ್ಲವೆಂಬುದನ್ನು ವ್ಯಕ್ತಪಡಿಸಿತು. ಸತಿ ಪದ್ಧತಿಯ ರದ್ದತಿ (1829), 1856ರ ವಿಧವಾ ಪುನರ್ ವಿವಾಹ ಕಾಯ್ದೆ, ಇವುಗಳೆಲ್ಲವೂ ಉದಾರ ಸಮಾಜ ಸುಧಾರಕರಾದ ರಾಜಾರಾಮ್ ಮೋಹನ್‌ರಾಯ್, ಈಶ್ವರಚಂದ್ರ ವಿದ್ಯಾಸಾಗರ್‌ರವರು ಉತ್ತೇಜನ ನೀಡಿದವು.

ಆದರೆ ಹಿಂದೂ ಧಾರ್ಮಿಕ ಸಂಪ್ರದಾಯಸ್ತರು ಇವು ಧರ್ಮದಲ್ಲಿ ತಲೆಹಾಕಿದ ವಿಷಯಗಳೆಂದು ಟೀಕಿಸಿದರು. ಭಾರತೀಯರೆಲ್ಲರೂ ಸರ್ಕಾರವು ನಮ್ಮ ಧರ್ಮ ಮತ್ತು ಸಾಮಾಜಿಕ ವಿಷಯಗಳಲ್ಲಿ ಅನಾವಶ್ಯಕವಾಗಿ ತಲೆ ಹಾಕುತ್ತಿದೆಯೆಂಬುದನ್ನು ಅರಿತರು.

### *4.2.4 ಧಾರ್ಮಿಕ ಕಾರಣಗಳು*

ಕ್ರಿಶ್ಚಿಯನ್ ಮಿಷನರಿಗಳು ಭಾರತದ ಜನರನ್ನು ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸಿ ಹಿಂದೂ ಮತ್ತು ಮುಸ್ಲಿಮ್ ಧರ್ಮಗಳಲ್ಲಿರುವ ಪದ್ಧತಿಗಳನ್ನು ತಪ್ಪು ತಪ್ಪಾಗಿ ಗುರ್ತಿಸಿ ಅವುಗಳನ್ನು ಅಪಪ್ರಚಾರ ಮಾಡತೊಡಗಿದರು. ಈ ಕ್ರಿಶ್ಚಿಯನ್ ಮಿಷನರಿಗಳು ಮತ್ತು ಪುರೋಹಿತರ ಸರ್ಕಾರದ ಸಹಾಯವನ್ನು ಪಡೆಯುತ್ತಿದ್ದರು. ಇದಲ್ಲದೇ ಮಂತಾತರದಲ್ಲಿ ಪೋಲಿಸರ ಸಹಾಯವನ್ನು ಕೂಡಾ ಪಡೆದರು. ಸರ್ಕಾರವು ಕ್ರಿಶ್ಚಿಯನ್ ಪಾದ್ರಿಗಳನ್ನು ಸೈನ್ಯದಲ್ಲಿ ಸೇರಿಸಿ ಸರ್ಕಾರದ ವೆಚ್ಚದಲ್ಲಿ ಕ್ರೈಸ್ತ ಧರ್ಮವನ್ನು ಪ್ರಚಾರ ಮಾಡಿ ಇದರಿಂದ ಮತಾಂತರವನ್ನು ಹೆಚ್ಚು ಮಾಡಬೇಕೆಂಬ ವಿಷಯಕ್ಕೆ ಪ್ರೋತ್ಸಾಹ ನೀಡಿದರು. ಸೈನಿಕರನ್ನು ಕ್ರೈಸ್ತಧರ್ಮಕ್ಕೆ ಮತಾಂತರಗೊಳಿಸಲು ಅವಶ್ಯಕವಾದ ಸಾಹಿತ್ಯವನ್ನು ವಿತರಿಸಿದರು ಮತ್ತು ಮತಾಂತರಗೊಳಿಸಲ್ಪಟ್ಟ ವ್ಯಕ್ತಿಗಳಿಗೆ ಅನೇಕ ರಿಯಾಯಿತಿಗಳನ್ನು ಪ್ರಕಟಿಸಿದರು.

ಕಂಪನಿ ಸರ್ಕಾರವು ದೇವಾಲಯಗಳು ಮತ್ತು ಮಸೀದಿಗಳ ಮೇಲೆ ತೆರಿಗೆಯನ್ನು ವಿಧಿಸಿದ್ದು, ಜನರ ಮನಸ್ಸಿನಲ್ಲಿ ದಾರ್ಮಿಕ ವಿರೋಧಿ ಭಾವನೆಗಳನ್ನು ಬೆಳಸಿದವು. ಇದಕ್ಕೂ ಹಿಂದೆ ಭಾರತೀಯ ರಾಜರು ಧಾರ್ಮಿಕ ಸ್ಥಳಗಳನ್ನು ತೆರಿಗೆ ರಹಿತಗೊಳಿಸಿದ್ದರು. ಇದಲ್ಲದೇ ಹಿಂದೂ ಮತ್ತು ಮುಸ್ಲಿಂ ಕುಟುಂಬಗಳು ಧಾರ್ಮಿಕ ಸಂಸ್ಥೆಗಳಿಂದ ಆದಾಯ ಪಡೆಯುವಂತೆ ಮಾಡಿದ್ದರು. ಸರ್ಕಾರವು ಹಿಂದೂ ಕಾನೂನು ಸಂಹಿತೆಯನ್ನು ತಯಾರಿಸಿ ಅವರ ಧಾರ್ಮಿಕ ವಿಧಿ ವಿಧಾನಗಳ ಬಗ್ಗೆ ತಲೆ ಹಾಕುವುದನ್ನು ಜನತೆ ಸಹಿಸಲಿಲ್ಲ. ಇದರ ಪ್ರಕಾರ ಭಾರತೀಯ ಧಾರ್ಮಿಕ-ಸಾಮಾಜಿಕ ಪದ್ಧತಿಗಳಲ್ಲಿ ಬ್ರಿಟೀಷರು ತಲೆಹಾಕುವುದನ್ನು ಇಷ್ಟಪಡಲಿಲ್ಲ. ಇದರಿಂದಾಗಿಯೇ ಸತಿ ಪದ್ಧತಿ, ಬಹುಪತ್ನಿತ್ವ, ಸ್ತ್ರೀ ಶಿಶುಹತ್ಯೆ ಮುಂತಾದುವುಗಳ ಕಾನೂನನ್ನು ಇವರು ಒಪ್ಪಲಿಲ್ಲ. 1850ರಲ್ಲಿ ಡಾಲ್‌ಹೌಸಿಯು ಹಿಂದೂ ಆಸ್ತಿಯಲ್ಲಿನ ಹಕ್ಕಿನ ಕಾಯ್ದೆಯಲ್ಲಿ ಬದಲಾವಣೆ ತಂದದ್ದು ಮತ್ತು 1850ರವರೆಗೂ ಯಾವುದೇ ಒಬ್ಬ ವ್ಯಕ್ತಿಯು ಧಾರ್ಮಿಕ ಮತಾಂತರಗೊಂಡರೆ ಅವನು ತನ್ನ ಪಿತ್ರಾರ್ಜಿತ ಆಸ್ತಿಯಿಂದ ವಂಚಿತವಾಗುತ್ತಿದ್ದ ಆದರೆ ಹೊಸಕಾಯ್ದೆಯಿಂದ ಪುನಃ ಅವನು ತನ್ನ ಪಿತ್ರಾರ್ಜಿತ ಆಸ್ತಿಯನ್ನು ಪಡೆಯುವಲ್ಲಿ ಯಾವುದೇ ನಿರ್ಬಂಧವಿರಲಿಲ್ಲ. ಇದೇ ರೀತಿಯಲ್ಲಿ ಭಾರತದಲ್ಲಿದ್ದಂತಹ ದತ್ತು ತೆಗೆದುಕೊಳ್ಳುವ ಪದ್ಧತಿಯನ್ನು ಡಾಲ್‌ಹೌಸಿಯು ರದ್ದುಗೊಳಿಸಿದ್ದು ಸಹ ಹಿಂದೂಗಳು ಇದು ತಮ್ಮ ಧಾರ್ಮಿಕ ಪದ್ಧತಿಗಳಲ್ಲಿ ಬ್ರಿಟೀಷರು ತಲೆಹಾಕುತ್ತಿದ್ದಾರೆಂದು ತಿಳಿಸಿದರು. ಇವೆಲ್ಲವುಗಳಿಂದ ಬ್ರಿಟೀಷರ ಆಳ್ವಿಕೆಯ ವಿರುದ್ಧ ಜನರೆಲ್ಲರೂ ವಿರೋಧಿ ಭಾವನೆಗಳನ್ನು ಬೆಳೆಸಿಕೊಂಡರು. ಇದಲ್ಲದೇ ಸಾರ್ವಜನಿಕ ಯೋಗಕ್ಷೇಮದ ಸುಧಾರಣೆಗಳಾದ ರೈಲ್ವೆಮಾರ್ಗ, ಅಂಚೆ ಮತ್ತು ತಂತಿ ಮಾರ್ಗಗಳು ಮುಂತಾದುವುಗಳನ್ನೂ ಸಹ ಧರ್ಮ ವಿರೋಧಿ ಕೃತ್ಯಗಳೆಂದು ಟೀಕೆ ಮಾಡತೊಡಗಿದರು.

### *4.2.5 ಆರ್ಥಿಕ ಕಾರಣಗಳು*

ಕಂಪನಿಯು ಭಾರತೀಯ ರಾಜರ ರಾಜ್ಯಗಳನ್ನು ವಶಪಡಿಸಿಕೊಂಡಂತೆಯೇ ಜಮೀನ್ದಾರರು ಮತ್ತು ರೈತರಿಗೆ ಸೇರಿದ ಭೂಮಿಯನ್ನು ವಶಪಡಿಸಿಕೊಂಡರು. ಮಾರಾಟ ಕಾಯ್ದೆ ಮತ್ತು ಭೂಕಂದಾಯ ಪದ್ಧತಿ ಮತ್ತು ತೆರಿಗೆಯನ್ನು ನಗದುರೂಪದಲ್ಲಿ ಸಲ್ಲಿಸುವುದು ಮುಂತಾದವುಗಳು ಭೂಕಂದಾಯವನ್ನು ಸರಿಯಾಗಿ ಕೊಡದೇ ಇರುವ ಜನರಿಗೆ ಸೇರಿದ ಒಂದು ಭೂಭಾಗವನ್ನು ಕಂದಾಯಕ್ಕಾಗಿಮಾರಿ ಅದನ್ನು ಸರ್ಕಾರಕ್ಕೆ ಸೇರಿಸಿಕೊಳ್ಳುವ ವಿಷಯಗಳು ಎಲ್ಲವೂ ಸಹ ಜನರ ಮನಸ್ಸಿನಲ್ಲಿ ವಿರೋಧಿ ಭಾವನೆಗಳನ್ನು

ಬೆಳಸಿದವು. ಈ ಕಾನೂನುಗಳು ಮತ್ತು ಅತಿ ಹೆಚ್ಚಿನ ತೆರಿಗೆ ನೀತಿ ಜಮೀನ್ದಾರರು, ಸಣ್ಣ ಪುಟ್ಟ ಭೂಮಾಲೀಕರು ಮತ್ತು ರೈತರನ್ನು ಅಧೋಗತಿಗೆ ತಳ್ಳಿದವು ಎಂಬುದು ತಿಳಿದು ಬರುತ್ತದೆ. ಇವರೆಲ್ಲರೂ ವಾಸ್ತವವಾಗಿ ಬಡತನಕ್ಕೆ ತಳಲ್ಪಟ್ಟರು ಎಂಬುದು ತಿಳಿಯುತ್ತದೆ. ದತ್ತು ಮಕ್ಕಳಿಗೆ ಹಕ್ಕಿಲ್ಲ ಎಂಬ ನೀತಿ ಭೂ ಮಾಲೀಕರಿಗೂ ಸಹ ಅನ್ವಯಿಸುತ್ತಿತ್ತು. ಇವರು ದತ್ತು ತೆಗೆದುಕೊಂಡಿದ್ದನ್ನು ಸರ್ಕಾರ ಮಾನ್ಯ ಮಾಡುತ್ತಿರಲಿಲ್ಲ. ಮತ್ತು ಅವರ ಭೂಮಿಯನ್ನು ಸರ್ಕಾರಕ್ಕೆ ತೆಗೆದುಕೊಳ್ಳುತ್ತಿದ್ದರು. ಇದರಿಂದಾಗಿ ಹಲವಾರು ಭೂ ಮಾಲೀಕರ ಈ ಕಾನೂನಿಗೆ ಸಿಕ್ಕಿ ತೊಳಲಾಡುತ್ತಿದ್ದರು.

1852ರಲ್ಲಿ ಬೊಂಬಾಯಿಯಲ್ಲಿ ಇನಾಂ ಕಮಿಷನ್‌ನ್ನು ನೇಮಕ ಮಾಡಿ ಭೂಮಾಲೀಕರುಗಳ ಎಲ್ಲಾ ಭೂಮಿಗೂ ಅವರೇ ಭೂಮಾಲೀಕರಾಗಿದ್ದಾರೆಯೇ ಎಂಬುದನ್ನು ತಿಳಿಯಲು ಈ ಕಮಿಷನ್ನನ್ನು ನೇಮಕ ಮಾಡಿದರು. ಈ ಕಮಿಷನ್‌ನ ವರದಿ ಮೂಲಕ ಡೆಕ್ಕನ್ ಪ್ರದೇಶದಲ್ಲಿಯೇ ಸುಮಾರು 20,000 ಎಸ್ಟೇಟುಗಳನ್ನು ಸರ್ಕಾರ ಮುಟ್ಟುಗೋಲು ಹಾಕಿಕೊಂಡಿತು ಮತ್ತು ಆ ಭೂಮಾಲೀಕರೆಲ್ಲರೂ ದಿವಾಳಿತನಕ್ಕೆ ತಳ್ಳಲ್ಪಟ್ಟರು.

ಇದರ ಜೊತೆಗೆ ಡಾಲ್‌ಹೌಸಿಯು ಔದ್ ರಾಜ್ಯವನ್ನು ಸರ್ಕಾರಕ್ಕೆ ವಶಪಡಿಸಿಕೊಂಡಾಗ, ಆ ರಾಜ್ಯದ ನಿವೃತ್ತ ಅಧಿಕಾರಿಗಳು ಮತ್ತು ನವಾಬನಿಂದ ಹಣ ಸಹಾಯ ಪಡೆಯುತ್ತಿದ್ದವರು ಇನ್ನು ಮುಂದೆ ಯಾವುದೇ ರೀತಿಯ ಹಣಕಾಸಿನ ಸಹಾಯಕ್ಕೆ ಅರ್ಹರಲ್ಲವೆಂದು ಸರ್ಕಾರ ತೀರ್ಮಾನಿಸಿತು ಮತ್ತು ದೇಶೀಯ ರಾಜರ ಹತ್ತಿರವಿದ್ದ ಸುಮಾರು 60,000 ಸೈನಿಕರನ್ನು ಸೇವೆಯಿಂದ ತೆಗೆದುಹಾಕಲಾಯಿತು. ಈ ಎಲ್ಲಾ ವರ್ಗದ ಜನರೂ ಸಹ ತಮ್ಮ ಜೀವನದ ಆಧಾರ ಮತ್ತು ಆಹಾರವನ್ನು ಕಳೆದುಕೊಂಡರು.

ಈಸ್ಟ್ ಇಂಡಿಯಾ ಕಂಪನಿಯು ಭಾರತೀಯ ಕೈಗಾರಿಕೆಗಳಿಗೆ ಕೊಡಲಿ ಏಟು ಕೊಟ್ಟಿತಲ್ಲದೇ ಹೊಸ ಕಾರ್ಖಾನೆಗಳನ್ನು ಸ್ಥಾಪಿಸಿ ಅಲ್ಲಿ ಇಂಗ್ಲೀಷ್ ವಸ್ತುಗಳನ್ನು ಉಪಯೋಗಿಸುವಂತೆ ಒತ್ತಾಯ ತಂದರು. ಈ ಕಾರ್ಯವು ಭಾರತೀಯ ಬಡ ಕಸುಬುದಾರರು ಮತ್ತು ಕರಕುಶಲಗಾರರನ್ನು ಕೆಲಸವಿಲ್ಲದೇ ಕುಳಿತುಕೊಳ್ಳುವಂತೆ ಮಾಡಿತು.

ಭಾರತದಲ್ಲಿ ಬ್ರಿಟೀಷರು ರಾಜಕೀಯ ಏಳ್ಗೆಯನ್ನು ಸಾಧಿಸುವಲ್ಲಿ ಆರ್ಥಿಕ ದೌರ್ಜನ್ಯ ಮಾಡಿ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುವ ಜಾಯಮಾನ ಇಂಗ್ಲೀಷರದಾಗಿತ್ತು. ಪ್ರಥಮವಾಗಿ ಅವರು ಬಂಗಾಳದ ಸುಭಾದಲ್ಲಿ ರಾಜಕೀಯ ಶಕ್ತಿಯನ್ನು ಸ್ಥಾಪಿಸಿ, ಕೆಲವೇ ದಶಕಗಳಲ್ಲಿ ಇಲ್ಲಿಯ ಎಲ್ಲಾ ಸಂಪನ್ಮೂಲಗಳನ್ನು ದೋಚಿ, ಅಲ್ಲಿಯ ಜನರಿಗೆ ಕೊನೆಗೆ ಅವಶ್ಯಕ ಜೀವನ ಮಾಡಲೂ ಸಹ ಸಾಧ್ಯವಿಲ್ಲದಂತಿರುವ ಸ್ಥಿತಿಯನ್ನು ತಂದರು. ಇದೇ ಸ್ಥಿತಿಯು ಬ್ರಿಟೀಷರು ಇನ್ನಿತರ ಪ್ರದೇಶದಲ್ಲಿ ತಮ್ಮ ಆಡಳಿತವನ್ನು ಸ್ಥಾಪಿಸಿದ ಸ್ಥಳಗಳಲ್ಲೂ ಕೂಡ ಕಾಣುತ್ತೇವೆ. ಬ್ರಿಟೀಷರ ವ್ಯಾಪಾರೀ ಆಸಕ್ತಿಗಳು ಭಾರತದ ಕರಕುಶಲ ಕೈಗಾರಿಕೆಗಳ ನಾಶಕ್ಕೆ ಕಾರಣವಾಯಿತೆನ್ನಬಹುದು. ಇವರ ಭೂಕಂದಾಯ ನೀತಿಯಿಂದ ಇಲ್ಲಿಯ ರೈತರ ಜೀವನವು ಅತ್ಯಂತ ಕೆಳದರ್ಜೆಗೆ ಇಳಿಯಿತು ಎಂಬುದು ಗೊತ್ತಾಗುತ್ತದೆ. ಭಾರತದೊಂದಿಗೆ ವ್ಯಾಪಾರ ಮಾಡಲು ನೀಡಿದ ಏಕಸ್ವಾಮ್ಯವನ್ನು 1813ರಲ್ಲಿ ಬ್ರಿಟೀಷ್ ಸರ್ಕಾರ ಹಿಂತೆಗೆದುಕೊಂಡಿದ್ದನ್ನು ಮತ್ತು 1833ರ ಕಾಯ್ದೆಯ ಪ್ರಕಾರ ಭಾರತ ಸರ್ಕಾರವು ವ್ಯಾಪಾರದ ನೀತಿಯನ್ನು ಒಪ್ಪಿಕೊಂಡು ಇದರಿಂದ ಭಾರತವನ್ನು ಹೆಚ್ಚು ಹೆಚ್ಚಾಗಿ ತೊಂದರೆಗೀಡುಮಾಡಲು ಪ್ರಮುಖ ಕಾರಣ ಬ್ರಿಟನ್ನಿನಿಂದ ಯಂತ್ರಗಳಿಂದ ನಿರ್ಮಿತವಾದ ವಸ್ತುಗಳನ್ನು ಅದರಲ್ಲೂ ಬಟ್ಟೆ ಕೈಗಾರಿಕೆಯ ವಸ್ತುಗಳನ್ನು ಆಮದು ಮಾಡಿಕೊಳ್ಳಲು ಪ್ರಾರಂಭ ಮಾಡಿದರು. ಕೊನೆಗೆ ಬ್ರಿಟೀಷರು ಕೈಗಾರಿಕೆಗಳಿಗೆ ಬೇಕಾದ ಕಚ್ಚಾ ವಸ್ತುಗಳನ್ನು ಪೂರೈಸುವ ಕೆಲಸವನ್ನು ಭಾರತವು ಮಾಡುವಂತಾಯಿತಲ್ಲದೇ ಮತ್ತು ಬ್ರಿಟೀಷರ ಸಿದ್ಧ ವಸ್ತುಗಳಿಗೆ ಮಾರುಕಟ್ಟೆಯ ಕೇಂದ್ರವೂ ಆಯಿತೆನ್ನುವುದು ಗೊತ್ತಾಗುತ್ತದೆ. ಇದಲ್ಲದೇ ಭಾರತದ ಸಂಪತ್ತನ್ನು ಬ್ರಿಟೀಷರು ಹಲವು ವಿಧಗಳಲ್ಲಿ ಸೂರೆ ಮಾಡಿದರು.

ಭಾರತದ ಬಡತನವು ಕೇವಲ ಒಂದೇ ವರ್ಗಕ್ಕೆ ಮಿತಿಯಾಗಿರದೇ ಈ ಬಡತನವು ಭಾರತದಲ್ಲಿದ್ದ ರೈತವರ್ಗ ಭೂಮಾಲೀಕರು, ಕೈಗಾರಿಕಾ ಕಾರ್ಮಿಕರು ಮತ್ತು ಮಧ್ಯಮವರ್ಗ ಮುಂತಾದ ವರ್ಗಗಳಿಗೂ ಸಹ ಸೇರಿದ್ದಿತು. ಈ ನಿಜವಾದ ಸಮಸ್ಯೆಯು ಎಲ್ಲಾ ಭಾರತೀಯರಿಗೂ ಸೇರಿದ್ದು ಬ್ರಿಟೀಷರ ವಿರುದ್ಧ ಇವರು ದಂಗೆ ಏಳಲು ಕಾರಣವಾಯಿತು.

### *4.2.6 ಮಿಲಿಟರಿ ಕಾರಣಗಳು*

ಈ1857ರ ದಂಗೆ ಏಳಲು ಮಿಲಿಟರಿ ಕ್ಷೇತ್ರದ ಕಾರಣಗಳನ್ನು ಸಹ ನೀಡಬಹುದು. ಕಂಪನಿಯ ಹಲವು ನೀತಿಗಳು ಭಾರತದ ಮಿಲಿಟರಿ ಸೈನಿಕರ ಅತೃಪ್ತಿಯನ್ನು ಹೆಚ್ಚು ಮಾಡಿತೆಂಬುದೂ ಸಹ ತಿಳಿದುಬರುತ್ತದೆ. ಸೈನಿಕರು ನಾಗರೀಕ ಸೇವೆಯಲ್ಲಿದ್ದ ತಮ್ಮ ಜನರೊಂದಿಗೆ ಬ್ರಿಟೀಷರಿಂದ ಆಗುತ್ತಿದ್ದ ಅನ್ಯಾಯದ ಬಗ್ಗೆ ಮಾತನಾಡಿಕೊಂಡರು. ಇವರಿಗೆ ಕಡಿಮೆ ಸಂಬಳವನ್ನು ನೀಡುತ್ತಿದ್ದರು. ಬ್ರಿಟೀಷರು ಬಂಗಾಳದ ಸೇನೆಗೆ ಕೆಳವರ್ಗದ ಜನರನ್ನು ನೇಮಕ ಮಾಡಲು ಪ್ರಾರಂಭಿಸಿದರು. ಈ ಹಿಂದೆ ಸೈನಿಕ ಕ್ಷೇತ್ರದಲ್ಲಿ ಕೇವಲ ರಜಪೂತರು ಮತ್ತು ಉನ್ನತ ವರ್ಗಕ್ಕೆ ಸೇರಿದವರು ಕಾರ್ಯನಿರ್ವಹಿಸುತ್ತಿದ್ದರು. ಈ ಹೊಸ ನೇಮಕವನ್ನು ಅವರು ಇಷ್ಟಪಡಲಿಲ್ಲ. ಔದ್‌ಪ್ರಾಂತ್ಯವನ್ನು ಬ್ರಿಟೀಷರು ತಮ್ಮ ವಶಪಡಿಸಿಕೊಂಡಿದನ್ನು ಸೈನಿಕರು ಒಪ್ಪಲಿಲ್ಲ. ಏಕೆಂದರೆ ಬಂಗಾಳಿ ಸೇನೆಯಲ್ಲಿ 3/5ರಷ್ಟು ಭಾಗ ಔದ್‌ಪ್ರಾಂತ್ಯದವರೇ ಇದ್ದರು ನವಾಬನನ್ನು ಕಡೆಗಣಿಸಿದ್ದು ಮಾತ್ರವಲ್ಲದೇ, ಔದ್ ಜನರು ಅಧಿಕಾರದಲ್ಲಿದ್ದ ಸಂಬಂಧಿಕರೊಂದಿಗೆ ಹೊಂದಿದ್ದು ಅನೇಕ ಸವಲತ್ತುಗಳನ್ನು ಕಳೆದುಕೊಂಡಿದ್ದರಿಂದ ಅವರು ಇದನ್ನು ವಿರೋಧಿಸಿದರು. ಬಂಗಾಳದ ಸೇನೆಯು ಬ್ರಿಟೀಷರು ಭಾರತದ ಸೇನೆಗೆ ಬೆನ್ನ ಮೂಳೆಯಂತಿತ್ತು. ಇದರ ಅತೃಪ್ತಿಯೇ ದಂಗೆಗೆ ಪ್ರಮುಖ ಕಾರಣವಾಯಿತು. ಸೈನಿಕರು ಅತೃಪ್ತರಾಗಲು ಕಾರಣ ಅವರಿಗೆ ಯಾವುದೇ ರೀತಿಯ ಹೆಚ್ಚಿನ ಸಂಬಳವಾಗಲೀ ಅಥವಾ ಪ್ರಶಸ್ತಿಯನ್ನೇ ಆಗಲಿ ಕೊಡದೇ ದೂರ ಪ್ರದೇಶಗಳಿಗೆ ಹೋಗಿ ಸೇವೆ ಸಲ್ಲಿಸಲು ಕಳುಹಿಸಿದ್ದೂ ಕಾರಣವಾಯಿತು. 1854ರಲ್ಲಿ ಸೈನಿಕರಿಗೆ ನೀಡುತ್ತಿದ್ದ ಅಂಚೆಚೀಟಿರಹಿತ ಪತ್ರ ವ್ಯವಹಾರದ ಸವಲತ್ತನ್ನು ತೆಗದುಹಾಕಿದ್ದೂ ಸಹ ಅಸಂತೃಪ್ತಿಗೆ ಕಾರಣವಾಯಿತು. 1856ರಲ್ಲಿ ಲಾರ್ಡ್ ಕ್ಯಾನಿಂಗ್ ದಿ ಜನರಲ್ ಎನ್‌ಲಿಸ್ಟ್‌ಮೆಂಟ್ ಆಕ್ಟ್‌ನ್ನು ಜಾರಿಗೆ ತಂದು ಬಂಗಾಳದ ಸೈನ್ಯಕ್ಕೆ ನೇಮಕವನ್ನು ಕಾನೂನುಬದ್ಧಗೊಳಿಸಿದನು. ಸೈನ್ಯದಲ್ಲಿದ್ದ ವಂಶಪಾರಂಪರ್ಯ ವ್ಯಕ್ತಿಗಳನ್ನು ರಾಷ್ಟ್ರದ ಯಾವ ಪ್ರದೇಶಕ್ಕಾದರೂ ನೇಮಕ ಮಾಡುವುದು ದೇಹದಾರ್ಢ್ಯತೆ ಇಲ್ಲದವರಿಗೆ ನಿವೃತ್ತಿ ವೇತನ ನೀಡಿ ಕಂಟೋನ್ಮೇಂಟಲ್ಲಿ ವಾಸ ಮಾಡಲು ತಿಳಿಸಿದರು. ಆದುದರಿಂದ ಸೈನಿಕರು ತಮ್ಮ ಮಕ್ಕಳು ಸೈನ್ಯಕ್ಕೆ ಸೇರಿದರೆ ಜಾತಿ ಹೀನರಾಗುತ್ತಾರೆ ಮತ್ತು ಬರುವ ಎಲ್ಲಾ ಸವಲತ್ತುಗಳಿಂದ ವಂಚಿತರಾಗುತ್ತಾರೆಂದು ಭಾವಿಸಿದರು. ಬ್ರಿಟೀಷರು ಸೈನ್ಯದಲ್ಲಿ ಉನ್ನತ ಪದವಿಗಳಲ್ಲಿದ್ದು ಭಾರತೀಯರು ಸಣ್ಣಪುಟ್ಟ ಅಧಿಕಾರಿಗಳಾಗಿದ್ದರು. ಇದೇ ಸಮಯದಲ್ಲಿ ಕ್ರಿಮಿಯನ್ ಯುದ್ಧ ನಡೆಯುತ್ತಿತ್ತು. ಇಂತಹ ಸಮಯವನ್ನು ಬಿಟ್ಟರೆ ನಮಗೆ ವಿಧಿಯಿಲ್ಲವೆಂದು ಅರಿತ ಸೈನಿಕರು ಬ್ರಿಟೀಷರನ್ನು ಭಾರತದಿಂದ ಓಡಿಸಬೇಕೆಂದು ಮನಸ್ಸು ಮಾಡಿದರು. ಇವೆಲ್ಲಾ ಕಾರಣಗಳು ಭಾರತೀಯ ಸೈನಿಕರು ದಂಗೆ ಏಳಲು ಕಾರಣವಾದವು.

### *4.2.7 ತಕ್ಷಣದ ಕಾರಣ: ಗನ್ನುಗಳಿಗೆ ಕೊಬ್ಬು ಸವರಿದ್ದು*

ಭಾರತೀಯ ಸೈನಿಕರ ಕೋಪವು ಜಾಸ್ತಿಯಾದದ್ದು, ಅವರು ಉಪಯೋಗಿಸುತ್ತಿದ್ದ ಗನ್ನು ಕೋವಿಗಳಿಗೆ ಕೊಬ್ಬನ್ನು ಸವರಿರುವುದು ಎಂಬ ವಿಷಯ. ಇದೇ ಸಮಯದಲ್ಲಿ ಸೈನಿಕರಿಗೆ ಎನ್‌ಫೀಲ್ಡ್ ರೈಫಲ್ಸ್‌ಗಳನ್ನು ಹೊಸದಾಗಿ ನೀಡಿದ್ದರು. ಹಳೇ ರೈಫಲ್ಸ್‌ಗಳನ್ನು ತೆಗೆದುಹಾಕಲಾಯಿತು. ಸೈನಿಕರು ಕೋವಿಯಿಂದ ಹೊಡೆಯುವಾಗ ಗುಂಡನ್ನು ತಮ್ಮ ಹಲ್ಲಿನಿಂದ ಕಚ್ಚಿ ತೆಗೆಯಬೇಕಾಗಿತ್ತು. ಈ ಗುಂಡುಗಳಿಗೆ ದನ ಮತ್ತು ಹಂದಿಯ ಕೊಬ್ಬನ್ನು ಸವರಿರುತ್ತಾರೆಂಬ ಸುದ್ದಿಯು ತಿಳಿದುಬಂದಿತ್ತು. ಈ ವಿಷಯವನ್ನು ಸರ್ ಜಾನ್ ಕಾಯೇ ಕಂಪನಿಯ ಕಾರ್ಯದರ್ಶಿ ಮತ್ತು ಲಾರ್ಡ್ ರಾಬರ್ಟ್ ದಂಗೆಯ ಕಾಲದಲ್ಲಿದ್ದ ವ್ಯಕ್ತಿಯೂ ಸಹ ಈ ವಿಷಯವನ್ನು ಒಪ್ಪುತ್ತಾರೆ.

ಸೈನಿಕರು ಈ ಕಾರ್ಯವು ತಮ್ಮ ಧರ್ಮವನ್ನು ಕೆಡಿಸುವುದಕ್ಕಾಗಿ ಮಾಡಿದ್ದಾರೆ ಎಂದು ಮನಗಂಡರು. ಇದು ಇವರ ಕೋಪವನ್ನು ಜಾಸ್ತಿಮಾಡಿ ಬ್ರಿಟೀಷರ ಆಳ್ವಿಕೆಯನ್ನು ತೊಡೆದುಹಾಕಲು ತೀರ್ಮಾನಿಸಿದರು. ಇದೂ ಸಹ ದಂಗೆಗೆ ಬಹು ಮುಖ್ಯವಾದ ತಕ್ಷಣದ ಕಾರಣವಾಯಿತು.

## 4.3 ಮಹಾದಂಗೆಯ ಗತಿ ಮತ್ತು ದಂಗೆಯನ್ನು ಅಡಗಿಸಿದ್ದು

1857ರಲ್ಲಿ ಬ್ಯಾರಕ್‌ಪುರ್ ಮತ್ತು ಬರ್ಹಾನ್‌ಪುರ (ಬಂಗಾಲ)ಗಳಲ್ಲಿ ದಂಗೆಗಳು ಪ್ರಾರಂಭವಾದವು. ಆದರೆ ಈ ದಂಗೆಯು ವಿದ್ಯುಕ್ತವಾಗಿ ಮೇ 10, 1857ರಂದು ಮೀರತ್‌ನಲ್ಲಿ ಪ್ರಾರಂಭವಾಯಿತು. 24ನೇ ಏಪ್ರಿಲ್‌ನಲ್ಲಿ ಸಾಮಾರು 85ಜನ ಸೈನಿಕರು ಗುಂಡುಗಳನ್ನು ಉಪಯೋಗಿಸುವುದಿಲ್ಲವೆಂದು ವಿರೋಧಿಸಿದರು. 9ನೇ ಮೇ ತಿಂಗಳು ಅವರೆಲ್ಲರನ್ನೂ ವಿಚಾರಣೆ ಮಾಡಿ 10 ವರ್ಷಗಳ ಕಠಿಣ ಸಜೆಯನ್ನು ವಿಧಿಸಲಾಯ್ತು. 10ನೇ ಮೇ ತಿಂಗಳ ಸೈನಿಕರು ದಂಗೆ ಎದ್ದರು. ತಮ್ಮ ಅಧಿಕಾರಿಗಳನ್ನು ಗುಂಡಿಕ್ಕಿ ಸಾಯಿಸಿದರು. ಜೈಲಿಗೆ ನುಗ್ಗಿ ತಮ್ಮ ಸಹೋದ್ಯೋಗಿಗಳನ್ನು ಬಿಡುಗಡೆಗೊಳಿಸಿದರು. ಇಂಗ್ಲೀಷರ ಬಂಗಲೆಗಳನ್ನು ಬೆಂಕಿಗೆ ಆಹುತಿ ನೀಡಿದರು ಮತ್ತು ದೆಹಲಿಗೆ ಓಡಿಸಿದರು. ಹೀಗೆ ದಂಗೆಯು ಪ್ರಾರಂಭವಾಯಿತು. ಮೇ 10ರ ರಾತ್ರಿಯು ಭಯಾನಕ ರಾತ್ರಿಯಾಗಿತ್ತು.

ಸಾಮಾನ್ಯವಾಗಿ ಹೇಳಬೇಕೆಂದರೆ ಉತ್ತರ ಭಾರತದ ಪೂರ್ತಿ ಅಂದರೆ ಪಶ್ಚಿಮ ಬಂಗಾಳದಿಂದ ಹಿಡಿದು ದೆಹಲಿಯವರೆಗೆ ಬ್ರಿಟೀಷರ ವಿರುದ್ಧ ದಂಗೆಯು ಕಾಣಿಸಿಕೊಂಡಿತು. ಆದರೂ ಈ ದಂಗೆಯ ಪ್ರಮುಖ ಕೇಂದ್ರಗಳೆಂದರೆ ದೆಹಲಿ, ಕಾನ್ಪುರ, ಲಕ್ನೋ ಮತ್ತು ಮಧ್ಯಭಾರತ. ಮೇ ತಿಂಗಳಿಂದ ಸೆಪ್ಟಂಬರ್ 1857ರವರೆಗೆ ಹಲವು ರೀತಿಯ ಗಲಭೆ, ಕ್ಷೋಬೆಗಳು ಹೆಚ್ಚಾಗಿದ್ದವು.

**ದೆಹಲಿ :**

ಮೀರತ್‌ನ ದಂಗೆಕೋರರು ದೆಹಲಿಯನ್ನು ತಲುಪಿ ನಗರವನ್ನು ವಶಪಡಿಸಿಕೊಂಡು ಹಲವು ದೊಡ್ಡ ಶ್ರೀಮಂತ ಯೂರೋಪಿಯನ್ನರನ್ನು ಕೊಂದು ಹಾಕಿದರು. ನಂತರ ಅರಮನೆಯನ್ನು ವಶಪಡಿಸಿಕೊಂಡು ಕೊನೆಯ ಮೊಗಲ್ ದೊರೆಯಾದ ಎರಡನೇ ಬಹದ್ದೂರ್‌ಷಾನನ್ನು ಸಾಮ್ರಾಟನೆಂದು ಘೋಷಿಸಿದರು. ದಂಗೆಕೋರರು ಇತರೇ ಭಾಗಗಳಿಂದಲೂ ದೆಹಲಿಯವರೆಗೆ ಬಂದು ಪ್ರವೇಶಿಸಿದರು. ಕೆಲವೇ ದಿನಗಳಲ್ಲೇ ದೆಹಲಿಯನ್ನು ಕಳೆದುಕೊಂಡು ಬ್ರಿಟೀಷರ ಗೌರವವಕ್ಕೆ ಕಳಂಕ ಹಚ್ಚಿದಂತಾಯ್ತು. ಅದೃಷ್ಟವಶಾತ್ ಪಂಜಾಬಿನ ಕಮಿಷನರ್ ಸರ್‌ಜಾನ್ ಲಾರೆನ್ಸ್ ತನ್ನ ಸೈನ್ಯವನ್ನು ತನ್ನ ಅಧೀನದಲ್ಲೇ ಇಟ್ಟುಕೊಂಡಿದ್ದು ಮತ್ತು ಪಂಜಾಬಿ ಸೈನಿಕರು ನಂಬಿಕಸ್ತರಾಗಿದ್ದರು. ಇವರ ಸಹಾಯದಿಂದ ಲಾರೆನ್ಸ್ ದೆಹಲಿಯ ಮೇಲೆ ದಾಳಿ ಇಟ್ಟನು. ಸುಮಾರು 3 ತಿಂಗಳ ಕಾಲ ಈ ಆಕ್ರಮಣ ಮುಂದುವರಿಯಿತು. ಎರಡೂ ಕಡೆಗಳಲ್ಲಿ ಸಾವಿರಾರು ಸೈನಿಕರು ಪ್ರಾಣ ಕಳೆದುಕೊಂಡರು, ಕೊನೆಯಲ್ಲಿ ಸರ್ ಜಾನ್ ನಿಕೋಲ್ಸನು ದೆಹಲಿಯನ್ನು ತನ್ನ ವಶಕ್ಕೆ ತೆಗೆದುಕೊಂಡನು. ಆದರೆ ಅವನು ತನ್ನ ಪ್ರಾಣವನ್ನು ಕಳೆದುಕೊಂಡನು.

ದೆಹಲಿಯನ್ನು ನುತ್ತಿಗೆ ಹಾಕಿ ರಕ್ತಥೋಕುಳಿಯಾಡಿದರು ಬ್ರಿಟೀಷರು, ಭಾರತೀಯರನ್ನು ಭಯಬೀತಗೋಳಿಸಿದರು. ಬಹುದ್ದೂರ್‌ಷಾನನ್ನು ಹುಮಾಯುನ್ ಗುಮ್ಮಟದಿಂದ ಬಂಧಿಸಿದರು. ಅವನ ಮಕ್ಕಳಾದ ಮಿರ್ಜಾ ಮುಘಲ್ ಮತ್ತು ಮಿರ್ಜಾ ಖಿಜರ್ ಸುಲ್ತಾನ್ ಮತ್ತು ಅವನ ಮೊಮ್ಮಗ ಮಿರ್ಜಾ ಅಬುಬೇಕರ್‌ರನ್ನು ಲೆಫ್ಟಿನೆಂಟ್ ಹಡ್ಸನ್‌ನ್ನು ಕೊಂದು ಹಾಕಿದನು. ದಂಗೆಗೆ ಉತ್ತೇಜನ ನೀಡಿದ ಕಾರಣವನ್ನು ನೀಡಿ ಬಹಾದೂರ್‌ಷಾನನ್ನು ಜೀವಾವಧಿ ಶಿಕ್ಷೆ ನೀಡಿ ರಂಗೂನಿನ ಜೈಲಿಗೆ ಕಳುಹಿಸಿದರು. ದೇಶದಿಂದ ದೂರಾದ ಬಹಾದೂರ್‌ಷಾನ್ನು 1862 ದುಃಖಿತವಾಗಿ, ತನ್ನ 76ರ ಮುಪ್ಪಿನಲ್ಲಿ ತೀರಿಹೋದನು. ಇದರೊಂದಿಗೆ ಮೊಗಲ್ ಸಾಮ್ರಾಜ್ಯವು ಕೊನೆಗೊಂಡಿತು.

### ಕಾನ್ಪುರ :

ಧೊಂಡುಪನ್ ಎಂದು ಹೆಸರಾದ ಕೊನೆಯ ಪೇಶ್ವೆಯ ದತ್ತು ಮಗನಾದ ನಾನಾ ಸಾಹೇಬನು ಕಾನ್ಪುರದಲ್ಲಿ ದಂಗೆಯ ನಾಯಕತ್ವ ವಹಿಸಿದ್ದನು. ಅವನು ಬಹಳ ಧೈರ್ಯಶಾಲಿಯೂ ಹಾಗು ಕುಶಲಮತಿಯೂ ಆಗಿದ್ದರು. ದಂಗೆಕಾರರು ಇವನನ್ನು ಪೇಶ್ವೆಯೆಂದು ಘೋಷಿಸಿದರು. ಇಂಗ್ಲೀಷರು ಸುಮಾರು ಮೂರು ವಾರಗಳ ಕಾಲ ಹೋರಾಡಿದರೂ ಕೊನೆಗೆ ದಂಗೆಕಾರರ ಮುಂದೆ ಬಂದು ನಿಂತರು. ನಾನಾಸಾಹೇಬನು ಅವರೆಲ್ಲರನ್ನು ಕ್ಷೇಮವಾಗಿ ಕರೆದುಕೊಂಡು ಹೋಗುವುದಾಗಿ ಭರವಸೆ ನೀಡಿದ್ದರೂ ಗಂಗಾ ನದಿಯ ಸತೀಚೌರಾಘಾಟ್‌ನಲ್ಲಿ ಜನರ ಗುಂಪು ಅವರ ಮೇಲೆ ದಾಳಿ ಮಾಡಿದರು. ಸುಮಾರು 280 ಮಂದಿ ಮಹಿಳೆಯರು ಮತ್ತು ಮಕ್ಕಳು ದಂಗೆಕಾರರಿಂದ ರಕ್ಷಿಸಲ್ಪಟ್ಟರು, ಆದರೂ ಕೊನೆಗೆ ಅವರೆಲ್ಲರನ್ನು ಕೊಂದು ಹಾಕಲಾಯಿತಲ್ಲದೇ ಅವರ ದೇಹಗಳನ್ನು ಬಾವಿಯಲ್ಲಿ ಎಸೆಯಲಾಯಿತು. ಇದು ಇಂಗ್ಲೀಷರಲ್ಲಿ ದ್ವೇಷವನ್ನು ಬೆಳೆಸಿ ಇವರ ಸಂಬಂಧವು ಕೆಟ್ಟುಹೋಯಿತು. ಜನರಲ್ ನೀಲ್‌ನು ಹಲವು ಅಮಾಯಕ ಜನರನ್ನು ಗಲ್ಲಿಗೇರಿಸಿದನು. ಅವನ ಹೆಸರನ್ನು ಕಂಡರೆ ಜನರು ರೋಸಿಹೋಗುತ್ತಿದ್ದರು. ಅಂತಿಮವಾಗಿ ಜನರಲ್ ಹ್ಯಾವ್‌ಲಾಕನು ನಾನಾಸಾಹೇಬನನ್ನು ಸೋಲಿಸಿದನು. ನಾನಾಸಾಹೇಬನು ನೇಪಾಳದ ಕಡೆಗೆ ಓಡಿ ಹೋದ ನಂತರ ಅವನ ಬಗ್ಗೆ ಪುನಃ ಯಾವುದೇ ವಿಷಯಗಳೂ ತಿಳಿಯಲಿಲ್ಲ.

### ಲಕ್ನೋ :

ಸಂಪೂರ್ಣ ಔದ್ ಪ್ರಾಂತ್ಯವು ಸ್ವತಂತ್ರವಾಯಿತು. ಆದರೆ ಇದರ ರಾಜಧಾನಿ ಲಕ್ನೋ ಮಾತ್ರ ಇಂಗ್ಲೀಷರ ಕೈವಶದಲ್ಲಿತ್ತು ಲಕ್ನೋದಲ್ಲಿ ಈ ದಂಗೆಯ ನಾಯಕತ್ವವನ್ನು ವಹಿಸಿದವರು ಅಲಿಷಾ, ನವಾಬ್ ವಾಜಿದ್ ಅಲಿಷಾನ ಹೆಂಡತಿ ಬೇಗಂ ಹಜರತ್ ಮಹಲ್ ಮುಂತಾದವರು. ದಂಗೆಕಾರರು ಔಧ್‌ನ ಮುಖ್ಯ ಕಮಿಷನರ್ ಸರ್ ಹೆನ್ರಿಲಾರೆನ್ಸ್ ಕಲೇರಿಯನ್ನು ವಶಪಡಿಸಿಕೊಂಡರು. ಅಲ್ಲದೇ 8 ಮಂದಿ ಪುರುಷ ಮತ್ತು ಮಹಿಳೆಯರನ್ನು ಮತ್ತು ಬ್ರಿಟೀಷರಿಗೆ ಸೆರೆಯಾಗಿದ್ದ ಕೆಲವು ಭಾರತೀಯ ಸೈನಿಕರನ್ನು ವಶಪಡಿಸಿಕೊಂಡರು. ನಂತರದಲ್ಲಿ ಲಾರೆನ್ಸ್‌ನನ್ನು ಕೊಲ್ಲಲಾಯಿತು. ಆದರೂ ಇದರ ವಶಪಡಿಸಿಕೊಳ್ಳುವಿಕೆಗೆ ಐದು ತಿಂಗಳಾಯಿತು. ಜನರಲ್ ಹ್ಯಾವ್‌ಲಾಕ್ ಮತ್ತು ಔಟ್ರಮ್‌ರು ಇವರ ರಕ್ಷಣೆಗೆ ಬಂದರು. ಅವರು ರೆಸಿಡೆನ್ಸಿಗೆ ಬಂದರೂ ಅವರನ್ನೇ ಮುತ್ತಿಗೆ ಹಾಕಲಾಯಿತು. ಅಂತಿಮವಾಗಿ ಸರ್‌ಕಾಲಿನ್ ಕ್ಯಾಂಪ್‌ಬೆಲ್ಲನು ಲಕ್ನೋವನ್ನು ತನ್ನ ವಶಪಡಿಸಿಕೊಂಡನು. ಬೇಗಂ ಹಜರತ್ ಮಹಲ್‌ಳನ್ನು ನೇಪಾಳಕ್ಕೆ ಓಡಿಸಲಾಯ್ತು ಅಲ್ಲಿ ರಕ್ಷಣೆ ತೆಗೆದುಕೊಂಡಳು. ಲಕ್ನೋನ ನಿವಾಸಿಗಳನ್ನು ತೀವ್ರವಾಗಿ ಶಿಕ್ಷಿಸಲಾಯ್ತು.

### ಮಧ್ಯಭಾರತ :

ಮಧ್ಯಭಾರತ ಮತ್ತು ಬುಂದೇಲ್ ಖಂಡದಲ್ಲಿ ದಂಗೆಕಾರರನ್ನು ಮುನ್ನೆಡೆಸಿದವರು, ಜಾನ್ಸಿಯ ರಾಣಿ ಲಕ್ಷ್ಮಿಬಾಯಿ ಮತ್ತು ನಾನಾಸಾಹೇಬನ ಸೈನ್ಯದಲ್ಲಿದ್ದ ಸರದಾರ ತಾಂತ್ಯಾಟೋಪೆ. ಸರ್‌ಹಫ್‌ರೋಸನು ಇವರ ವಿರುದ್ಧ ಸೈನ್ಯವನ್ನು ಮುನ್ನೆಡೆಸಿದನು. ರಾಣಿಲಕ್ಷ್ಮಿಬಾಯಿಯು ಧೈರ್ಯಶಾಲಿಯೂ ಹಾಗೂ ಸಾಹಸಿಯೂ ಆದ ನಾಯಕಿಯೆಂದು ತೋರಿಸಿಕೊಂಡಳು. ಈಕೆಯು ಪುರುಷವೇಷ ಧರಿಸಿ ಕುದುರೆಯೇರಿ ಯುದ್ಧದಲ್ಲಿ ತನ್ನ ಕೌಶಲ್ಯವನ್ನು ಮೆರೆದಳು. ಆದರೆ ಜಾನ್ಸಿಯ ಕೆಲವು ಕುತಂತ್ರಿಗಳ ಪಿತೂರಿಯ ಸಹಾಯ ಪಡೆದು ಜಾನ್ಸಿಯನ್ನು ಇಂಗ್ಲೀಷರು ತಮ್ಮ ವಶಕ್ಕೆ ತೆಗೆದುಕೊಂಡರು. ರಾಣಿಯು ಕಪ್ಲಿ ಕಡೆ ನಡೆದಾಗ ಹಫ್‌ರೋಸ್ ಹಿಂಬಾಲಿಸಿದ. ರಾಣಿಯು ಸೋತು ಹೋದರೂ ಗ್ವಾಲಿಯರ್‌ನ್ನು ವಶಪಡಿಸಿಕೊಂಡಾಗ ಹಫ್‌ರೋಸ್ ಪುನಃ ದಾಳಿ ಮಾಡಿದ್ದ ಘೋರ ಯುದ್ಧ ನಡೆಯಿತು. ರಾಣಿಯು ಸೋತು ಓಡಿ ಹೋಗಬೇಕಾಯಿತು. ಇಂಗ್ಲೀಷರು ಬೆನ್ನಟ್ಟಿದರು. ಆಕೆಯು 23 ವರ್ಷದಲ್ಲಿ ಅಂದರೆ 17ನೇ ಜೂನ್ 1858ರಲ್ಲಿ ಆಕೆಯನ್ನು ಕೊಲೆಮಾಡಲಾಯಿತು. ತಾತ್ಯಾಟೋಪಿಯನ್ನು ಸಹ ಸೋಲಿಸಿ ಅವನು ಓಡಿಹೋದಾಗ ಹಿಂಬಾಲಿಸಿ, ವಶಪಡಿಸಿಕೊಂಡು ಏಪ್ರಿಲ್8, 1859ರಲ್ಲಿ ಗಲ್ಲಿಗೇರಿಸಲಾಯಿತು.

ಹರ್ಯಾಣ ಮತ್ತು ಪಂಜಾಬ್‌ನ ಜನರು ಉತ್ಸಾಹದಿಂದ ದಂಗೆಯಲ್ಲಿ ಭಾಗವಹಿಸಿದರು. ಪಂಜಾಬ್‌ನಲ್ಲಿ ಹಲವು ದಂಗೆಗಳು ಮತ್ತು ಫಿರೋಜ್‌ಪುರ, ಪೇಷಾವರ್, ಜಲಂಧರ್ ಮತ್ತು ಇತರ ಸ್ಥಳಗಳಲ್ಲಿ ದಂಗೆ ಬುಗಿಲೆದ್ದಿತು. ದಂಗೆಯು ಸತಾರ, ಪಂಡರಾಪುರ, ಕೊಲ್ಹಾಪುರ, ನಾಸಿಕ್, ಹೈದರಾಬಾದ್, ಕರ್ನೂಲ್, ಗುಂಟೂರು, ಮೈಸೂರು, ಧಾರವಾಡ, ಜಮಖಂಡಿ, ಕೊಪ್ಪಳ, ಬಿಜಾಪುರ ಮತ್ತು ಬೆಳಗಾಂನಲ್ಲಿ ಆರ್ಕಾಟ್ ಸೇಲಂ, ತಂಜಾವೂರು ಮದುರೈ, ತಿರುನೆಲ್ವೇಲಿ, ಕ್ವಿಲಾನ್, ಕೊಚ್ಚಿನ್, ಕ್ಯಾಲಿಕಟ್ ಮತ್ತು ಗೋವಾದಲ್ಲೂ ದಂಗೆಗಳು ನಡೆದವು. ಆದರೆ ಈ ದಂಗೆಗಳನ್ನು ಸಂಪೂರ್ಣವಾಗಿ ಹತ್ತಿಕ್ಕಲಾಯಿತು. ಎರಡು ವರ್ಷಗಳಲ್ಲೆ ಈ ದಂಗೆಯು ಕೊನೆಗೊಂಡಿತು.

## 4.4 ದಂಗೆಯ ವಿಫಲತೆಗೆ ಕಾರಣಗಳು

1857ರ ಈ ದಂಗೆಯೂ ಭಾರತದ ಎಲ್ಲಾ ಪ್ರದೇಶಗಳಲ್ಲೂ ನಡೆದರೂ ಭಾರತದ ಎಲ್ಲಾ ಜನರ ಸಹಕಾರವನ್ನು ಪಡೆಯಲಿಲ್ಲ. 550 ದೇಶೀಯ ರಾಜ್ಯಗಳ ಪೈಕಿ ಕೆಲವೇ ರಾಜರು ಭಾಗವಹಿಸಿದ್ದರು. ಜನಸಾಮಾನ್ಯರು ಮತ್ತು ಎಲ್ಲಾ ಮಿಲಿಟರಿ ಅಧಿಕಾರಿಗಳೂ ಭಾಗವಹಿಸಲಿಲ್ಲ. ಇಂಗ್ಲೀಷರು ದಂಗೆಯನ್ನು ಕಷ್ಟಪಟ್ಟು ಧೈರ್ಯದಿಂದ ಎದುರಿಸಿ ಹತ್ತಿಕ್ಕಿದರು. ಈ ದಂಗೆಯ ವಿಫಲತೆಗೆ ಕೆಲವಾರು ಕಾರಣಗಳನ್ನು ನೀಡಬಹುದು.

1. ಈ ದಂಗೆಯು ಸ್ಥಳೀಯವಾಗಿದ್ದು, ಕೆಲವೇ ಪ್ರಾಂತ್ಯಕ್ಕೆ ಸೀಮಿತವಾಗಿದ್ದು ಅವ್ಯವಸ್ಥೆಯಿಂದ ಕೂಡಿತ್ತು. ಬಾಂಬೆ ಮತ್ತು ಮದ್ರಾಸ್ ಪ್ರೆಸಿಡೆನ್ಸಿಗಳ ಸೈನ್ಯವು ಭಾಗವಹಿಸಿರಲಿಲ್ಲ. ಸಿಂಧ್, ರಾಜಾಸ್ತಾನದಲ್ಲಿ ಶಾಂತಿಯಿಂದಿದ್ದರು. ನೇಪಾಳವು ದಂಗೆ ಹತ್ತಿಕ್ಕಲು ನೆರವಾಯಿತು. ಆದರೆ ಬಿಹಾರ್, ಔದ್, ರೋಹಿಲ್ ಖಂಡ ದೆಹಲಿ ಮುಂತಾದ ಕಡೆ ದಂಗೆ ಹೆಚ್ಚಾಗಿತ್ತು.
2. ಬ್ರಿಟೀಷರ ಸಂಪನ್ಮೂಲಗಳು ಭಾರತೀಯರಿಗಿಂತ ಪ್ರಭಲವಾಗಿದ್ದವು. ಅದೃಷ್ಟವಶಾತ್ ಕ್ರಿಮಿಯನ್ ಯುದ್ಧ ಮತ್ತು ಚೀನಾದ ಮೇಲಿನ ಯುದ್ಧಗಳು 1856ರಲ್ಲಿ ಕೊನೆಗೊಂಡು ಬ್ರಿಟೀಷರ ಸುಮಾರು 1,20,000 ಸೈನಿಕರು ಭಾರತಕ್ಕೆ ಬಂದಿಳಿದರು. ಅಲ್ಲದೆ 3,10,000ಹೆಚ್ಚಿನ ಸೈನಿಕರನ್ನು ನೇಮಕ ಮಾಡಿಕೊಳ್ಳಲಾಯಿತು. ಭಾರತೀಯ ಸೈನಿಕರಲ್ಲಿ ಬಹಳಷ್ಟು ಕಡಿಮೆ ಗನ್ನುಗಳು ಮತ್ತು ಜನರಿದ್ದು ಅವರು ಕತ್ತಿ ಮತ್ತು ಗುರಾಣಿಯಿಂದ ಹೋರಾಡಿದರು. ಆದರೆ ಬ್ರಿಟೀಷರು ಆಧುನಿಕ ಶಸ್ತ್ರಾಸ್ತ್ರಗಳಾದ ಎನ್‌ಫೀಲ್ಡ್ ರೈಫಲ್ಸ್‌ಗಳು ಮತ್ತು ಟೆಲಿಗ್ರಾಫ್ ಸೌಲಭ್ಯದಿಂದ ಶತ್ರುಗಳ ಸೈನಿಕ ಚಲನವಲನ ತಿಳಿದುಕೊಂಡು ಒಂದು ವ್ಯವಸ್ಥಿತ ಯೋಜನೆ ತಯಾರಿಸಿ ದಂಗೆಯನ್ನು ಅಡಗಿಸಿದರು.
3. 1857ರ ದಂಗೆಯು ಊಳಿಗಮಾನ್ಯ ಅಂಶಗಳನ್ನು ಹೊಂದಿದ್ದು ಕಡಿಮೆ ರಾಷ್ಟ್ರೀಯ ಅಂಶಗಳನ್ನು ಹೊಂದಿದ್ದವು. ಔದ್ ರೋಹಿಲ್‌ಖಂಡ್ ಮತ್ತು ಉತ್ತರ ಭಾರತದ ಇತರೆಡೆಗಳಲ್ಲಿ ಊಳಿಗಮಾನ್ಯ ಲಕ್ಷಣಗಳು ಹೋರಾಟ ನಡೆಸಿದವು. ಆದರೆ ಇತರೆ ಊಳಿಗಮಾನ್ಯರಾದ ಘಟಿಯಾಲದರಾಜ, ಗ್ವಾಲಿಯರ್, ಹೈದರಾಬಾದ್ ಮುಂತಾದವರು ಬ್ರಿಟೀಷರಿಗೆ ಸಹಾಯ ಮಾಡಿ ದಂಗೆಯನ್ನು ಅಡಗಿಸಿದರು. ಬ್ರಿಟೀಷರ ಭರವಸೆಗಳನ್ನು ನಂಬಿದ ದೇಶೀಯ ರಾಜರು ದಂಗೆಗೆ ಸಹಕರಿಸಲಿಲ್ಲ.
4. ಈ ದಂಗೆಯು ಅಷ್ಟೊಂದು ವ್ಯವಸ್ಥಿತ ರೀತಿಯಲ್ಲಿ ನಡೆಯಲಿಲ್ಲ. ಕಾರ್ಯತಂತ್ರದಲ್ಲಿ ಯಾವುದೇ ಒಳ್ಳೆಯ ವ್ಯವಸ್ಥೆ ಇರಲಿಲ್ಲ. ಕೇವಲ ಬಂಡ ಧೈರ್ಯ ಮಾತ್ರ ಇವರಲ್ಲಿದ್ದಿತು. ಗೆರಿಲ್ಲಾ ಯುದ್ಧಗಳು ಆಶ್ಚರ್ಯಕರವಾಗಿ ಮೇಲೆ ಬೀಳುವುದು ಇವುಗಳು ಅವರಿಗೆ ಸ್ವಾತಂತ್ರ್ಯ ತರುವಂತಹವಾಗಿರಲಿಲ್ಲ.
5. ದಂಗೆಕಾರರಲ್ಲಿ ಯಾವುದೇ ಒಂದು ಸಾಮಾನ್ಯ ಗುರಿಯಿರಲಿಲ್ಲ. ಇವರಲ್ಲಿದ್ದುದು ಕೇವಲ ವಿದೇಶೀ ವಿರೋಧಿ ಧೋರಣೆ ಮಾತ್ರ ಬಹಾದೂರ್‌ಷಾನು ದೆಹಲಿಯಲ್ಲಿ ಸಾಮ್ರಾಟ್, ನಾನಾಸಾಹೇಬ್ ಪೇಶ್ವಾ ಎಂಬುದಾಗಿ ಘೋಷಿಸಿಕೊಂಡರು. ಹಿಂದೂ

ಮುಸ್ಲಿಂ ಏಕತೆಯು ಅಷ್ಟಾಗಿರಲಿಲ್ಲ. ರೈತರು ಮತ್ತು ಕೆಳಸ್ಥರದ ಜನರು ಕ್ರಿಯಾತ್ಮಕವಾಗಿ ಭಾಗವಹಿಸಲಿಲ್ಲ. ತಮ್ಮ ಕಡುವೈರಿಗಳನ್ನು ಹಿಂದೂ-ಮುಸ್ಲಿಂ ಭೇದ-ಭಾವವು ಗುರುತಿಸಲು ಪ್ರಯತ್ನಪಡಲಿಲ್ಲ.

6. ಕಂಪನಿಯ ಸೈನ್ಯವನ್ನು ಉತ್ತಮ ಸಾಮರ್ಥ್ಯವನ್ನು ಹೊಂದಿದ ಸೈನಿಕ ನಾಯಕರಾದ ಲಾರೆನ್ಸ್, ನಿಕೋಲ್ಸನ್, ಔಟ್ರಮ್, ಹ್ಯಾವ್‌ಲಾಕ್ ಎಡ್ವರ್ಡ್ಸ್ ಮುಂತಾದವರಿದ್ದರು. ಚಾಕಚಕ್ಯತೆಯಿಂದ ಯುದ್ಧಮಾಡಿ ದಂಗೆಕಾರರನ್ನು ನಿಯಂತ್ರಿಸಿ, ದಂಗೆಯನ್ನು ಅಡಗಿಸಿದರು.

7. ಈ ದಂಗೆಯು ಎಲ್ಲಾ ಕಡೆಯೂ ಒಂದೇ ವೇಳೆಯಲ್ಲಿ ನಡೆಯಲಿಲ್ಲ ಇದು ಇವರಲ್ಲಿದ್ದ ಅನೈಕ್ಯತೆಯನ್ನು ತೋರಿಸಿತು. ಇದರ ಉಪಯೋಗವನ್ನು ಬ್ರಿಟೀಷರು ಪಡೆದರು.

8. ದಂಗೆಯ ನಾಯಕರ ಮಿಲಿಟರಿ ಮತ್ತು ರಾಜಕೀಯ ಅಂಶಗಳನ್ನು ಒಳ್ಳೆಯ ಮುಂದಾಲೋಚನೆ ಇರಲಿಲ್ಲ. ಸಮರ್ಥರೆಂದರೆ ರಾಣಿ ಲಕ್ಷ್ಮಿಬಾಯಿ, ತಾತ್ಯಾಟೋಪಿ, ನಾನಾಸಾಹೇಬ್‌ರಿದ್ದರೂ ಅವರಿಗೆ ಸೇನಾನಾಯಕರಾಗಿ ಅನುಭವವಿರಲಿಲ್ಲ.

9. ಬ್ರಿಟೀಷರಿಗೆ ಟೆಲಿಗ್ರಾಫ್ ಮತ್ತು ಇತರೇ ಸಂಪರ್ಕ ಸಾಧನಗಳು ಅವರ ನಿಯಂತ್ರಣದಲ್ಲಿದ್ದು, ಸಮುದ್ರಗಳೂ ಸಹ ನಿಯಂತ್ರಣದಲ್ಲಿ ಇದ್ದುದರಿಂದ ಭಾರತಕ್ಕೆ ಎಲ್ಲಿಂದ ಬೇಕಾದರೂ ತಕ್ಷಣದಲ್ಲಿ ಸೈನಿಕರನ್ನು ಕರೆಸಿಕೊಳ್ಳುತ್ತಿದ್ದರು.

10. ದಂಗೆಯ ನಾಯಕರು ಯಾವುದೇ ಒಂದು ಯೋಜನೆಯನ್ನೂ ಇಟ್ಟುಕೊಂಡಿರಲಿಲ್ಲ ಮತ್ತು ಜನರ ಮುಂದೆಯು ಅವರ ಯೋಜನೆಯನ್ನು ಇಡಲಿಲ್ಲ, ಅವರ ಆಸಕ್ತಿಗಳನ್ನು ಕಾಪಾಡಲು ಯಾವುದೇ ಯೋಜನೆ ತರಲಿಲ್ಲ ಇದರಿಂದಾಗಿ ದಂಗೆಯಲ್ಲಿ ಯಾವುದೇ ರೀತಿಯ ಆಸಕ್ತಿಯಿರಲಿಲ್ಲ.

## 4.5 ದಂಗೆಯ ಪರಿಣಾಮಗಳು

1857ರ ದಂಗೆಯು ಒಂದು ಶಕೆಯನ್ನು ಮುಗಿಸಿ, ಬ್ರಿಟೀಷ್ ಭಾರತದ ಇತಿಹಾಸದಲ್ಲಿ ಒಂದು ಹೊಸ ಶಕೆಯನ್ನು ಆರಂಭಿಸಿದರೆಂದು ಹೇಳಬಹುದು. ಇದು ಬ್ರಿಟೀಷರ ಆಡಳಿತ ವ್ಯವಸ್ಥೆ, ನೀತಿಗಳು ಮತ್ತು ಬ್ರಿಟೀಷರ ನೋಟದಲ್ಲಿ ಬದಲಾವಣೆಯನ್ನು ತಂದಿತು.

ನವಂಬರ್1, 1858ರಲ್ಲಿ ಬ್ರಿಟೀಷ್ ಮಹಾರಾಣಿಯ ಘೋಷಣೆಯಾಗಿ, ಭಾರತದ ಆಡಳಿತವನ್ನು ಈಸ್ಟ್ ಇಂಡಿಯಾ ಕಂಪನಿಯ ನಿಯಂತ್ರಣದಿಂದ ಬ್ರಿಟೀಷ್ ಚಕ್ರವರ್ತಿಗೆ ವರ್ಗಾಯಿಸಲಾಯ್ತು, ಕೋರ್ಟ್ ಆಫ್ ಡೈರೆಕ್ಟರ್‌ನ್ನು ಇಂಡಿಯಾ ಕೌನ್ಸಿಲ್‌ಗೆ ಬದಲಾವಣೆಯಾಯ್ತು. ಈ ಇಂಡಿಯಾ ಕೌನ್ಸಿಲ್‌ನಲ್ಲಿ ಸೆಕ್ರೆಟರಿ ಆಫ್ ಸ್ಟೇಟ್ ಎಂಬುವವನಿದ್ದು, ಇವು ಬ್ರಿಟೀಷ್ ಕ್ಯಾಬಿನೆಟ್ ಸದಸ್ಯನೂ ಆಗಿದ್ದನು.

ಬ್ರಿಟೀಷರು ಇನ್ನು ಮುಂದೆ ಪ್ರಾದೇಶಿಕ ವಿಸ್ತರಣಾ ನೀತಿಯನ್ನು ತೆಗೆದುಹಾಕಿದರು ಮತ್ತು ದೇಶೀಯ ರಾಜರಿಗೆ ಅವರ ಪ್ರದೇಶ, ಗೌರವ ಮತ್ತು ಹಕ್ಕುಗಳಿಗೆ ಚ್ಯುತಿ ತರುವುದಿಲ್ಲವೆಂದು ಭರವಸೆ ನೀಡಿದರು. ರಾಜರು ಮಕ್ಕಳನ್ನು ದತ್ತು ತೆಗೆದುಕೊಳ್ಳುವುದನ್ನು ಒಪ್ಪಿಕೊಂಡರು. ಔದ್‌ನ ತಾಲ್ಲೂಕಾದಾರ್‌ಗಳು ಮತ್ತು ಭೂಮಿಯನ್ನು ವಾಪಸ್ಸು ಪಡೆಯಲು ಒಪ್ಪಿಗೆಯಿತ್ತರು. ದೇಶೀಯ ರಾಜರು ಮತ್ತು ಭೂ ಮಾಲೀಕರು ಸಾಮ್ರಾಜ್ಯದ ಸ್ಥಂಭಗಳೆಂದು ಅರಿತು ಗೌರವಿಸಿದರು. ತಮ್ಮ ರಾಜಕೀಯ ಘಟಕವಾಗಿ ಭಾರತವನ್ನು ಕಂಡರು ಇಂಗ್ಲೇಡಿನ ಕ್ರೌನ್‌ನ ಅಧಿಕಾರವೇ ಅಂತಿಮವೆಂದು ತಿಳಿಸಲಾಯ್ತು.

ಬ್ರಿಟೀಷರು ಜಾತಿ, ಪ್ರಾದೇಶಿಕ ಮತ್ತು ಮತೀಯ ಅಂಶಗಳನ್ನು ಉತ್ತೇಜಿಸಿದರು. ಒಡೆದು ಆಳುವ ನೀತಿಯನ್ನು ಆಡಳಿತದಲ್ಲಿ ಅಳವಡಿಸಿಕೊಂಡು. ಮುಸ್ಲಿಂರನ್ನು ಬಹಾದೂರ್‌ಷಾನು ದಂಗೆಗೆ ಸಹಕಾರ ನೀಡಿದ್ದುದನ್ನು ನೆಪ ಮಾಡಿಕೊಂಡು ಕಡೆಗಣಿಸಿದರು. ಮುಂದೆ ಹಿಂದೂಗಳ ರಾಷ್ಟ್ರೀಯತೆಯ ಹೆಚ್ಚಳವನ್ನು ನೋಡಿದ ಬ್ರಿಟೀಷರು ಮತ್ತೆ ಮುಸ್ಲಿಂರನ್ನು ಪ್ರೇರೇಪಿಸಿದರು. ಇದಲ್ಲದೇ ಹಿಂದೂಗಳು ಮತ್ತು ಸಿಖ್‌ರ ನಡುವೆಯೂ ಸಹ ಒಡೆದು ಆಳುವ ನೀತಿಯನ್ನು ಪ್ರದರ್ಶಿಸಿದರು.

ಭಾರತೀಯ ಸೈನ್ಯವನ್ನು ಪುನರ್ವ್ಯವಸ್ಥೆಗೊಳಿಸಿದರು,ಬ್ರಿಟೀಷ್ ಸೈನಿಕರ ಪಡೆಯನ್ನು ಹೆಚ್ಚಾಗಿಸಿದರು ಮತ್ತು ಅವರಿಗೆ ಹೆಚ್ಚಿನ ಶಸ್ತ್ರಗಳನ್ನು ಒದಗಿಸಿದರು. ಸೈನಿಕರ ಪಡೆಗಳು ಜಾತಿ, ಧರ್ಮ, ಧಾರ್ಮಿಕ ಆಧಾರದ ಮೇಲೆ ಸಜ್ಜುಗೊಳಿಸಿದರು. ಉದಾಹರಣೆಗೆ ಸಿಖ್ ರೆಜಿಮೆಂಟ್, ಜಾಟ್ ರೆಜಿಮೆಂಟ್ ಮತ್ತು ಗೂರ್ಖಾ ರೆಜಿಮೆಂಟ್ ಮುಂತಾದವು.

ಬ್ರಿಟೀಷರು ತಮ್ಮ ಏಕಸ್ವಾಮ್ಯವನ್ನು ನಾಗರೀಕ ಸೇವೆಯ ಕ್ಷೇತ್ರದಲ್ಲಿ ಇಟ್ಟುಕೊಂಡಿದ್ದರು. 1861ರ ಭಾರತೀಯ ನಾಗರೀಕ ಸೇವೆಯ ಕಾಯ್ದೆ ಪ್ರಕಾರ ಸೇವೆಗಾಗಿ ವಾರ್ಷಿಕ ಪರೀಕ್ಷೆಯನ್ನು ನಡೆಸುತ್ತಿದ್ದರು. ಆದರೆ ಇದನ್ನು ಲಂಡನ್‌ನಲ್ಲಿ ನಡೆಸುತ್ತಿದ್ದ ಭಾರತೀಯರಿಗೆ ಅಷ್ಟೊಂದು ಒಳ್ಳೆಯ ಅವಕಾಶವಿರಲಿಲ್ಲವಾಗಿತ್ತು.

ದಂಗೆಯ ನಂತರ ಭಾರತೀಯರ ಮೇಲಿನ ದೌರ್ಜನ್ಯ ಹೆಚ್ಚಾಯಿತು. ಆದರೆ ಸಾರಿಗೆ ಸಂಪರ್ಕ, ನೀರಾವರಿ ಮತ್ತು ಕೃಷಿ ಮುಂತಾದವುಗಳ ಸುಧಾರಣೆ ತಂದರು. ಆದರೆ ಇವುಗಳು ಜನರಿಗೆ ಲಾಭ ತರದೇ ಬ್ರಿಟೀಷರಿಗೆ ಅನುಕೂಲಕರವಾಗಿತ್ತು ದಂಗೆಯು ಭಾರತೀಯ ಹೋರಾಟವನ್ನು ಹೆಚ್ಚು ಮಾಡಿದ್ದಿತು. ಬ್ರಿಟೀಷರ ವಿರುದ್ಧ ಈರ್ಷ್ಯೆ ಬೆಳೆಸಿಕೊಂಡರು. ಇದರಿಂದ ಬ್ರಿಟೀಷರ ನೀತಿಗಳು ಭಾರತೀಯರಿಗೆ ಅನುಕೂಲ ಸಿಂಧುವಾಗಲಿಲ್ಲ. ಬ್ರಿಟೀಷರು ಮುಂದೆ ಸಾಮಾಜಿಕ ಮತ್ತು ಶೈಕ್ಷಣಿಕ ಸುಧಾರಣೆಗಳನ್ನು ತರುವುದನ್ನು ಮುಂದೆ ಹಾಕಿದರು. ಇಂಗ್ಲೀಷ್ ಶಿಕ್ಷಣವನ್ನೂ ಸಹ ನೀಡಲು ಹಿಂಜರಿದರು. ಏಕೆಂದರೆ ಶಿಕ್ಷಣದಿಂದ ಭಾರತೀಯರು ತಮ್ಮ ಮೇಲೆ ಕಿಡಿಕಾರಬಹುದೆಂದು ತಿಳಿದಿದ್ದರು. ಹೀಗಾಗಿ ಭಾರತೀಯರ ವಿರುದ್ಧ ಬ್ರಿಟೀಷರ ತಮ್ಮ ಬೇಸರವನ್ನು ಹೆಚ್ಚಾಗಿಸಿಕೊಂಡರು.

## 4.6 ಘಟಕದ ಸಾರಾಂಶ

ಈ ಘಟಕವನ್ನು ಅಧ್ಯಯನ ನಡೆಸಿದ ನಂತರ ನಾವುಗಳು ಕೆಳಗೆ ತಿಳಿಸಿದ ವಿಷಯಗಳನ್ನು ಅರ್ಥಮಾಡಿಕೊಂಡೆವು.

- ನಾವು 1857ರ ದಂಗೆಯನ್ನು ಮತ್ತು ಅದರ ಕಾರಣಗಳನ್ನು ತಿಳಿದುಕೊಂಡೆವು.
- ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಮಿಲಿಟರಿ ಮತ್ತು ತಕ್ಷಣದ ಕಾತಣಗಳನ್ನು ತಿಳಿದುಕೊಂಡೆವು
- ಈ ದಂಗೆಯು ಹೇಗೆ ಪ್ರಾರಂಭವಾಯಿತು, ಇದು ಹೇಗೆ ಮುಂದುವರಿಯಿತು.
- ಈ ದಂಗೆಯನ್ನು ಬ್ರಿಟೀಷರು ಹೇಗೆ ಹತ್ತಿಕ್ಕಿದರು ಮತ್ತು ಇಲ್ಲಿ ಯಾವ ನೀತಿಗಳನ್ನು ಪಾಲಿಸಿದರು ಎಂಬುದು ತಿಳಿದುಕೊಂಡೆವು.
- ಈ ದಂಗೆಯ ವಿಫಲತೆಗೆ ಕಾರಣಗಳನ್ನು ತಿಳಿದುಕೊಂಡೆವು.
- ಈ ದಂಗೆಯ ಮೂಲ ಪರಿಣಾಮಗಳನ್ನೂ ಸಹ ಅರ್ಥ ಮಾಡಿಕೊಂಡೆವು.

## 4.7 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. 1857ರ ದಂಗೆಯ ಪ್ರಾಮುಖ್ಯತೆಯನ್ನು ಅಂದಾಜುಮಾಡಿ
2. 1857ರ ದಂಗೆಯ ಕಾರಣಗಳಾವುವು?ವಿವರಿಸಿ.
3. 1857ರ ದಂಗೆಯ ಗತಿಯನ್ನು ಕುರಿತು ತಿಳಿಸಿ.
4. 1857ರ ದಂಗೆಯ ವಿಫಲತೆಯ ಕಾರಣಗಳನ್ನು ಪರಿಶೀಲಿಸಿ
5. 1857ರ ದಂಗೆಯ ಪರಿಣಾಮಗಳನ್ನು ಚರ್ಚಿಸಿ

## 4.8 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


1. Majumdar : The History and Revolt of 1857
2. Dodwell : Cambridge History of India
3. Hansraj · History of Modern India
4. Prasad.L Indian National Movement


ಡಾ. ಎ.ಸೋಮಶೇಖರ್

## ಘಟಕ - 5 ರಾಷ್ಟ್ರೀಯತೆಗೆ ಕಾರಣವಾದ ಅಂಶಗಳು

*ವಿಷಯಾನುಕ್ರಮಣಿಕೆ*

## 5.0 ಉದ್ದೇಶಗಳು

ಈ ಘಟಕವನ್ನು ಅಧ್ಯಯನ ಮಾಡಿದಾಗ ನಾವು ಈ ಕೆಳಗಿನ ಅಂಶಗಳನ್ನು ತಿಳಿಯುತ್ತೇವೆ.

- ಭಾರತ ದೇಶದ ಬಗ್ಗೆ ಮತ್ತು ಭಾರತವನ್ನು ಬ್ರಿಟೀಷರು ಆಕ್ರಮಿಸಿದರ ಬಗ್ಗೆ ತಿಳಿಯುವೆವು.
- ಭಾರತದಲ್ಲಿ ರಾಷ್ಟ್ರೀಯತೆಯ ಏಳ್ಗೆಯ ಬಗ್ಗೆ ಇರುವ ಕಾರಣಗಳನ್ನು ತಿಳಿಯುವೆವು.
- ರಾಜಕೀಯ ಸಂಗತಿಗಳು ರಾಷ್ಟ್ರೀಯತೆಯನ್ನು ಹುಟ್ಟುಹಾಕಲು ಕಾರಣವಾಯಿತು.
- ಸಾಮಾಜಿಕ ನೀತಿಗಳು ಮತ್ತು ಅವುಗಳ ಜಾರಿಯು ರಾಷ್ಟ್ರೀಯತೆಯ ಬೆಳವಣಿಗೆಗೆ ಕಾರಣವಾಯಿತು.
- ಆರ್ಥಿಕ ಅಂಶಗಳು ಭಾರತೀಯರನ್ನು ರಾಷ್ಟ್ರೀಯತೆಯೆಡೆಗೆ ಕರೆದುಕೊಂಡು ಹೋದವು.
- ಶೈಕ್ಷಣಿಕ ಚಟುವಟಿಕೆಗಳು ಮತ್ತು ಪಾಶ್ಚಿಮಾತ್ಯ ಭಾಷೆ, ವಿಜ್ಞಾನ ಮತ್ತು ತಂತ್ರಜ್ಞಾನಗಳ ಜ್ಞಾನವು ರಾಷ್ಟ್ರೀಯತೆಯನ್ನು ಹುಟ್ಟಿಸಿತು.
- ಸಾಂಸ್ಕೃತಿಕ ಅಂಶಗಳು ಹೇಗೆ ಭಾರತೀಯರ ರಾಷ್ಟ್ರೀಯತೆಯನ್ನು ಹುಟ್ಟಿಹಾಕಿಸಿತು. ಮುಂತಾದವು.

## 5.1 ಪೀಠಿಕೆ

19ನೇ ಶತಮಾನದ ದ್ವಿತೀಯಾರ್ಧದಲ್ಲಿ ಭಾರತದಲ್ಲಿ ರಾಷ್ಟ್ರೀಯ ಭಾವನೆಯು ಬೆಳೆಯಲು ಪ್ರಾರಂಭವಾಯಿತು. ಇದು ಒಂದೇ ಕಾರಣದ ಪರಿಣಾಮವಾಗಿಲ್ಲ. ಹಲವು ದಶಕಗಳಿಂದ ಹಲವು ಕಾರಣಗಳಿಂದ ರಾಷ್ಟ್ರೀಯತೆಯ ಮನೋಭಾವವು ಬೆಳೆಯಿತೆನ್ನಬಹುದು.

ರಾಷ್ಟ್ರೀಯತೆ ಎಂಬುದು ಹುಟ್ಟಲಿಲ್ಲ ಅಥವಾ ಜನರ ಮನಸ್ಸಿನಲ್ಲಿರಲಿಲ್ಲ. ಇದನ್ನು ಪಡೆದುಕೊಂಡಿದ್ದೆನ್ನಬಹುದು. ರಾಜಕೀಯ, ಆರ್ಥಿಕ, ನೈತಿಕ ಮತ್ತು ಸಮಾಜೋ ಧಾರ್ಮಿಕ ಪರಿಸ್ಥಿತಿಗಳು ಜನರಲ್ಲಿ ರಾಷ್ಟ್ರೀಯತೆಯ ಅಂಶಗಳನ್ನು ಬೆಳೆಸಿದವೆಂದು ಹೇಳಬಹುದು. ಭಾರತದಲ್ಲಿ ರಾಷ್ಟ್ರೀಯತೆಯು ಬ್ರಿಟೀಷರ ಸಾಮ್ರಾಜ್ಯಶಾಹಿತ್ವದ ವಿರುದ್ಧವಾಗಿತ್ತು. ರಾಷ್ಟ್ರೀಯತೆಯ ಏಳ್ಗೆ ಮತ್ತು ಬ್ರಿಟೀಷ್ ವಿರೋಧಿ ಧೋರಣೆಗಳು ಬ್ರಿಟೀಷ್ ರಾಜ್ಯದ ರಾಜಕೀಯ ಮತ್ತು ಕ್ರಿಯೆಗಳೊಂದಿಗೆ ಸೇರಿಕೊಂಡಿದ್ದಿತು. ಇದು ಬ್ರಿಟೀಷರು ವಿರೋಧವಾಗಿದ್ದು, ವಸಾಹತು ವಿರೋಧಿಯೂ ಆಗಿತ್ತು. ಭಾರತದಲ್ಲಿ ಬ್ರಿಟೀಷರ ದುರಾಕ್ರಮಣವನ್ನು ವಿರೋಧಿಸಿತು. ಭಾರತೀಯ ರಾಷ್ಟ್ರೀಯತೆಯು ಬ್ರಿಟೀಷ್ ಆಳ್ವಿಕೆಯ ವಿರೋಧದಿಂದ ಪ್ರಾರಂಭವಾಗಿ ಅಧಿಕಾರ ಪಡೆಯಲು ವಿರೋಧವನ್ನು ಪ್ರಾರಂಭಿಸಿ 1947ರವರೆಗೂ ಮುಂದುವರೆದು ಸ್ವತಂತ್ರ ಪಡೆಯುವವರೆಗೂ ಮುಂದುವರೆಯಿತು. ಇದೊಂದು ಆಧುನಿಕ ಭಾರತದ ಇತಿಹಾಸದ ಉತ್ಪಾದನೆಯನ್ನಬಹುದು. ಈ ರಾಷ್ಟ್ರೀಯತೆಯ ಅಂಶವೇ ಭಾರತದಲ್ಲಿ 1885ರಲ್ಲಿ ಪ್ರಾರಂಭವಾದ ರಾಷ್ಟ್ರೀಯ ಕಾಂಗ್ರೇಸ್‌ನ ಸ್ಥಾಪನೆಗೆ ಕಾರಣವಾಯಿತೆನ್ನಬಹುದು.

## 5.2 ರಾಷ್ಟ್ರೀಯತೆಯನ್ನು ಮೂಡಿಸಿದ ಕಾರಣಗಳು

ಭಾರತೀಯ ರಾಷ್ಟ್ರೀಯತೆಯು ಒಂದೇ ದಿನದಲ್ಲಿ ಪ್ರಾರಂಭವಾಗಲಿಲ್ಲ. ಇದು ಬಹಳಷ್ಟು ದಿನಗಳಿಂದ ನಡೆದು ಬಂದ ವಿಷಯವಾಗಿದೆ. ರಾಷ್ಟ್ರೀಯತೆಯ ಭಾವನೆಯು ಭಾರತದಲ್ಲಿ ಬೆಳೆಯಲು ಹಲವಾರು ಕಾರಣಗಳಿವೆ. ಇವುಗಳನ್ನು ಈ ಕೆಳಗೆ ವಿಸ್ತಾರವಾಗಿ ಅಧ್ಯಯನ ಮಾಡೋಣ.

### 5.2.1 ಮೂಲಭೂತ ಏಕತೆ

ಭಾರತದಲ್ಲಿ ಈ ರಾಷ್ಟ್ರೀಯತೆಯು ಬ್ರಿಟೀಷರು ಬರುವ ಮುನ್ನವೇ ಅಭಿವೃದ್ಧಿ ಹೊಂದಿದ್ದಿತು. ಬಹಳ ಹಿಂದಿನಿಂದಲೂ ಈ ರಾಷ್ಟ್ರೀಯತೆಯ ಮನೋಭಾವನೆಯು ಆಳವಾಗಿ ಬೇರೂರಿದ್ದಿತು. ಸಾಂಸ್ಕೃತಿಕ ಏಕತೆ, ಜನಾಂಗೀಯ ಏಕತೆ, ಭೌಗೋಳಿಕ ಏಕತೆ, ಮಾತೃಭೂಮಿಯ ವಿಷಯ, ಭಾರತವರ್ಷ, ಧಾರ್ಮಿಕ ವಿಧಿಗಳು, ರಾಜಕೀಯ ಅಂಶಗಳು ಇತಿಹಾಸದ ಪರಿಣಾಮಗಳು ಇವೆಲ್ಲವುಗಳು ಒಂದು ಮೂಲಭೂತ ಏಕತೆಗೆ ಕಾರಣವಾದುವೆನ್ನಬಹುದು. ಈ ಸ್ವಾಭಾವಿಕ ಏಕತೆಯ ಮನೋಭಾವನೆಯು ಮುಸ್ಲಿಂರು ಭಾರತಕ್ಕೆ ಬಂದುದ್ದರಿಂದ ಒಡೆದುಹೋಯಿತು. 17ನೇ ಶತಮಾನದ ಮರಾಠರ ಏಳ್ಗೆ, ಕಿತ್ತೂರು ಚನ್ನಮ್ಮ, ಸಂಗೊಳ್ಳಿರಾಯಣ್ಣ, ಹೈದರ್ ಮತ್ತು ಟಿಪ್ಪು, ಇವರೆಲ್ಲರೂ ಹಿಂದೂ ರಾಷ್ಟ್ರೀಯತೆಯ ಪ್ರತೀಕವಾಗಿದ್ದರು. ಹಾಗಾಗಿ ಈ ರಾಷ್ಟ್ರೀಯತೆಯ ಭಾರತದಲ್ಲಿ ಸನಾತನವಾಗಿತ್ತೆಂದು ಹೇಳಬಹುದು.

### 5.2.2 ಆಧುನಿಕ ರಾಜ್ಯ ಪದ್ದತಿ

ಇಂಗ್ಲೀಷರು ಭಾರತಕ್ಕೆ ಬಂದದ್ದರಿಂದ ಭಾರತದಲ್ಲಿ ಆಧುನಿಕ ರಾಜ್ಯ ಪದ್ದತಿಯ ಅಭಿವೃದ್ಧಿಯು ಕಾಣಿಸಿತೆನ್ನಬಹುದು. ಭಾರತವು ಭಾರತೀಯರ ಭಾರತ ಮತ್ತು ಬ್ರಿಟೀಷ್ ಇಂಡಿಯಾ ಎಂಬುದಾಗಿ ಒಡೆದುಹೋಗಿತ್ತು. ಭಾರತದಲ್ಲಿ ಸುಮಾರು 562 ದೇಶೀಯ ರಾಜರು ಆಳುತ್ತಿದ್ದರು. ಇವರೆಲ್ಲರೂ ಬ್ರಿಟೀಷ್ ಕ್ರೌನ್‌ನ ಅಧಿಕಾರದ ನಿಯಂತ್ರಣವನ್ನು ಒಪ್ಪಿಕೊಂಡಿದ್ದರು. ಬ್ರಿಟೀಷರು ಮತ್ತು ಭಾರತೀಯ ರಾಜರುಗಳ ಸಂಬಂಧವು ಭಾರತ ರಾಜ್ಯಗಳಲ್ಲಿ ರಾಜಕೀಯ ಪದ್ದತಿಯನ್ನು ಹುಟ್ಟಿಹಾಕಿದರೆಂದು ಹೇಳಬಹುದು. ನೇರ ಬ್ರಿಟೀಷ್ ಅಧಿಕಾರವನ್ನು ಇಲ್ಲಿ ಅಸ್ತಿತ್ವಕ್ಕೆ ತರಲಾಯಿತು. ಸೈನಿಕ ಮತ್ತು ರಾಜಕೀಯ ಕಾರಣದಿಂದಾಗಿ ಪ್ರಥಮವಾಗಿ ಕಂಪನಿಯು ನಿರಂಕುಶ ಪ್ರಭುತ್ವವನ್ನು ಅಳವಡಿಸಿಕೊಂಡಿದ್ದರು. ನಂತರ ಕಾನೂನಿನ ಆಡಳಿತ ಪ್ರಾತಿನಿಧಿಕ ಸಮಿತಿಗಳು ಮುಂತಾದವುಗಳ ಮೂಲಕ ಆಳ್ವಿಕೆ ನಡೆಸಿದರು. ಈ ಆಧುನಿಕ ರಾಜ್ಯ ಪದ್ದತಿಯು ಮುಂದೆ ಬ್ರಿಟೀಷರು ಸಾಮ್ರಾಜ್ಯಶಾಹಿತ್ವವನ್ನು ಕೊನೆಗೊಳಿಸಿತು.

### 5.2.3 ಕೇಂದ್ರೀಕೃತ ಆಡಳಿತ

ಬ್ರಿಟೀಷರ ಸಬಲ ಕೇಂದ್ರಿಕೃತ ಆಡಳಿತವು ಭಾರತೀಯರನ್ನು ಒಂದುಗೂಡಿಸಿತು. ಭಾರತೀಯ ನಾಗರೀಕ ಸೇವೆ, ಕಾನೂನು ಕ್ರೋಢೀಕರಣ ಇವುಗಳು ಒಂದು ದೇಶದ ನಿರ್ಮಾಣಕ್ಕೆ ಕಾರಣವಾಯಿತೆನ್ನಬಹುದು. ವೇಗಸಹಿತ ಸಂಪರ್ಕ ಮಾಧ್ಯಮಗಳಾದ ರೈಲ್ವೆಮಾರ್ಗ, ಅಂಚೆ ಮತ್ತು ತಂತಿ ಸಂಪರ್ಕದಿಂದಾಗಿ ಜನರು ಸುಲಭವಾಗಿ, ಕ್ಷೇಮವಾಗಿ, ದೇಶದ ಒಂದು ಬದಿಯಿಂದ ಇನ್ನೊಂದು ಕಡೆಗೆ ತಲುಪುವುದು ಮತ್ತು ಸಂಪರ್ಕವೇರ್ಪಡುವುದು ಜನರಲ್ಲಿ ಒಂದು ಏಕತೆಯ ಭಾವನೆಯನ್ನು ಸೃಷ್ಟಿಸಿತು. ಇದು ವಿವಿಧ ಜನಾಂಗವನ್ನು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಒಂದುಗೂಡಿಸಿತು. ವಿವಿಧ ಪ್ರಾಂತ್ಯದ ಜನರು ಪರಸ್ಪರ ಸೇರಿಕೊಂಡು ಅವರಲ್ಲಿ ತಾವೆಲ್ಲ ಒಂದೇ ಎಂಬ ಭಾವನೆ ಮತ್ತು ದೇಶದ ಬಗ್ಗೆ ಪ್ರೀತಿ ಉಂಟಾಯಿತು.

### 5.2.4 ಪಶ್ಚಿಮದೊಂದಿಗೆ ನಿಕಟತೆ ಮತ್ತು ಇಂಗ್ಲೀಷ್ ಶಿಕ್ಷಣದ ಪ್ರಸರಣ

ಬ್ರಿಟೀಷರ ಆಳ್ವಿಕೆಯು ಭಾರತೀಯರನ್ನು ಪಶ್ಚಿಮ ರಾಷ್ಟ್ರಗಳೊಡನೆ ನಿಕಟತೆಯನ್ನು ಬೆಳೆಸಲು ಕಾರಣವಾಯಿತು. ಯೂರೋಪಿನ 19ನೇ ಶತಮಾನವು ರಾಷ್ಟ್ರೀಯತೆ ಶತಮಾನವಾಗಿದ್ದು ಶಿಕ್ಷಿತ ಭಾರತೀಯರು ಈ ಭಾವನೆಗಳನ್ನು ತಮ್ಮದಾಗಿಸಿಕೊಂಡರು. ಇಟಲಿ

ಜರ್ಮನಿಗಳು 19ನೇ ಶತಮಾನದ ದ್ವಿತಿಯಾರ್ಧದಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯವನ್ನು ಪಡೆದರು. ಇದು ಭಾರತೀಯರನ್ನು ತಮ್ಮ ದೇಶವನ್ನು ಬಿಡುಗಡೆಗೊಳಿಸಿ ಸ್ವತಂತ್ರ ತರಬೇಕೆಂಬ ಮನಸ್ಸನ್ನು ಇವರಲ್ಲಿ ಉಂಟುಮಾಡಿತು. ಈ ಪಾಶ್ಚಿಮಾತ್ಯ ಸಾಹಿತ್ಯವು ರಾಷ್ಟ್ರೀಯ ಧ್ವನಿಯನ್ನು ಕೊಟ್ಟಿತು ಮತ್ತು ಇದರ ಅಧ್ಯಯನವು ಭಾರತೀಯರಲ್ಲಿ ರಾಷ್ಟ್ರೀಯ ಭಾವನೆಯನ್ನು ಬೆಳೆಸಿತು.

ಇಂಗ್ಲೀಷ್ ಶಿಕ್ಷಣ ಮತ್ತು ಭಾಷೆಯು ಭಾರತೀಯ ರಾಷ್ಟ್ರೀಯತೆಯನ್ನು ಬೆಳೆಸಿತು. ಇದು 19ನೇ ಶತಮಾನದಲ್ಲಿ ಭಾರತದಲ್ಲಿ ಬಹು ದೊಡ್ಡ ಬದಲಾವಣೆಗಳನ್ನು ತಂದಿತು. ಪಾಶ್ಚಿಮಾತ್ಯ ಚಿಂತನೆಗಳು ಭಾರತದಲ್ಲಿ ಬ್ರಿಟೀಷರ ಆಳ್ವಿಕೆಯಿಂದ ಏನೇನು ಪ್ರಗತಿ ಸಾಧಿಸಿತು ಎಂಬುದನ್ನು ಜನರಿಗೆ ತಿಳಿಸಿದವು. ಇದು ಹೊಸದಾಗಿ ಶಿಕ್ಷಣವನ್ನು ಪಡೆದ ವಿದ್ಯಾರ್ಥಿಗಳಲ್ಲಿ ಯೂರೋಪ್ ಸ್ವಾತಂತ್ರ್ಯದ ಚಿಂತನೆಗಳನ್ನು ಬೋದಿಸಿತು. ಬೆಂಥಮ್, ಲಾಕ್, ಹಾಬ್ಸ್‌ಮಿಲ್, ಸ್ಪೆನ್ಸರ್, ಬರ್ಕ್‌ರೂಸ್ಸೊ, ವಾಲ್ಟೈರ್ ಇವರ ಚಿಂತನೆಗಳಿಂದ ಸ್ವಾತಂತ್ರ್ಯ, ಏಕತೆ, ಸಹೋದರತ್ವ, ರಾಷ್ಟ್ರೀಯತೆ ಮತ್ತು ಸ್ವರಾಜ್ಯ ಮುಂತಾದವುಗಳನ್ನು ತಿಳಿಸಿದ್ದುದಲ್ಲದೇ ಪಾಶ್ಚಿಮಾತ್ಯ ತತ್ವಶಾಸ್ತ್ರ, ಇತಿಹಾಸಗಳೂ ಸಹ ಜನರಲ್ಲಿ ಭಾವನೆಗಳನ್ನು ಕೆರಳಿಸಿದವು. ತಮ್ಮ ದೇಶವು ದಾಸ್ಯದಿಂದ ಕೂಡಿದೆ ಎಂಬುದನ್ನು ಅರಿತರು. ಇದರಿಂದ ಸ್ಫೂರ್ತಿ ಪಡೆದ ಭಾರತೀಯರು ರಾಷ್ಟ್ರೀಯತೆಯನ್ನು ಬೆಳಸಿಕೊಂಡರು. ವಿವಿಧ ಪ್ರದೇಶದ ಜನರು ಒಂದುಗೂಡಿದರು. ಇದು ಭಾರತೀಯರೆಲ್ಲರನ್ನೂ ಸೇರಿಸುವ ಕೊಂಡಿಯಾಯಿತೆನ್ನಬಹುದು. ಎಲ್ಲರೂ ಒಂದೇ ದೇಶ ಒಂದೇ ಎನ್ನುವ ಭಾವನೆಯನ್ನು ಇಂಗ್ಲೀಷ್ ಭಾಷೆ ಮತ್ತು ತಂತ್ರಜ್ಞಾನಗಳು ತಿಳಿಸಿದವು.

### *5.2.5 ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವ*

ಭಾರತೀಯರ ರಾಷ್ಟ್ರೀಯತೆಯನ್ನು ಬೆಳೆಸಲು ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವವು ಕಾರಣವಾಯಿತು. ಪಶ್ಚಿಮ ಸಂಸ್ಕೃತಿಯು ವಿಚಾರಶೀಲತೆ, ಸ್ವಾತಂತ್ರ್ಯ ಚಿಂತನೆ, ವ್ಯಕ್ತಿತ್ವ, ಮುಂತಾದವನ್ನು ಬೆಳೆಸಿತೆನ್ನಬಹುದು ಇದು ಸಾಮಾಜಿಕ ನ್ಯಾಯ ಮತ್ತು ರಾಜಕೀಯ ಹಕ್ಕುಗಳನ್ನು ತಿಳಿಸಿತು. ಇದು ಜನರಲ್ಲಿ ರಾಷ್ಟ್ರೀಯತೆ ಬೆಳೆಯಲು ಕಾರಣವಾಯಿತು. ಸಾಮಾಜೋ ಧಾರ್ಮಿಕ ಚಳುವಳಿಗಳು ಭಾರತದಲ್ಲಿ ಪ್ರಾರಂಭವಾಗಲು ಕಾರಣವಾಯಿತು. ರಾಷ್ಟ್ರೀಯ ಚಳುವಳಿಗಳು, ಕ್ರಾಂತಿಗಳು, ಪ್ರಿಂಟಿಂಗ್‌ಪ್ರೆಸ್ ಮುಂತಾದವುಗಳು ಇವರನ್ನು ಎಚ್ಚರಿಸಿದವು. ಇದು ಭಾರತದಲ್ಲಿ ಆಧುನಿಕ ಯುಗವನ್ನು ಹುಟ್ಟಿಹಾಕಿತು.

### *5.2.6 ವಿದ್ವಾಂಸರು ಮತ್ತು ಸುಧಾರಕರ ಕೊಡುಗೆ*

ಹಲವು ವಿದ್ವಾಂಸರು ಪ್ರಾಚೀನ ಭಾರತದ ಇತಿಹಾಸ ಮತ್ತು ಸಂಸ್ಕೃತಿಯ ಬಗ್ಗೆ ಸಂಶೋಧನೆ ನಡೆಸಿದರು. ಇದರಿಂದಾಗಿ ಭಾರತದ ಹಿಂದಿನ ವೈಭವದ ಬಗ್ಗೆ ತಿಳಿಯಲು ಕಾರಣವಾಯಿತು. ವಿಲಿಯಂಜೋನ್ಸ್, ಪ್ರಿನ್ಸೆಪ್, ಮ್ಯಾಕ್ ಮುಲ್ಲರ್, ಪರ್ಗುಸನ್ ಮುಂತಾದವರು ಇದಕ್ಕೆ ಕಾರಣರಾದರು. ಪ್ರಾಕ್ತನ ಸಂಶೋಧನೆಗಳೂ ಸಹ ಪ್ರಾಚೀನ ಭಾರತದ ಹೆಗ್ಗಳಿಕೆಯನ್ನು ತಿಳಿಸಿದವು. ಇದು ಗ್ರೀಕ್ ಮತ್ತು ರೋಮನ್ನರ ವಿದ್ವತ್ತಿಗೆ ಸಮವೆಂದು ತಿಳಿಸಿದರು. ಇದರಿಂದ ಭಾರತೀಯರು ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸಿಕೊಂಡರು.

ಧಾರ್ಮಿಕ ಮತ್ತು ಸಾಮಾಜಿಕ ನಾಯಕರಾದ ರಾಜಾರಾಂ ಮೋಹನ್‌ರಾಯ್, ದೇವೇಂದ್ರನಾಥ ಟಾಗೋರ್, ಈಶ್ವರಚಂದ್ರ ವಿದ್ಯಾಸಾಗರ್, ದಯಾನಂದ ಸರಸ್ವತಿ, ರಾಮಕೃಷ್ಣ, ವಿವೇಕಾನಂದ ಮುಂತಾದವರು ಪ್ರಾಚೀನ ಭಾರತವನ್ನು ನಿದರ್ಶನವಾಗಿ ಪ್ರಪಂಚಕ್ಕೆ ತೋರಿದರು. ಇವರೆಲ್ಲರಿಂದ ಪ್ರೇರೇಪಿತರಾದ ಜನರು ರಾಷ್ಟ್ರೀಯತೆ ಬೆಳೆಸಿಕೊಂಡರು.

### 5.2.7 ಭಾರತೀಯ ಪತ್ರಿಕೆಗಳ ಕೊಡುಗೆ

ಭಾರತೀಯ ಪತ್ರಿಕೆ, ಇಂಗ್ಲೀಷ್ ಮತ್ತು ಸ್ಥಳೀಯ ಭಾಷೆಗಳ ಪತ್ರಿಕೆಗಳು ಜನರಲ್ಲಿ ರಾಷ್ಟ್ರೀಯ ಭಾವನೆಗಳನ್ನು ತಳೆಸಿದವು. ವೃತ್ತಪತ್ರಿಕೆಗಳಾದ ದಿ ಇಂಡಿಯನ್ ಮಿರ್ರರ್, ಬಾಂಬೆ ಸಮಾಚಾರ್, ಅಮೃತ್ ಬಜಾರ್ ಪತ್ರಿಕಾ, ದಿ ಹಿಂದೂ, ಪೇಟ್ರಿಯಟ್, ದಿ ಬಂಗಾಲೀ, ದಿ ಕೇಸರಿ ಮುಂತಾದವು ಪ್ರಮುಖವಾದ ಪತ್ರಿಕೆಗಳು ದೇಶೀಯ ಸಾಹಿತ್ಯದ ಬೆಳವಣಿಗೆಯು ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವವೆಂದು ಹೇಳಬಹುದು. ಈ ಸಂಬಂಧವು ಭಾರತೀಯ ಭಾಷೆಗಳ ಬೆಳವಣಿಗೆಗೆ ಕಾರಣವಾದವು. ಬಂಕಿಮಚಂದ್ರ ಚಟರ್ಜಿಯವರು, ಆನಂದಮಠ, ನೀಲದರ್ಪಣ, ರವೀಂದ್ರನಾಥ ಟಾಗೋರ್ ಮುಂತಾದವರ ಕೃತಿಗಳು ಭಾರತೀಯರಲ್ಲಿ ಸ್ಫೂರ್ತಿ ತುಂಬಿದವು.

### 5.2.8 ಹೊಸ ಆರ್ಥಿಕ ವರ್ಗದ ಏಳ್ಗೆ

ವ್ಯಾಪಾರಿಗಳು, ಏಜೆಂಟರು, ಕಾಂಟ್ರಾಕ್ಟರುಗಳು, ಬ್ಯಾಂಕರುಗಳು, ಕೈಗಾರಿಕೋದ್ಯಮಿಗಳು, ಪ್ಲಾಂಟೇಷನ್ ಮಾಸ್ಟರ್‌ಗಳು ಭೂಮಾಲೀಕರು ಹೊಸ ಆರ್ಥಿಕ ವರ್ಗವಾಗಿ ಏಳ್ಗೆ ಹೊಂದಿದರು. ಇವರೂ ಸಹ ರಾಷ್ಟ್ರೀಯತೆಗೆ ಕಾರಣಕರ್ತರಾದರು.

### 5.2.9 ಆರ್ಥಿಕ ದೌರ್ಜನ್ಯ

ಬ್ರಿಟೀಷರು ತಮ್ಮ ಕುತಂತ್ರದಿಂದ ಭಾರತದ ಯಜಮಾನರಾಗಿದ್ದರು. ತಮ್ಮ ಕೈಗಾರಿಕೆ ಮತ್ತು ಸಾಮ್ರಾಜ್ಯ ಶಾಹಿತ್ವಕ್ಕೆ ಭಾರತೀಯರ ಮೇಲೆ ದೌರ್ಜನ್ಯ ನಡೆಸುತ್ತಿದ್ದರು. ಭಾರತದ ಕಚ್ಚಾ ವಸ್ತುಗಳು ಇಂಗ್ಲೇಂಡಿಗೆ ಹೋಗಿ ಸಿದ್ಧವಸ್ತುಗಳು ಇಲ್ಲಿ ಬಂದು ಬ್ರಿಟೀಷರಿಗೆ ಹೆಚ್ಚಿನ ಲಾಭ ಕೊಡುತ್ತಿದ್ದವು. ನಮ್ಮ ಕಸುಬುದಾರರು, ಕಾರ್ಮಿಕರು ಕೆಲಸ ಕಳೆದುಕೊಂಡರು. ಕೃಷಿಕರು ವೈಜ್ಞಾನಿಕ ಬೇಸಾಯದ ಮುಂದೆ ಇಲ್ಲವಾದರು. ಬಂಡವಾಳದಾರರು, ಹಣಗಾರರು, ಹಡಗುಕಟ್ಟುವವರು ಭಾರತೀಯರನ್ನು ಚೆನ್ನಾಗಿ ದುಡಿಸಿಕೊಂಡರು. ಇವೆಲ್ಲವುಗಳಿಂದ ಭಾರತೀಯರು ನೊಂದು ರಾಷ್ಟ್ರೀಯತೆ ಮನೋಭಾವನೆ ಬೆಳಸಿಕೊಂಡರು.

### 5.2.10 ಜನಾಂಗೀಯ ದೌರ್ಜನ್ಯ

ಭಾರತೀಯರನ್ನು ಐರೋಪ್ಯರು ಕೀಳಾಗಿ ನೋಡುತ್ತಿದ್ದು, ಕರಿಯರೆಂದೂ, ನಿಗ್ಗರರು ಎಂದೂ, ಹೋಟೆಲುಗಳು, ರೈಲ್ವೆ, ಬಂಗಲೆಗಳು, ಸಾರ್ವಜನಿಕ ಕಛೇರಿಗಳಲ್ಲಿ ಗೌರವ ಕೊಡುತ್ತಿರಲಿಲ್ಲ. ಶಿಕ್ಷಿತ ಭಾರತೀಯರಿಗೂ ಸಹ ಗೌರವವಿರಲಿಲ್ಲ ಇದರಿಂದ ಎಚ್ಚೆತ್ತ ಭಾರತೀಯರು ರಾಷ್ಟ್ರೀಯತೆ ಭಾವನೆ ಬೆಳೆಸಿಕೊಂಡು ತಿರುಗಿಬಿದ್ದರು.

### 5.2.11 ಲಾರ್ಡ್ ಲಿಟ್ಟನ್ನನ ದೌರ್ಜನ್ಯ

ವೈಸ್‌ರಾಯ್ ಲಿಟ್ಟನ್ ಇಂಡಿಯನ್ ಆರ್ಮ್ಸ್ ಆಕ್ಟ್, ಐ.ಸಿ.ಎಸ್. ಪರೀಕ್ಷೆಯ ವಯಸ್ಸು, ಹತ್ತಿಯ ಆಮದು ನಿಷೇದ ಮುಂತಾದುವುಗಳು ಭಾರತೀಯರಿಗೆ ಮಾರಕವಾಗಿದ್ದು, ಇದನ್ನು ವಿರೋಧಿಸಿದರು ಇದಲ್ಲದೇ ಪ್ರಾದೇಶಿಕ ಭಾಷೆಗಳ ಪತ್ರಿಕೆಗಳ ಕಾಯ್ದೆಯನ್ನು ಜಾರಿಗೆ ತಂದು ಪತ್ರಿಕೆಯು ಪ್ರಕಟವಾಗುವ ಮುನ್ನ ಸರ್ಕಾರದ ಮುಂದೆ ಸೆನ್ಸಾರ್ ಆಗುವುದನ್ನು ಜಾರಿಗೆ ತಂದದ್ದು ಜನರು ರಾಷ್ಟ್ರೀಯತೆಗೆ ಹೆಚ್ಚು ಒತ್ತನ್ನು ಕೊಡಲು ಕಾರಣವಾಯಿತು.

### 5.2.12 ಇಲ್ಬರ್ಟ್ ಬಿಲ್ ಹಗರಣ

ವರ್ನಾಕ್ಯುಲರ್ ಪ್ರೆಸ್ ಆಕ್ಟ್‌ನ್ನು ರದ್ದುಗೊಳಿಸಿದ್ದು ಒಳ್ಳೆಯದಾದರೂ ಇಲ್ಬರ್ಟ್ ಬಿಲ್ ಹಗರಣವು ಭಾರತೀಯರನ್ನು ನೋವಿಗೀಡುಮಾಡಿತು. ಈ ಬಿಲ್ ಪ್ರಕಾರ ಭಾರತೀಯ ನ್ಯಾಯಾಧೀಶರನ್ನೂ ಸಹ ವಿಚಾರಣೆ ಮಾಡುವುದಕ್ಕೆ ಈ ಬಿಲ್‌ನಲ್ಲಿ ಅವಕಾಶವಿತ್ತು. ಇದರ ಪ್ರಕಾರ ಕಲ್ಕತ್ತಾದ ಮುಖ್ಯ ನ್ಯಾಯಾಧೀಶರಾಗಿ ಸರ್ ರೋಮೇಶ್‌ಚಂದ್ರ ಮಿತ್ತರ್‌ನ್ನು ರಿಪ್ಪನ್ ನೇಮಕ ಮಾಡಿದರು. ಅವರು ಯೂರೋಪಿಯನ್ನರನ್ನೂ ಸಹ ವಿಚಾರಣೆಗೆ ಗುರಿಮಾಡಿದರು. ಇದನ್ನು ಬ್ರಿಟೀಷರು ವಿರೋಧಿಸಿದ್ದು ಭಾರತೀಯರು ಸಹಿಸದೇ ರಾಷ್ಟ್ರೀಯತೆಯ ವಾದವನ್ನು ಮುಂದೂಡಿ ಚಳುವಳಿಗೆ ದುಮುಕಿದರು.

## 5.3 ಘಟಕದ ಸಾರಾಂಶ

ಈ ಘಟಕದ ಅಧ್ಯಯನವನ್ನು ಸವಿಸ್ತಾರವಾಗಿ ಮಾಡಿದ ನಂತರ ನಾವು ಈ ಕೆಳಗಿನ ಅಂಶಗಳನ್ನು ತಿಳಿದುಕೊಂಡೆವು.

- ಬ್ರಿಟೀಷರು ಭಾರತವನ್ನು ಆಕ್ರಮಿಸಿದಾಗ ಭಾರತದ ಪರಿಸ್ಥಿತಿ ಹೇಗಿತ್ತು?
- ಭಾರತದಲ್ಲಿ ರಾಷ್ಟ್ರೀಯತೆಯ ಮನೋಭಾವನೆ ಬೆಳೆಯಲು ಕಾರಣಗಳೇನು ?
- ರಾಷ್ಟ್ರೀಯತೆಗೆ, ರಾಜಕೀಯ, ದಾರ್ಮಿಕ, ಸಾಮಾಜಿಕ ಮುಂತಾದವುಗಳು ಹೇಗೆ ಕಾರಣವಾದವು ಎಂಬುದನ್ನು ಸಹ ತಿಳಿದುಕೊಂಡೆವು.

## 5.4 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಭಾರತದಲ್ಲಿ ರಾಷ್ಟ್ರೀಯತೆಯ ಏಳ್ಗೆಗೆ ಕಾರಣಗಳನ್ನು ಪರೀಕ್ಷಿಸಿ
2. ಯಾವ ಅಂಶಗಳು ರಾಷ್ಟ್ರೀಯತೆಗೆ ಇಂಬುಕೊಟ್ಟವು ತಿಳಿಸಿ.
3. ಬ್ರಿಟೀಷರು ರಾಷ್ಟ್ರೀಯತೆಗೆ ಹೇಗೆ ಕಾರಣರಾದರು ? ತಿಳಿಸಿ.
4. ರಾಷ್ಟ್ರೀಯತೆಯ ಏಳ್ಗೆಯಲ್ಲಿ ಭಾರತ ಸಂಸ್ಕೃತಿಯ ಪ್ರಮುಖ ಅಂಶಗಳು ಹೇಗೆ ಕಾರಣವಾದವು ತಿಳಿಸಿ.

## 5.5 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


1. Agarwal : Indian National Movement
2. Venkatesan.G : History of Freedom struggle in India
3. Tarachand : History of Freedom Movement in India



ಡಾ. ಎ.ಸೋಮಶೇಖರ್

## ಘಟಕ-6 ಬ್ರಹ್ಮ ಸಮಾಜ ಮತ್ತು ಆರ್ಯ ಸಮಾಜ

*ವಿಷಯಾನುಕ್ರಮಣಿಕೆ*

## 6.0 ಉದ್ದೇಶಗಳು

ಈ ಘಟಕ 6ನ್ನು ಅಧ್ಯಯನ ನಡೆಸಿ ಈ ಕೆಳಗಿನ ಅಂಶಗಳನ್ನು ಅರ್ಥ ಮಾಡಿಕೊಳ್ಳಬಹುದು.

- ಭಾರತದ ರಾಷ್ಟ್ರೀಯ ಮನೋಭಾವದ ತೀವ್ರ ಬೆಳವಣಿಗೆ
- ಸಾಮಾಜಿಕ ಮತ್ತು ಧಾರ್ಮಿಕ ಚಳುವಳಿಗಳು
- ಬ್ರಹ್ಮ ಸಮಾಜ ಮತ್ತು ಆರ್ಯ ಸಮಾಜಗಳ ಸ್ಥಾಪನೆ
- ಬ್ರಹ್ಮ ಸಮಾಜ ಮತ್ತು ಆರ್ಯ ಸಮಾಜಗಳ ತತ್ವಗಳು
- ಈ ಸಮಾಜೋ ಧಾರ್ಮಿಕ ಚಳುವಳಿಗಳು ಜನತೆಯಲ್ಲಿ ಹೇಗೆ ಸಾಮಾಜಿಕ ಮತ್ತು ರಾಜಕೀಯ ಭಾವನೆಗಳನ್ನು ರಾಷ್ಟ್ರದತ್ತ ಬೆಳೆಸಿದವು ಎಂಬ ಎಲ್ಲಾ ವಿಷಯಗಳನ್ನು ತಿಳಿದುಕೊಳ್ಳುವೆವು.

## 6.1 ಪೀಠಿಕೆ

1857ರ ದಂಗೆಯ ನಂತರದ ಐವತ್ತು ವರ್ಷಗಳಲ್ಲಿ ಭಾರತದಲ್ಲಿ ರಾಷ್ಟ್ರೀಯತೆಯ ಮನೋಭಾವ ಬೆಳವಣಿಗೆಯು ತೀವ್ರವಾಗಿ ಬೆಳೆಯಿತು. ಇದಕ್ಕೆ ಕಾರಣ ಹಲವಾರು ಅವುಗಳನ್ನು ಈಗಾಗಲೇ ಅಧ್ಯಯನ ಮಾಡಿದ್ದೇವೆ. ಇವುಗಳಲ್ಲದೇ ಹಲವು ಧಾರ್ಮಿಕ ನಾಯಕರು, ಸಾಮಾಜಿಕ ಸುಧಾರಣೆಗಳು ಭಾರತದ ಜನರ ಬೌದ್ಧಿಕ, ಧಾರ್ಮಿಕ ಮತ್ತು ಭಾರತದ ರಾಷ್ಟ್ರೀಯತೆಯ ಮನೋಭಾವನೆ ಬೆಳವಣಿಗೆಗೆ ಕಾರಣವಾದುದನ್ನು ನಾವು ತಿಳಿಯುತ್ತೇವೆ.

19ನೇ ಶತಮಾನವು ಭಾರತದ ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳ ಪುನರ್ವಿಮರ್ಶೆಯ ಕಾಲವೆನ್ನಬಹುದು. ರಾಷ್ಟ್ರೀಯ ಚಳುವಳಿಯು ಸ್ವಾತಂತ್ರ್ಯಕ್ಕಾಗೆಂದು ನಡೆದದ್ದು ಈ ಸಾಂಸ್ಕೃತಿಕ ವಿಷಯಗಳ ಪುನರುತ್ಥಾನದಿಂದಲೇ ಎನ್ನಬಹುದು. ಬ್ರಿಟೀಷರ ಆಳ್ವಿಕೆಯ ಸ್ಥಾಪನೆಯಿಂದ ಭಾರತದಲ್ಲಿ ಸಾಂಸ್ಕೃತಿಕ ಮೌಲ್ಯಗಳು ಅಧೋಗತಿಗೆ ಇಳಿದಿದ್ದು ಜನರು ಇವುಗಳನ್ನು ಒಪ್ಪಿಕೊಳ್ಳಲು ಹಿಂಜರಿಯುತ್ತಿದ್ದ ಸಮಯವದು. ಜನತೆಯೂ ಸಹ ತಮ್ಮ ಸ್ವನಂಬಿಕೆಯನ್ನು ಕಳೆದುಕೊಂಡಿದ್ದು ಮತ್ತು ಅವರಲ್ಲಿ ಕೀಳು ಮನೋಭಾವನೆಯು ಬೆಳೆದಿದ್ದವು. ಇದನ್ನು ಪುನಃಶ್ಚೇತನಗೊಳಿಸಲು ಭಾರತದಲ್ಲಿ ಸಾಂಸ್ಕೃತಿಕ ಕ್ಷೇತ್ರದಲ್ಲಿ ಬದಲಾವಣೆಗಳ ಅವಶ್ಯಕತೆಯಿತ್ತು. ಜನರು ರಾಜಕೀಯದಲ್ಲಿ ಬೇಸತ್ತುಹೋಗಿದ್ದು ಅದನ್ನು ಎದುರಿಸಲು ತಮ್ಮಲ್ಲಿ ನಂಬಿಕೆ, ಧೈರ್ಯ ಮತ್ತು ನಾಯಕತ್ವದ ಕೊರತೆಯಿದ್ದು ಇವುಗಳೆಲ್ಲವುಗಳನ್ನು ಅಳವಡಿಸಿಕೊಂಡು ಹೋರಾಟ ನಡೆಸಲು ಸನ್ನದ್ಧರಾಗಲು ಒಂದು ಚಳುವಳಿಯ ಅವಶ್ಯಕತೆ ಕಂಡಿತು. ಅದೇ ಸಾಂಸ್ಕೃತಿಕ ಚಳುವಳಿ. ಈ ಸಾಂಸ್ಕೃತಿಕ ಚಳುವಳಿಯ ನಾಯಕತ್ವವನ್ನು ಬ್ರಹ್ಮ ಸಮಾಜ ಮತ್ತು ಆರ್ಯ ಸಮಾಜಗಳು ಕ್ರಮವಾಗಿ ರಾಜರಾಂ ಮೋಹನ್‌ರಾಯ್ ಮತ್ತು ದಯಾನಂದ ಸರಸ್ವತಿಯವರ ನೇತೃತ್ವದಲ್ಲಿ ಈ ಚಳುವಳಿಯು ನಡೆದು ಯಶಸ್ವಿಯಾದುದರ ಇತಿಹಾಸವನ್ನು ಈಗ ತಿಳಿಯೋಣ.

## 6.2 ಬ್ರಹ್ಮ ಸಮಾಜ

ಬ್ರಹ್ಮ ಸಮಾಜವನ್ನು ರಾಜಾರಾಂ ಮೋಹನ್‌ರಾಯ್‌ರವರು ಆಗಸ್ಟ್ 28, 1828ರಂದು ಸ್ಥಾಪಿಸಿದರು ಮತ್ತು ಇದರ ಉದ್ಘಾಟನೆಯು 1830 ಜನವರಿ 30ರಂದು ವಿದ್ಯುಕ್ತವಾಗಿ ಆಯಿತು. ಬ್ರಹ್ಮ ಸಮಾಜದ ಉದಯದ ಬಗ್ಗೆ ಎರಡು ರೀತಿಯ ಅಭಿಪ್ರಾಯಗಳಿವೆ. ಇವೆರಡೂ ಪ್ರಮುಖವಾಗಿದ್ದು, ಸಾಮರಸ್ಯದಿಂದ ಕೂಡಿವೆ. ಇವುಗಳು ಧಾರ್ಮಿಕ ಮತ್ತು ಬೌದ್ಧಿಕ ಕಾರಣಗಳಿಂದ

ಹುಟ್ಟಿದವೆಂದೂ ಎರಡಕ್ಕೂ ರಾಜಾರಾಂ ಮೋಹನ್‌ರಾಯ್‌ರವರೇ ಕಾರಣರು ಎಂದು ವಿದ್ವಾಂಸರು ತಿಳಿಸುತ್ತಾರೆ. ರಾಜಾರಾಂ ಮೋಹನ್‌ರಾಯ್‌ರವರು ಭಾರತೀಯ ರಾಜಕೀಯ ಮತ್ತು ಸಂಸ್ಕೃತಿಯಲ್ಲಿ ಹೊಸ ಚಿಂತನೆಗಳನ್ನು ತರಲು ಪ್ರಯತ್ನಿಸಿದರು. ಇದೊಂದು ಪೌರಾತ್ಯ ರಾಷ್ಟ್ರಗಳ ಚಿಂತನೆಗಳ ಪ್ರತೀಕವಾಗಿರಬೇಕೆಂಬುದು ಅವರ ಆಶಯವಾಗಿತ್ತು. ಇದಕ್ಕೋಸ್ಕರ ಅವರು ಅವರ ಸ್ನೇಹಿತರಾದ ದ್ವಾರಕನಾಥ ಟ್ಯಾಗೋರ್, ಖಾಳಿನಾಥ ಮುನ್ಷಿ ಮತ್ತು ಮಧುರಾನಾಥ ಮಲ್ಲಿಕ್ ಮುಂತಾದವರನ್ನು ಸಮಾಲೋಚಿಸಿದರು. ತೀರ್ಮಾನ ಮಾಡಿ ಒಂದು ಜಾಗವನ್ನು ಪಡೆದುಕೊಳ್ಳಲು ತೀರ್ಮಾನಿಸಿದರು. ಕಲ್ಕತ್ತಾದ ಚಿತ್‌ಪೂರ್ ರಸ್ತೆಯಲ್ಲಿಯ ಜೊರ ಸಂಕೋವಿನಲ್ಲಿ ಕಾಲ್‌ಲೋಚನ್ ಬೋಸ್‌ರವರಿಗೆ ಸೇರಿದ ಒಂದು ಮನೆಯನ್ನು ಬಾಡಿಗೆ ತೆಗೆದುಕೊಂಡು ಅಲ್ಲಿ ಈ ಬ್ರಹ್ಮ ಸಮಾಜವನ್ನು ಸ್ಥಾಪಿಸಿ ಸಾರ್ವಜನಿಕ ಪೂಜೆ ಪುರಸ್ಕಾರಗಳು ನಡೆಯಲು ಪ್ರಾರಂಭವಾಯಿತು. ರಾಜಾರಾಂ ಮೋಹನ್‌ರಾಯರು ಇದಕ್ಕೆ ಪ್ರತ್ಯೇಕ ಹೆಸರನ್ನೇನೂ ಕೊಡಲಿಲ್ಲ. ಇಲ್ಲಿ ಆರರಿಂದ ಏಳು ಹೆಸರುಗಳು ಪ್ರತಿಪಾದಿಸಲ್ಪಟ್ಟವು. ಆದರೆ ಬ್ರಹ್ಮ ಸಮಾಜ ಎಂಬುದು ಆರಂಭದಲ್ಲಿ ಇದ್ದಂತಹ ಒಂದು ಹೆಸರು. ಅವರೆಲ್ಲರೂ ಬ್ರಹ್ಮ ಪದದ ಜೊತೆಗೆ ಸಮಾಜ ಅಥವಾ ಸಭಾ ಎರಡರ ಅರ್ಥವೂ ಸಮಾಜ) ಎಂಬುದು ಸೇರಿಸುವ ಯೋಜನೆ ಕೂಡಿದ್ದು, ಕೊನೆಗೆ ಅದನ್ನು ಬ್ರಹ್ಮ ಸಮಾಜ, ಬ್ರಹ್ಮೋಸಮಾಜ, ಬಾರ್ಹ್ಯಸಭಾ ಅಥವಾ ಬ್ರಹ್ಮ ಸಮಾಜವೆಂಬುದಾಗಿ ಚಿಂತನೆ ನಡೆಸಿ ಕೊನೆಗೆ ಬ್ರಹ್ಮ ಸಮಾಜವೆಂದು ಒಪ್ಪಿಕೊಂಡರು. ಈ ಚಿಂತನೆ ನಡೆಸಿ ಕೊನೆಗೆ ಬ್ರಹ್ಮ ಸಮಾಜವೆಂದು ಒಪ್ಪಿಕೊಂಡರು. ಈ ಚಿಂತನೆಯಲ್ಲಿ ಭಾರತದ ಸ್ಥಿತಿಗತಿಗಳು, ಜನರ ಮಾನಸಿಕ ಪರಿಸ್ಥಿತಿಗಳನ್ನು ಸೇರಿಸಿ ಒಂದುಗೂಡಿಸಿ ಮಾಡುವಂತಹ ತೀರ್ಮಾನವನ್ನು ತೆಗೆದುಕೊಂಡರು. ಇದರ ಪರಿಣಾಮ ಬ್ರಹ್ಮ ಸಮಾಜದ ಸ್ಥಾಪನೆಯಾಯ್ತು. ರಾಜಾರಾಂ ಮೋಹನ್‌ರಾಯರು ಧಾರ್ಮಿಕ ನಾಯಕರಾಗಿ, ಭೌದ್ಧಿಕ ರೂವಾರಿಯಾಗಿ ಇಲ್ಲಿ ಕೆಲಸ ಮಾಡಿದರು.

### *6.2.1 ರಾಜಾರಾಂ ಮೋಹನ್‌ರಾಯ್ (1779-1833)*

ಇವರು ಒಂದು ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿ ಬೌದ್ಧಿಕ ಚಳುವಳಿಗೆ ಕಾರಣೀ ಭೂತರಾದರು. ಇವರನ್ನು ಆಧುನಿಕ ಭಾರತದ ನಿರ್ಮಾತೃ ಎಂದೂ ಸಹ ಕರೆಯಲಾಗಿದೆ. ಇವರು 19ನೇ ಶತಮಾನದ ಸಮಾಜೋ-ಧಾರ್ಮಿಕ ಚಳುವಳಿಯ ಜನಕನೆಂದು ಕರೆದುಕೊಂಡಿದ್ದಾರೆ. ಇವರದು ಬಹುಮುಖಪ್ರತಿಭೆ. ಇವರು ಅಜ್ಞಾನ ಅಸಹಿಷ್ಣುತೆ ಮತ್ತು ಸಾಮಾಜೋ-ಸಾಂಸ್ಕೃತಿಕ ದುಸ್ಥಿತಿಯ ಬಗ್ಗೆ ಹೋರಾಟ ನಡೆಸಿದರು. ಇವರು ಸಾಮಾಜಿಕ ಒಗ್ಗೂಡಿಕೆ ಮತ್ತು ಸಾಂಸ್ಕೃತಿಕ ಒಂದುಗೂಡುವಿಕೆಗಾಗಿ ಹೋರಾಡಿದರು. ರಾಜಾರಾಂ ಮೋಹನ್‌ರಾಯ್ ಭಾರತದ ಸತಿ ಪದ್ಧತಿಯ ಬಗ್ಗೆ ಹೋರಾಟವನ್ನು (1818-1828)ಮಾಡಿ ಅದನ್ನು ರದ್ದುಗೊಳಿಸುವಲ್ಲಿ ಜಯಶಾಲಿಯಾದರು. ಜಾತಿ ಪದ್ಧತಿಯಲ್ಲಿಯ ಅಸಮಾನತೆ ತೊಡೆದು ಹಾಕಲು ಹೋರಾಟ ನಡೆಸಿದರು. ಪತ್ರಿಕಾ ಸ್ವಾತಂತ್ರದ ಸ್ಥಾಪನೆಗಾಗಿ ಶ್ರಮಪಟ್ಟರು. ಭಾರತದಲ್ಲಿ ಆಡಳಿತ ಕಾರ್ಯಗಳಿಂದ ನ್ಯಾಯಾಂಗ ತೀರ್ಮಾನವನ್ನು ಪ್ರತ್ಯೇಕಿಸುವ ಹೋರಾಟದಲ್ಲಿ ನಾಯಕತ್ವವನ್ನು ವಹಿಸಿದರು. ವೈಯುಕ್ತಿಕ ಸ್ವಾತಂತ್ರ್ಯ ಮತ್ತು ರಾಷ್ಟ್ರೀಯ ವಿಮೋಚನೆಯ ರೂವಾರಿಯಾದರು. ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ಬೇಕೆಂದು ಪ್ರಪ್ರಥಮವಾಗಿ ಸಾರಿದರು. ರಾಜಾರಾಂ ಮೋಹನ್‌ರಾಯ್ ಇವರು ವಿಗ್ರಹಾರಾಧನೆಯನ್ನು ವಿರೋಧಿಸಿ ಒಂದು ಲೇಖನ ಬರೆದು ಮನೆಯಿಂದ ಹೊರದೂಡಲ್ಪಟ್ಟರು. ಹಲವಾರು ಕಡೆಗಳಲ್ಲಿ ಸಂಚರಿಸಿ ಶಿಕ್ಷಣ ಮತ್ತು ಜ್ಞಾನವನ್ನು ಪಡೆದರು ಇವರಿಗೆ ಅರ್‍ಯಾಬಿಕ್, ಪರ್ಷಿಯನ್, ಸಂಸ್ಕೃತ ಭಾಷೆ ಗೊತ್ತಿತ್ತು. ಇಂಗ್ಲೀಷ್ ಫ್ರೆಂಚ್, ಲ್ಯಾಟಿನ್, ಹಿಬ್ರೂ ಮತ್ತು ಗ್ರೀಕ್ ಬಾಷೆಯಲ್ಲಿ ಪಾಂಡಿತ್ಯವನ್ನು ಸಂಪಾದಿಸಿದ್ದರು. ಇದಲ್ಲದೆ ಹಲವಾರು ಧರ್ಮಗಳ ಬಗ್ಗೆ ಜ್ಞಾನವನ್ನು ತಿಳಿದಿದ್ದರು. ಇವರು ಈಸ್ಟ್ ಇಂಡಿಯಾ ಕಂಪನಿಯ ಸೇವೆಯಲ್ಲಿ 1805 ರಿಂದ 1814ರವರೆಗೆ ಕೆಲಸ ಮಾಡಿದರು. 1814ರಲ್ಲಿ ಆತ್ಮೀಯ ಸಭಾವನ್ನು ಸ್ಥಾಪಿಸಿದರು. 1828ರಲ್ಲಿ ಬ್ರಹ್ಮ ಸಮಾಜ ಸ್ಥಾಪಿಸಿದರು. 1831ರಲ್ಲಿ ಮೊಘಲ್ ಸಾಮ್ರಾಟನ ನಿವೃತ್ತಿಯ ವೇತನವನ್ನು ಹೆಚ್ಚಿಸಲು ಬ್ರಿಟೀಷರೊಂದಿಗೆ ಹೋರಾಡಿದರು ಮತ್ತು ರಾಜಾ ಎಂಬ ಬಿರುದನ್ನು ಪಡೆದರು. 1833ರಲ್ಲಿ ಬ್ರಿಸ್ಟಲ್‌ನಲ್ಲಿ ನಿಧನರಾದರು.

ರಾಮ್ ಮೋಹನ್‌ರಾಯರಿಗೆ ಶಿಕ್ಷಣದ ಬಗ್ಗೆ ಅತೀವ ಗೌರವವಿತ್ತು. ಶಿಕ್ಷಣವೆಂದರೆ ಉತ್ತಮ ಪ್ರಾಯೋಗಿಕ ಶಿಕ್ಷಣವಾಗಬೇಕು. ಜನರಲ್ಲಿ ಇದರ ಉಪಯೋಗ ಮತ್ತು ಲಾಭಕರವಾದ ಜ್ಞಾನವನ್ನು ನೀಡಬೇಕು. ಇದಲ್ಲದೇ ಮಾನವನ ಮನಸ್ಸಿನಲ್ಲಿ ವಿಜ್ಞಾನದ ಬಗ್ಗೆ ಒಳ್ಳೆಯ ಜ್ಞಾನವನ್ನು ಪಡೆಯುವುದರಲ್ಲಿ ಹೆಚ್ಚು ಆಸಕ್ತಿಯನ್ನು ವಹಿಸಿದರೆ ಜೀವನದಲ್ಲಿ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗುತ್ತದೆ. ಇಂಗ್ಲೀಷ್ ಶಿಕ್ಷಣಕ್ಕೆ ತನ್ನೆಲ್ಲಾ ಹಣವನ್ನು ವಿನಿಯೋಗಿಸಿದನು. ಇದರ ಪ್ರಯುಕ್ತ ಜನರಲ್ಲಿ ವಿಜ್ಞಾನ ಮತ್ತು ಪಾಶ್ಚಿಮಾತ್ಯ ಭಾಷೆಗಳನ್ನು ಕಲಿಸಲು ಅನುಕೂಲಕರವಾಗುವಂತೆ 1813ರ ಚಾರ್ಟ್‌ರ್ ಆಕ್ಟ್ ಪ್ರಕಾರ ಸುಮಾರು ಒಂದು ಲಕ್ಷ ರೂಪಾಯಿಗಳನ್ನು ಕಾಯ್ದಿರಿಸಿದ್ದು ಒಂದುಇದರ ಉತ್ತಮ ಹೋರಾಟದಲ್ಲಿ ಒಂದು. ಭಾರತೀಯರ ಮನಸ್ಸನ್ನು ಆಧುನಿಕ ಜಗತ್ತಿನತ್ತ ಎಳೆದುಕೊಂಡು ಹೋಗಲು ಪಾಶ್ಚಿಮಾತ್ಯ ಶಿಕ್ಷಣದ ಅಗತ್ಯವನ್ನು ಒತ್ತಿಹೇಳಿದರು. ಬೆಂಟಿಂಕನು ಮಕಾಲೆಯವರು ಸಲ್ಲಿಸಿದ ವರದಿಯನ್ನು ಅನುಸರಿಸಿ ಆಧುನಿಕ ಶಿಕ್ಷಣವನ್ನು ಭಾರತದಲ್ಲಿ ಜಾರಿಗೊಳಿಸಿದರು. ಆಧುನಿಕ ಶಿಕ್ಷಣವು ವೈಜ್ಞಾನಿಕ ಸಂಶೋಧನೆಗೆ ಒತ್ತು ನೀಡಿದ್ದು, ತಮ್ಮ ಭಾಷೆಗಳು (ಆಡು ಭಾಷೆಗಳು)ಮುಂತಾದವು ಜನರಲ್ಲಿ ಸ್ವಯಂ ಶಿಕ್ಷಣದ ಅಗತ್ಯವನ್ನು ಉಂಟುಮಾಡಿದವು. ಇವುಗಳು ರಾಷ್ಟ್ರೀಯತೆ ಮತ್ತು ದೇಶಭಕ್ತಿಯನ್ನು ಬೆಳೆಸಿತು. ಇವುಗಳ ಮುಂದೆ ಸ್ವಾತಂತ್ರ್ಯ ಚಳುವಳಿಗೆ ಉತ್ತೇಜನವನ್ನು ನೀಡಿತು. ಇದರಿಂದಾಗಿ ರಾಮ್‌ಮೋಹನ್‌ರಾಯ್‌ರವರು ಭಾರತದಲ್ಲಿ ಒಂದು ರೀತಿಯ ಹೊಸ ಯುಗವನ್ನು ಸೃಷ್ಟಿಸಿದರು.

ರಾಮ್‌ಮೋಹನ್‌ರಾಯ್ ಮಹಿಳೆಯರಿಗೆ ಉತ್ತೇಜನ ನೀಡಿದರು 1829ರ ಸತಿ ಪದ್ಧತಿಯನ್ನು ರದ್ದುಗೊಳಿಸುವಲ್ಲಿ ತಮ್ಮ ಹೋರಾಟವನ್ನು ನೀಡಿದರು. ಇದರಲ್ಲಿ ಯಶಸ್ವಿಯೇನೊ ಆದರೆನ್ನಬಹುದು. ಸತಿ ಆಚರಿಸುವುದು ನ್ಯಾಯ ವಿರೋಧಿ ಮತ್ತು ಕ್ರಿಮಿನಲ್ ಕಾರ್ಯವಾಗುತ್ತದೆ.

### *6.2.2 ಬ್ರಹ್ಮ ಸಮಾಜದ ತತ್ವಗಳು*

ಬ್ರಹ್ಮ ಸಮಾಜವು ವಿಚಾರಶೀಲತೆಯಲ್ಲಿ ನಂಬಿಕೆಯನ್ನಿಟ್ಟುಕೊಂಡ ಒಂದು ಸಂಸ್ಥೆ. ಈ ಹೊಸ ನಂಬಿಕೆಯು ಯಾವುದೇ ವಿಧಿ ವಿಧಾನಗಳನ್ನು ತಿಳಿಸಲಿಲ್ಲ. ಒಂದೇ ದೇವರನ್ನು ಆರಾಧಿಸುವ ಒಂದು ಸಮಾಜವಾಗಿ ನಿರ್ಮಾಣವಾಯಿತು. ವೇದಾಂತದ ಏಕದೇವ ತತ್ವವನ್ನು ಆಸಕ್ತರಿಗೆ ಕಲಿಸುವುದು, ವೇದಾಂತ ಕಾಲೇಜನ್ನು 1825ರಲ್ಲಿ ಸ್ಥಾಪಿಸಿದರು. ವೇದಗಳ ಪಠಣ, ಉಪನಿಷತ್ತುಗಳ ವಾಚನ ಮತ್ತು ಬಂಗಾಲಿ ಭಾಷೆಗೆ ಅವುಗಳ ಅನುವಾದ ನಡೆಯಿತು. ಹಿಂದೂ ಸಂಪ್ರದಾಯಗಳು ಮತ್ತು ವಿಚಾರವನ್ನು ತೀವ್ರವಾಗಿ ವಿರೋಧಿಸಿದರು. 1830ರಲ್ಲಿ ಉಪಾಸನಾ ಮಂದಿರ ಸ್ಥಾಪನೆ ಮಾಡಿ ಪೂಜಿಸಲು ಎಲ್ಲರಿಗೂ ಮುಕ್ತ ಅವಕಾಶ ನೀಡಲಾಯಿತು. ವಿಗ್ರಹರಾಧನೆ ಇರಲಿಲ್ಲ. ಒಬ್ಬನೇ ಭಗವಂತನನ್ನು ಎಲ್ಲಾ ಪಂಗಡದವರು ಒಂದೆಡೆ ಕಲೆತು ಅರ್ಚಿಸುವ ಒಂದು ಕೇಂದ್ರವಾಗಿತ್ತು. ಹಿಂದೂ ಧರ್ಮವನ್ನು ಶುದ್ಧಿಗೊಳಿಸುವುದು ಮತ್ತು ವಿಚಾರಪೂರ್ಣಗೊಳಿಸುವುದು ಇವರ ಧ್ಯೇಯವಾಗಿತ್ತು.

ಬ್ರಹ್ಮ ಸಮಾಜವು ಯಾವತ್ತೂ ಯಾವ ಧಾರ್ಮಿಕ ವ್ಯವಸ್ಥೆಯ ನಿರ್ಮಾಣಕ್ಕೆ ಒತ್ತು ನೀಡಲಿಲ್ಲ. ಹೊರತಾಗಿ ತಾವು ಹಿಂದೂ ಧರ್ಮದಲ್ಲಿ ಸುಧಾರಣೆ ಮಾಡುವ ಉದ್ದೇಶ ಹೊಂದಿದ್ದೇವೆ ಎನ್ನುವುದನ್ನು ಸ್ಪಷ್ಟಪಡಿಸಿದರು. ಬ್ರಹ್ಮ ಸಮಾಜವು ಅವತಾರಗಳು ಕರ್ಮ, ಪುನರ್ಜನ್ಮ ಸಿದ್ಧಾಂತಗಳನ್ನು ತಿರಸ್ಕರಿಸಿತು, ಮಾನವನ ವಿಚಾರ ಶಕ್ತಿಯನ್ನು ಎಲ್ಲಾ ತತ್ವಶಾಸ್ತ್ರಕ್ಕಿಂತಲೂ ಶ್ರೇಷ್ಠ ಎಂದು ಎತ್ತಿ ಹಿಡಿಯಿತು. ಯಾವುದೇ ಒಂದು ಗ್ರಂಥವು ಸಂಪೂರ್ಣ ಜ್ಞಾನಕೋಶ ಎನ್ನುವ ಮಾತನ್ನು ತಳ್ಳಿಹಾಕಿತು. ಜಾತಿ ಪದ್ಧತಿಯನ್ನು ವಿರೋಧಿಸಿತು. ಯಾವುದೇ ವಿಷಯದಲ್ಲಿ ತನ್ನ ಪಂಥದ ವಾದವೇ ಸರಿ ಎಂದು ಪಟ್ಟು ಹಿಡಿಯದೇ ಬ್ರಹ್ಮೋಗಳು ತಮ್ಮ ಸ್ವಂತದಾರಿ ಹಿಡಿಯಲು ಅವಕಾಶ ನೀಡಿತು.

ಬ್ರಹ್ಮ ಸಮಾಜವು ದಾರ್ಮಿಕ ಸುಧಾರಣೆಗಿಂತಲೂ ಸಾಮಾಜಿಕ ಸುಧಾರಣೆಗಳಲ್ಲಿ ಪ್ರಮುಖಪಾತ್ರವಹಿಸಿದ್ದು, ಸತಿ, ಪರ್ಧಾಪದ್ಧತಿ, ಬಾಲ್ಯಸ್ತ್ರೀ ಶಿಶು ವಿರೋಧ, ಬಾಲ್ಯವಿವಾಹ ರದ್ದು, ಸ್ತ್ರೀ ಶಿಕ್ಷಣ ಮುಂತಾದ ಚಳುವಳಿಗಳಲ್ಲಿ ಅವರ ಸೇವೆ ಅಪಾರವಾಗಿದೆ ಹಿಂದೂ ಸಮಾಜದಲ್ಲಿ ಸಾಮಾಜಿಕ ಸಮಸ್ಯೆಗಳನ್ನು ತೊಡೆದುಹಾಕುವುದು ಮತ್ತು ಶುದ್ದಿಗೊಳಿಸುವುದು ಮತ್ತು ಹಿಂದೂ ಸಮಾಜದ ಹೊರಗೆ ಕ್ರಿಸ್ತಮಿಷನ್‌ರಿಗಳು ಮತಾಂತರ ದಾಳಿಯಿಂದ ಹಿಂದೂ ಧರ್ಮದ ರಕ್ಷಣೆ ಮುಂತಾದ ಕಾರ್ಯಗಳನ್ನು ನಡೆಸಿದರು. ಮನುಷ್ಯರಲ್ಲಿ ಸಮಾನತೆ ಮತ್ತು ಏಕತೆ ಇರಬೇಕು. ಮಾನವ ಸೇವೆಯೇ ದೇವರ ಸೇವೆ ಎಂಬುದಾಗಿತ್ತು. ಎಲ್ಲರೂ ಒಳ್ಳೆಯ ಆತ್ಮದಿಂದ ಪೂಜಿಸಿದರೆ ಮುಕ್ತಿ ದೊರೆಯುತ್ತದೆಂದು ಸುಲಭವಾದ ಮೋಕ್ಷದಾರಿಯನ್ನು ಹುಡುಕಿಕೊಟ್ಟರು. ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಹೊಸ ಜೀವನ ದಾರಿಯನ್ನು ತಿಳಿಯ ಹೇಳಿದರು.

ವೃತ್ತಪತ್ರಿಕೆಗಳ ಪ್ರಾಮುಖ್ಯತೆಯನ್ನು ಅರಿತು ಅವುಗಳು ಜನರ ಮನಸ್ಸು ಅಧ್ಯಯನ ಮತ್ತು ಜ್ಞಾನದ ದೀವಿಗೆಗಳು ಎಂದು ತಿಳಿ ಹೇಳಿದರು. 1821ರಲ್ಲಿ ಬಂಗಾಳಿ ಸಾಪ್ತಾಹಿಕ ಸಂವಾದ ಕೌಮುದಿಯನ್ನು ಸ್ಥಾಪಿಸಿದರು. ಪರ್ಶಿಯನ್ ಭಾಷೆಯಲ್ಲಿ ಮಿರತ್ ಉಲ್ ಅಕಬಾರ್ ಎಂಬ ಪತ್ರಿಕೆಯನ್ನು 1922ರಲ್ಲಿ ಸ್ಥಾಪಿಸಿದರು. ಪತ್ರಿಕೆಗಳ ಸ್ವಾತಂತ್ರ್ಯವನ್ನು ಒತ್ತಿ ಹೇಳಿದರು. ಪೌರಾತ್ಯ ಮತ್ತು ಪಾಶ್ಚಾತ್ಯ ಮಿಲನದ ಜೀವನ ಒಂದು ಉತ್ತಮ ಸಾಧನವಾಗುತ್ತದೆಂದರು. ಅವರ ಅನುಯಾಯಿಗಳು ಸಾಕಷ್ಟು ಸಾಮಾಜಿಕ ಚಳುವಳಿಗಳನ್ನು ಮಾಡಿದರು. ಇವುಗಳೆಲ್ಲವೂ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವದ ಆಧಾರದ ಮೇಲೆ ಇದ್ದವು. ಇವರು ಭಾರತಕ್ಕೆ ಹೊಸ ಹಾದಿಯನ್ನು ತೋರಿದರು. ಇದರ ರೀತ್ಯ ಸ್ವಾತಂತ್ರ್ಯ ಚಳುವಳಿಗೆ ಉತ್ತೇಜನ ನೀಡಿದಂತಾಯಿತು.

## 6.3 ಆರ್ಯ ಸಮಾಜ

ಆರ್ಯ ಸಮಾಜವನ್ನು ದಯಾನಂದ ಸರಸ್ವತಿಯವರು 1875ರಲ್ಲಿ ಬೊಂಬಾಯಿಯಲ್ಲಿ ನಂತರ 1877ರಲ್ಲಿ ಲಾಹೋರ್‌ನಲ್ಲಿ ಸ್ಥಾಪಿಸಿದರು. ಆರ್ಯ ಸಮಾಜವು ಒಂದು ಧಾರ್ಮಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಚಳುವಳಿಯಾಗಿ ಮಾರ್ಪಟ್ಟಿತು. ವೇದಗಳು ಮತ್ತು ಆತ್ಮದ ಪುನರ್ಜನ್ಮದ ಬಗೆ ಹೆಚ್ಚು ನಂಬಿಕೆಯನ್ನು ಆರ್ಯ ಸಮಾಜ ಇಟ್ಟುಕೊಂಡಿದ್ದಿತು. ಇದರ ಸದಸ್ಯರೆಲ್ಲ ವೇದಗಳನ್ನು ಸರಿಯಾಗಿ ಅಧ್ಯಯನ ಮಾಡಬೇಕೆಂದು ಕರೆ ಇತ್ತರು. ಹಿಂದೂ ಧರ್ಮವನ್ನು ಪ್ರತಿಪಾದಿಸಿದರು, ಸಾಮಾಜಿಕ ಆದರ್ಶಗಳು ದೇವರ ಪಿತೃತ್ವ ಮತ್ತು ಮಾನವನ ಸಹೋದರತ್ವದ ಮೇಲೆ ನಿಂತಿದೆ ಎಂದು ತಿಳಿಸಿದರು. ಲಿಂಗಭೇದವಿಲ್ಲದಿರುವುದು, ಮನುಷ್ಯರಲ್ಲಿ ನ್ಯಾಯದಲ್ಲಿ ಏರುಪೇರಿಲ್ಲದಿರುವುದು, ಸಮನಾದ ಅವಕಾಶಗಳು, ಪ್ರೀತಿ ಮತ್ತು ಸೇವೆ ಇವುಗಳು ಈ ಸಮಾಜದ ಮುಖ್ಯ ಅಂಶಗ... ...ಣಾ ಚಳುವಳಿಯಲ್ಲಿ ನಾಯಕತ್ವವನ್ನು ವಹಿಸಿತು. ಇಸ್ಲಾಂ ಮತ್ತು ಕ್ರೈಸ್ತಧರ್ಮಗಳ ಪ್ರಭಾವಗಳ ವಿರೋಧಿಯಾಯಿತು.

ಆರ್ಯ ಸಮಾಜವು ಭಾರತಕ್ಕೆ ಲಾಲಾ ಲಜಪತರಾಯ್ ಮತ್ತು ಸ್ವಾಮಿ ಶ್ರದ್ಧಾನಂದರಂತಹ ನಾಯಕರನ್ನು ನೀಡಿತು. ಇದು ಅಸ್ಪೃಶ್ಯತೆ, ಜಾತಿ ಪದ್ಧತಿ ಮತ್ತು ಬಾಲ್ಯವಿವಾಹವನ್ನು ಖಂಡಿಸಿತು. ಸ್ತ್ರೀಯರ ಶಿಕ್ಷಣ ಮತ್ತು ವಿಧವಾ ವಿವಾಹವನ್ನು ಉತ್ತೇಜ ನೀಡಿತು. ಶುದ್ಧೀಕರಣ ನೀತಿಯಿಂದ ಹಿಂದೂ ಧರ್ಮಕ್ಕೆ ಜನರನ್ನು ಆಕರ್ಷಿಸಿತು. ರಾಷ್ಟ್ರೀಯತೆಗೆ ಇಂಬುಕೊಟ್ಟಿತು ಮತ್ತು ಸನಾತನ ಧರ್ಮ ಮತ್ತು ಸಂಸ್ಕೃತಿಯ ಬಗ್ಗೆ ಒಳ್ಳೆಯ ವಿಶ್ವಾಸವಿದ್ದರೆ ಮುಂದೆ ಭವಿಷ್ಯದಲ್ಲಿ ಸರಿಯಾಗುತ್ತದೆಂಬುದನ್ನು ತಿಳಿಸಿದರು. ಹಿಂದೂ ಧರ್ಮಕ್ಕೆ ಹಲವಾರು ಜನರನ್ನು ಮತಾಂತರಗೊಳಿಸಲಾಯ್ತು. ಲಾಹೋರ್‌ನಲ್ಲಿ ಡಿ.ಎ.ವಿ. ಕಾಲೇಜನ್ನು ಸ್ಥಾಪಿಸಿತು. ಎರಡು ವಿಭಾಗಗಳಾಗಿ ಆರ್ಯ ಸಮಾಜ ವಿಂಗಡಣೆಯಾಯಿತು. ಒಂದು ಡಿಎವಿ ಕಾಲೇಜು ಶಾಖೆ ಮತ್ತು ಇನ್ನೊಂದು ಗುರುಕುಲ ಶಾಖೆ. ಮಹಾತ್ಮ ಹನ್ಸ್ ರಾಜರು ಮೊದಲ ಶಾಖೆಗೆ ಮತ್ತು ಸ್ವಾಮಿ ಶ್ರದ್ಧಾನಂದರು ಎರಡನೇಯ ಶಾಖೆಗೆ ಮುಖ್ಯಸ್ಥರಾದರು. ಗುರುಕುಲ ಕಾಂಗ್ರಿಯನ್ನು 1902ರಲ್ಲಿ ಸ್ಥಾಪಿಸಲಾಯ್ತು. ಇದು ಮುಂದೆ ಒಂದು ವಿಶ್ವವಿದ್ಯಾನಿಲಯವಾಯ್ತು.

### 6.3.1 ಸ್ವಾಮಿ ದಯಾನಂದ ಸರಸ್ವತಿ

ಭಾರತದಲ್ಲಿ ಸಾಂಸ್ಕೃತಿಕ ಚಳುವಳಿಯಲ್ಲಿ ಮಂಚೂಣಿ ನಾಯಕರಾಗಿ ಹೋರಾಡಿದವರಲ್ಲಿ ಸ್ವಾಮಿ ದಯಾನಂದ ಸರಸ್ವತಿಯವರೂ ಒಬ್ಬರು ಜಾತಿ ಪದ್ಧತಿ ರದ್ದು, ವಿಧವಾ ವಿವಾಹ, ಹಿಂದಿಯನ್ನು ಭಾರತೀಯ ಭಾಷಾ ಮಾಧ್ಯಮ ಮಾಡುವುದು ಮುಂತಾದವುಗಳನ್ನು ಪ್ರತಿವಾದಿಸಿದ ಮಹಾನ್ ವ್ಯಕ್ತಿ ಇವರು. ಇದಲ್ಲದೇ ಮಹಿಳೆಯರ ವಿಮೋಚನೆಗೂ ಶ್ರಮಪಟ್ಟರು. 1875ರಲ್ಲಿ ಆರ್ಯ ಸಮಾಜ ಸ್ಥಾಪಿಸಿ ಉತ್ತರ ಭಾರತದಲ್ಲಿ ಭಾರತೀಯರ ಮನಸ್ಸನ್ನು ಗೆದ್ದರು. ಈ ಸಮಾಜದ ತತ್ವಗಳು ಜನರಲ್ಲಿ ಜನಾನುರಾಗಿಯಾದವು, ವೇದಗಳ ಸಂದೇಶಗಳನ್ನು ತಿಳಿಸಿದ್ದು ಹಿಂದೂಗಳಲ್ಲಿ ರೋಮಾಂಚನವನ್ನು ಸೃಷ್ಟಿಸಿತು. ಇವರು ಬ್ರಹ್ಮ ಸಮಾಜ ಮತ್ತು ಪ್ರಾರ್ಥನಾ ಸಮಾಜಗಳಿಂದ ಪ್ರೇರೇಪಿತರಾಗಿದ್ದರು. ಅವುಗಳನ್ನು ಅನುಸರಿಸಿ ಆರ್ಯ ಸಮಾಜದ ತತ್ವಗಳನ್ನು ಪ್ರತಿಪಾದಿಸಿದರು.

ಇವರು ದೇಶಾದ್ಯಂತ ಸಂಚರಿಸಿ ಜ್ಞಾನ ಮತ್ತು ಬುದ್ಧಿವಂತಿಕೆಯನ್ನು ಗಳಿಸಿಕೊಂಡರು. ಇವರು ಪಾಶ್ಚಿಮಾತ್ಯ ಚಿಂತನೆ ಮತ್ತು ಸಂಸ್ಕೃತಿಯಿಂದ ಆಕರ್ಷಿತರಾಗಲಿಲ್ಲ ಅಥವಾ ಪ್ರಭಾವಿತರಾಗಲಿಲ್ಲ. "ವೇದಗಳ ಕಾಲಕ್ಕೆ ಹೋಗಿ" ಎಂಬುದು ಇದರ ಘೋಷಣೆ ವೇದಗಳಲ್ಲಿರುವ ಒಳ್ಳೆಯ ಅದರ್ಶಗಳನ್ನು ಪಾಲಿಸಿ ಎಂದರು. ವೇದಗಳು ಧಾರ್ಮಿಕ, ಜಾತ್ಯಾತೀತ ಮತ್ತು ವೈಜ್ಞಾನಿಕ ಜ್ಞಾನಗಳನ್ನು ಹೊಂದಿದ್ದು ಅವುಗಳ ಅಧ್ಯಯನ ಮಾಡಿ ಎಂದು ನುಡಿದರು. ವರ್ಣಾಶ್ರಮಧರ್ಮವನ್ನು ತಿಳಿಸಿದರು. ಜಾತಿಯಿಂದ ಯಾವುದೇ ಜನ್ಮವನ್ನು ಗುರುತಿಸಬಾರದೆಂದರು. ಎಲ್ಲಾ ಸಮಾಜಗಳ ಸುಧಾರಣೆಗಳಿಗೆ ಉತ್ತೇಜನ ನೀಡಿದರು. ಅಸ್ಪೃಶ್ಯತೆ, ವಿಗ್ರಹಾರಾದನೆ, ಬಹುಪತ್ನಿತ್ವವು ವೇದಗಳಲ್ಲಿ ಹೇಳಿಲ್ಲವೆಂದೂ, ಶಿಶುಹತ್ಯ ಖಂಡಿಸಿ ವಿಧವಾ ವಿವಾಹವನ್ನು ಪ್ರತಿಪಾದಿಸಿದರು. ಭಾರತವನ್ನು ಆರ್ಯ ಸಮಾಜವೆಂದು ಕರೆದರು. ರಾಷ್ಟ್ರವನ್ನು ಶುದ್ಧೀಕರಣಗೊಳಿಸಬೇಕೆಂದರು, ಧೈರ್ಯ ಮತ್ತು ನೈತಿಕತೆಯನ್ನು ಭೋದಿಸಿರು. ಇವುಗಳೆಲ್ಲವೂ ಭಾರತದಲ್ಲಿ ಬ್ರಿಟೀಷರ ಸಾಮ್ರಾಜ್ಯಷಾಹಿ ವಿರುದ್ಧ ಹೋರಾಡಲು ಪ್ರೋತ್ಸಾಹ ನೀಡಿದಂತಾಯಿತು.

### 6.3.2 ಆರ್ಯ ಸಮಾಜದ ತತ್ವಗಳು

ಆರ್ಯ ಸಮಾಜದ ಗುರಿ ಮತ್ತು ಉದ್ದೇಶಗಳನ್ನು ಅನುಸರಿಸಿ ಸುಮಾರೂ 28ತತ್ವಗಳನ್ನು ಮಾರ್ಗದರ್ಶನಕ್ಕೆ ಅಳವಡಿಸಿಕೊಳ್ಳಲಾಯಿತು. 1877ರ ಲಾಹೋರ್‌ನಲ್ಲಿ ಇವುಗಳನ್ನು ದಯಾನಂದ ಸರಸ್ವತಿಯವರು ಹತ್ತು ತತ್ವಗಳಿಗೆ ಇಳಿಸಿದರು ಅವುಗಳು :

1. ಸತ್ಯದ ಜ್ಞಾನ ಅಂದರೆ ದೇವರನ್ನು ಜ್ಞಾನದ ಮೂಲಕ ನೋಡುವುದು.
2. ದೇವರು ಸತ್ಯ, ಬುದ್ಧಿವಂತಿಕೆ ಮತ್ತು ಎಲ್ಲಾ ವಿಷಯ ಕರ್ತೃ ಅವನೊಬ್ಬನೇ ಪೂಜೆಗೆ ಅರ್ಹ.
3. ವೇದಗಳು ನಿಜವಾದ ಜ್ಞಾನದ ಗ್ರಂಥಗಳು, ಅವುಗಳು ಅಧ್ಯಯನ, ಅವುಗಳನ್ನು ಬೋಧಿಸುವುದು ಮತ್ತು ಕೇಳುವುದು ಎಲ್ಲರ ಧರ್ಮ
4. ನಾವು ಸತ್ಯವನ್ನು ಒಪ್ಪಿಕೊಂಡು ಅಸತ್ಯವನ್ನು ಹೊರದೂಡಬೇಕು
5. ಎಲ್ಲಾ ಕಾರ್ಯಗಳನ್ನು ಧರ್ಮದ ತಳಹದಿಯ ಮೇಲೆಯೇ ಮಾಡಬೇಕು.
6. ಪ್ರಪಂಚಕ್ಕೆ ಒಳ್ಳೆಯದನ್ನು ಮಾಡಬೇಕು ಅಂದರೆ ದೈಹಿಕ, ಧಾರ್ಮಿಕ ಮತ್ತು ಸಾಮಾಜಿಕ ಅಭಿವೃದ್ಧಿಗಳನ್ನು ನಡೆಸಬೇಕು.
7. ಎಲ್ಲರನ್ನೂ ಪ್ರೀತಿಯಿಂದ ಕಾಣಬೇಕು ಮತ್ತು ಎಲ್ಲರಿಗೂ ನ್ಯಾಯ ದೊರಕುವಂತೆ ಮಾಡಬೇಕು.
8. ಅಜ್ಞಾನವನ್ನು ತೊಲಗಿಸಿ ಜ್ಞಾನವನ್ನು ಸಂಪಾದಿಸಬೇಕು.

28

9. ಸ್ವಂತ ಜೀವನದಲ್ಲಿಯೇ ತೃಪ್ತಿಪಡಬಾರದು. ಎಲ್ಲರಿಗೂ ಸೇವೆ ಸಲ್ಲಿಸಬೇಕು.

10. ಸಾಮಾಜಿಕ ಮತ್ತು ನ್ಯಾಯೋಚಿತವಾದ ವಿಷಯಗಳು ಸರ್ವರಿಗೂ ದೊರಕಬೇಕು.

ದಯಾನಂದರು ಹಿಂದೂ ಧರ್ಮದ ವಿಗ್ರಹರಾಧನೆ ಮತ್ತು ಹಲವಾರು ಸಾಮಾಜಿಕ ಪಾಪಗಳನ್ನು ಖಂಡಿಸಿದರು. ಇವುಗಳ ವಿರುದ್ಧ ಹೋರಾಡಿದರೂ ಕೂಡ ಬಡವರು ಮತ್ತು ನಿರ್ಗತಿಕರಿಗೆ ಶಿಕ್ಷಣ ಮತ್ತು ಉದ್ಯೋಗವನ್ನು ನೀಡಬೇಕು. ವೈಯಕ್ತಿಕ ಜೀವನವನ್ನು ಸಾಗಿಸಬೇಕು ಇವರು ಪರೋಪಕಾರಣಿ ಸಭಾವನ್ನು ಸ್ಥಾಪಿಸಿದರು. ಧರ್ಮದ ಬಗ್ಗೆ ಇರುವ ಬೇಧಭಾವವನ್ನು ತೊಡೆಯಲು ತಿಳಿಸಿದರು. ಆಧುನಿಕ ಭಾರತದ ನಿರ್ಮಾಣಕ್ಕೆ ಶ್ರಮಪಟ್ಟರು.

ಜಾತಿ ಪದ್ಧತಿ ಖಂಡಿಸಿದರು. ಇದೊಂದು ಅವೈಜ್ಞಾನಿಕ ಹಿಂದೂ ಸಮಾಜಕ್ಕೆ ಕಳಂಕಿತವಾದುದ್ದೆಂದು ತಿಳಿಸಿದರು. ತಮ್ಮ ಗ್ರಂಥ ಸತ್ಯಾರ್ಥ ಪ್ರಕಾಶದಲ್ಲಿ ಇವರ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು.

ಇತರೇ ಧರ್ಮಗಳಿಂದ ಹಿಂದೂ ಧರ್ಮಕ್ಕೆ ಮತಾಂತರಗೊಳಿಸುವ ಕಾರ್ಯಕ್ಕೆ ಉತ್ತೇಜನ ನೀಡಿದರು. ಇದನ್ನು ಶುದ್ಧಿ ಚಳುವಳಿ ಎಂದು ಕರೆದರು. ಶಿಕ್ಷಣವು ರಾಷ್ಟ್ರೀಯತೆಯನ್ನು ಬೆಳೆಸುತ್ತದೆಂದು ತಿಳಿದು ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದರು. ಆದರೆ ಇಂಗ್ಲೀಷ್ ಶಿಕ್ಷಣವನ್ನು ವಿರೋಧಿಸಿದರು. ಇಂಗ್ಲೀಷ್ ಭಾಷೆಯನ್ನು ಎರಡನೆಯ ಭಾಷೆಯಾಗಿ ಅಧ್ಯಯನ ಮಾಡಿ ಎಂದರು. ಸಂಸ್ಕೃತಕ್ಕೆ ಪ್ರಥಮ ಸ್ಥಾನ ನೀಡಿದರು. ಪ್ರಾದೇಶಿಕ ಪಂಗಡ ಮುಂತಾದವುಗಳನ್ನು ಒಪ್ಪಲಿಲ್ಲ. ಆರ್ಯ ಸಮಾಜವು ತಮ್ಮ ಮನೆ ಮತ್ತು ಜನರೆಲ್ಲಾ ಸಹೋದರರು, ಋಗ್ವೇದ, ಯರ್ಜವೇದ, ಸತ್ಯಾರ್ಥ ಪ್ರಕಾಶ ಮುಂತಾದ ಸುಮಾರು 45 ಗ್ರಂಥಗಳನ್ನು ಬರೆದು ಆರ್ಯ ಸಮಾಜವನ್ನು ಅಭಿವೃದ್ಧಿಗೊಳಿಸಿ ಆಮೂಲ್ಲಕ ಜನರಲ್ಲಿ ರಾಷ್ಟ್ರೀಯತೆ ಭಾವನೆ ಬೆಳೆಯುವಂತೆ ಮಾಡಿದರು.

## 6.4 ಘಟಕದ ಸಾರಾಂಶ

ಈ ಘಟಕದ ಅಧ್ಯಯನವನ್ನು ನಡೆಸಿದ ನಂತರ ನಾವು ಈ ಕೆಳಕಂಡ ಅಂಶಗಳನ್ನು ತಿಳಿದುಕೊಂಡೆವು.

- ಭಾರತದ ರಾಷ್ಟ್ರೀಯತೆ ಭಾವನೆಯ ಬೆಳವಣಿಗೆ
- ಹಲವಾರು ಸಮಾಜೋ-ಧಾರ್ಮಿಕ ಸಂಸ್ಥೆಗಳ ಉಗಮ
- ರಾಜಾರಾಂ ಮೋಹನ್‌ರಾಯ್ ಮತ್ತು ದಯಾನಂದ ಸರಸ್ವತಿಯವರು ಕ್ರಮವಾಗಿ ಬ್ರಹ್ಮ ಸಮಾಜ ಮತ್ತು ಆರ್ಯ ಸಮಾಜಗಳನ್ನು ಸ್ಥಾಪಿಸಿದ ವಿಷಯ
- ಬ್ರಹ್ಮ ಸಮಾಜ ಮತ್ತು ಆರ್ಯ ಸಮಾಜಗಳ ಪ್ರಮುಖ ತತ್ವಗಳು
- ಈ ಎರಡು ಸಮಾಜೋ ಧಾರ್ಮಿಕ ಚಳುವಳಿಗಳ ಪ್ರಭಾವದಿಂದ ದೇಶದಲ್ಲಿ ಜಾರಿಗೆ ತಂದ ಅನೇಕ ಸುಧಾರಣೆಗಳನ್ನು ಕುರಿತು ಅಧ್ಯಯನ ಮಾಡಿದೆವು.

## 6.5 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. 19ನೇ ಶತಮಾನದ ಭಾರತದಲ್ಲಿ ಜಾರಿಗೆ ತಂದ ಹಲವು ಸುಧಾರಣೆಗಳನ್ನು ಕುರಿತು ಬರೆಯಿರಿ.
2. ಭಾರತದ ರಾಷ್ಟ್ರೀಯತೆಯ ಬೆಳವಣಿಗೆಯಲ್ಲಿ ಬ್ರಹ್ಮ ಸಮಾಜದ ಪಾತ್ರವನ್ನು ಚರ್ಚಿಸಿ

3. ಭಾರತದ ಇತಿಹಾಸದಲ್ಲಿ ರಾಜಾರಾಂ ಮೋಹನ್‌ರಾಯ್‌ರ ಪಾತ್ರವನ್ನು ಅಂದಾಜು ಮಾಡಿ
4. ಭಾರತೀಯ ಸಮಾಜಕ್ಕೆ ಗಯಾನಂದ ಸರಸ್ವತಿ ಮತ್ತು ಆರ್ಯ ಸಮಾಜದ ಕೊಡುಗೆಯನ್ನು ತಿಳಿಸಿ.
5. 19ನೇ ಶತಮಾನದಲ್ಲಿ ಆರ್ಯ ಸಮಾಜವು ಪಾಲಿಸಿದ ತತ್ವಗಳನ್ನು ವಿವರಿಸಿ.

## 6.6 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


| | | | |
|---|---|---|---|
| 1. | Upendranath.B | : | Raja Ram Mohan Roy |
| 2. | Desai. A.R. | : | Social Back ground of Indian Nationalism |
| 3. | Majumdar R.C & others | : | British Paramountcy and Indian Renaissance |
| 4. | Singh.B.K. | : | Swamy Dayananda |


ಡಾ. ಎ.ಸೋಮಶೇಖರ್

*ವಿಷಯಾನುಕ್ರಮಣಿಕೆ*

## 7.0 ಉದ್ದೇಶಗಳು

ಈ ಘಟಕ 7ರ ಅಧ್ಯಯನದಿಂದ ನಾವು ಕೆಳಗಿನ ವಿಷಯಗಳನ್ನು ಅಧ್ಯಯನ ಮಾಡುತ್ತೇವೆ.

- ಹಲವು ಸಮಾಜೋ ಧಾರ್ಮಿಕ ಸಂಸ್ಥೆಗಳಿಂದ ಭಾರತದಲ್ಲಿ ರಾಷ್ಟ್ರೀಯತೆ ಮನೋಭಾವ ಹೇಗಾಯಿತು ಎಂಬುದನ್ನು ತಿಳಿಯುತ್ತೇವೆ.
- ರಾಮಕೃಷ್ಣ ಪರಮಹಂಸರ ಶಿಷ್ಯರಾದ ವಿವೇಕಾನಂದ ಸ್ಥಾಪಿಸಿದ ರಾಮಕೃಷ್ಣ ಮಿಷನ್ ಕುರಿತು ಅಧ್ಯಯನ ಮಾಡುವೆವು.
- ಥಿಯೋಸಾಫಿಕಲ್ ಸೊಸೈಟಿಯ ಸ್ಥಾಪನೆ ಮತ್ತು ಅನಿಬೆಸೆಂಟರ ಬಗ್ಗೆ ಅರಿಯುವೆವು.
- ಅಲೀಘರ್ ಚಳುವಳಿ ಮತ್ತು ರಾಷ್ಟ್ರೀಯತೆಯ ಚಳುವಳಿಗೆ ಮತ್ತು ಸ್ವಾತಂತ್ರ್ಯ ಚಳುವಳಿಗೆ ಇವುಗಳ ಪ್ರೋತ್ಸಾಹವನ್ನು ತಿಳಿಯುವೆವು.

## 7.1 ಪೀಠಿಕೆ

19ನೇ ಶತಮಾನವು ಭಾರತದ ಒಂದು ಪುನರುತ್ಥಾನವೆಂದು ಹೇಳಬಹುದು. ಭಾರತೀಯರು ಎಲ್ಲಾ ಕ್ಷೇತ್ರಗಳಲ್ಲಿ ಎಚ್ಚೆತ್ತುಕೊಂಡರು. ಈ ಭಾವನೆಗೆ ಭಾರತದ ಹಲವು ಸಮಾಜೋ ಧಾರ್ಮಿಕ ಸಂಸ್ಥೆಗಳು ಕಾರಣವಾಗಿವೆ. ಇವುಗಳಲ್ಲಿ ಬ್ರಹ್ಮ ಸಮಾಜ, ಆರ್ಯ ಸಮಾಜ, ರಾಮಕೃಷ್ಣ ಮಿಷನ್, ಥಿಯೋಸಾಫಿಕಲ್ ಸೊಸೈಟಿ, ಅಲೀಘರ್ ಚಳುವಳಿ ಮುಂತಾದವು ಬಹು ಮುಖ್ಯವಾದವುಗಳು ಬ್ರಹ್ಮ ಸಮಾಜ ಮತ್ತು ಆರ್ಯ ಸಮಾಜದ ಬಗ್ಗೆ ಈಗಾಗಲೇ ಅಧ್ಯಯನ ನಡೆಸಿರುವುದರಿಂದ ನಾವು ಈ ಘಟಕದಲ್ಲಿ ರಾಮಕೃಷ್ಣ ಮಿಷನ್, ಥಿಯೋಸಾಫಿಕಲ್ ಸೊಸೈಟಿ ಮತ್ತು ಅಲಿಘರ್ ಚಳುವಳಿಗಳು ಹೇಗೆ ಕಾರಣವಾದವು ಎಂಬುದನ್ನು ತಿಳಿಯೋಣ. ಇವರು ಮಾಡಿದ ಕಾರ್ಯ, ಬೋಧಿಸಿದ ತತ್ವಗಳು ಮುಂತಾದುವನ್ನು ಅಧ್ಯಯನ ಮಾಡಬೇಕಾಗಿದೆ. ಇದಲ್ಲದೇ ನಾವು ರಾಮಕೃಷ್ಣ ಪರಮಹಂಸ, ವಿವೇಕಾನಂದ, ಅನಿಬೆಸೆಂಟ್, ಸೈಯದ್ ಅಹಮದ್ ಖಾನ್ ಮುಂತಾದ ವಿದ್ವಾಂಸರ ಬಗ್ಗೆಯು ತಿಳಿಯುತ್ತೇವೆ.

## 7.2 ರಾಮಕೃಷ್ಣ ಮಿಷನ್

ರಾಮಕೃಷ್ಣ ಪರಮಹಂಸರ ನಿಧನಾ ನಂತರ ಹತ್ತು ವರ್ಷಗಳಲ್ಲಿ ರಾಮಕೃಷ್ಣ ಮಿಷನ್ನನ್ನು ಅವರ ಶಿಷ್ಯ ಸ್ವಾಮಿ ವಿವೇಕಾನಂದರು ಸ್ಥಾಪಿಸಿದರು. ಇದೊಂದು ಬಹಳ ಪ್ರಮುಖ ಸಮಾಜೋ ಧಾರ್ಮಿಕ ಚಳುವಳಿ ಕೇಂದ್ರವಾಗಿತ್ತು. ಇದು ಭಾರತೀಯರನ್ನು ಎಚ್ಚೆತ್ತುಕೊಳ್ಳುವಂತೆ ಮಾಡಿದ್ದಲ್ಲದೇ ಸ್ವಾತಂತ್ರ್ಯ ಚಳುವಳಿಯನ್ನು ಸರಿಯಾದ ಮಾರ್ಗದಲ್ಲಿ ಮುಂದುವರಿಯಲು ಮಾರ್ಗದರ್ಶನ ನೀಡಿತು.

### *7.2.1 ರಾಮಕೃಷ್ಣ ಪರಮಹಂಸ*

ಇವರು ಬಂಗಾಳದಲ್ಲಿ ಬ್ರಾಹ್ಮಣ ಕುಟುಂಬದಲ್ಲಿ ಹೂಗ್ಲಿ ಜಿಲ್ಲೆಯ ಕಮರ್ ಪುಕಾರ್ ಹಳ್ಳಿಯಲ್ಲಿ 1836ರಲ್ಲಿ ಜನಿಸಿದರು. ಮೊದಲ ಹೆಸರು ಗಂಗಾಧರ, ಕಾಳೀ ಆರಾಧಕರು, ದಕ್ಷಿಣೇಶ್ವರ ಕಾಳಿ ದೇವಾಲಯದ ಮುಖ್ಯ ಅರ್ಚಕರಾದರು, ಕಾಳಿಯು ನಿಜವಾದ

ದೇವತೆಯೆಂದು ತಿಳಿದಿದ್ದರು. ತಾಯಿಯನ್ನು ಪೂಜಿಸಿದ ಹಾಗೆ ಎಂದು ತಿಳಿದಿದ್ದರು. ಭಕ್ತಿಯಿಂದ ಅವರು ತಮ್ಮ ಹಸಿವು, ನೀರಡಿಕೆ ಮತ್ತು ದೈಹಿಕ ಕಾರ್ಯಗಳೆಲ್ಲವನ್ನು ಮರೆತಿರುತ್ತಿದ್ದರು. ಪ್ರಾಪಂಚಿಕ ಜೀವನವನ್ನು ಮರೆತು ದೇವರನ್ನು ಕಾಣುವುದು ಜೀವನದ ಪರಮಗುರಿ ಎಂದು ತಿಳಿದಿದ್ದರು. ಎಲ್ಲಾ ಧರ್ಮಗಳೂ ಒಂದೇ ಗುರಿಯನ್ನು ಹೊಂದಿರುತ್ತವೆ. ಇಸ್ಲಾಂ ಧರ್ಮ, ಕ್ರೈಸ್ತ ಧರ್ಮ, ಸಿಖ್‌ಧರ್ಮ ಎಲ್ಲವನ್ನೂ ತಿಳಿದುಕೊಂಡರು. ಇವರ ದೇವತೆಗಳೆಲ್ಲರೂ ಕಾಳಿ ಮತ್ತು ಕೃಷ್ಣನಂತೆಯೇ ಎಂದು ಹೇಳಿದರು. ವಿವೇಕಾನಂದರು ಹೇಳುವಂತೆ "ಹೊರಗೆ ಇವರು ಭಕ್ತ ಮತ್ತು ಒಳಗೆ ಇವರೊಬ್ಬ ಜ್ಞಾನಿ". ಮಾನವನು ತನ್ನನ್ನು ತಿಳಿಯಬೇಕು, ಮಾನವರಲ್ಲಿ ಪ್ರೀತಿಯಿರಬೇಕು ಜೀವನ ಮತ್ತು ಕಷ್ಟಗಳಲ್ಲಿ ಭಾಗಿಯಾಗಬೇಕು. ಓಮಹಾಮಾತೆ ನನ್ನನ್ನು ದೇವರ ಸೇವಕನನ್ನಾಗಿ ಮಾಡು" ಎಂದರು ಇವರು ಕರುಣೆ ಬೋಧಿಸಲಿಲ್ಲ, ಸೇವೆಯನ್ನು ಬೋಧಿಸಿದರು. ಮಾನವನಿಗೆಸೇವೆ ಸಲ್ಲಿಸುವುದು ದೇವರ ಸೇವೆ ಎಂದು ತಿಳಿಸಿದರು.

### *7.2.2 ಸ್ವಾಮಿ ವಿವೇಕಾನಂದ*

1863ರಲ್ಲಿ ಕಲ್ಕತ್ತಾದಲ್ಲಿ ಜನಿಸಿದರು. ಇವರ ಪ್ರಥಮ ಹೆಸರು ನರೇಂದ್ರ, ಶಾಲಾ ಕಾಲೇಜುಗಳಲ್ಲಿ ಒಳ್ಳೆಯ ಶಿಕ್ಷಣವಾಯ್ತು. ಒಳ್ಳೆಯ ದೇಹ ಸುಂದರ ಮುಖವನ್ನು ಹೊಂದಿದ್ದರು. ಪಾಶ್ಚಿಮಾತ್ಯ ದರ್ಶನದ ಬಗ್ಗೆ ಅತೀವವಾದ ಭಾವನೆಯಿದ್ದಿತು. ಇವರು ಡೆಸ್ಕ್‌ರ್ಟಸ್, ಹ್ಯೂಂ, ಕ್ಯಾಂಟ್, ಹೆಗೆಲ್, ಕಾಮ್ಟೆ, ಡಾರ್ವಿನ್ ಮತ್ತು ಮಿಲ್‌ರವರ ಬಗ್ಗೆ ಓದಿಕೊಂಡಿದ್ದರು ಇದರಿಂದಾಗಿ ವಿಮರ್ಶೆ ಮತ್ತು ವಿಶ್ಲೇಷಣಾ ಭಾವನೆ ಬೆಳೆಯಿತು. ಬ್ರಹ್ಮ ಸಮಾಜದಲ್ಲಿ ಭ್ರಮನಿರಸನವಾದ ನಂತರ ರಾಮಕೃಷ್ಣರ ಹತ್ತಿರ ತೆರಳಿದರು. 20ನೇ ವರ್ಷದಲ್ಲಿ ಇವರ ಜೀವನದ ತಿರುವಿನ ವರ್ಷವದು. ರಾಮಕೃಷ್ಣರ ಪರಮ ಶಿಷ್ಯರಾದರು. ಸನ್ಯಾಸಿಯಾಗಿ ಅವರ ಗುರುಗಳ ಚಿಂತನೆಗಳು ಮತ್ತು ತತ್ವಗಳ ಪಾಲನೆಗೆ ಬದ್ಧರಾಗಿ ತಮ್ಮ ಜೀವನ ಸಾಗಿಸಿದರು. ಭಾರತಾದ್ಯಂತ ಸಂಚರಿಸಿ ಜನರ ನೋವುಗಳನ್ನು ಅರಿತರು. ವೇದಾಂತದಲ್ಲಿ ನಂಬಿಕೆ, ಗುರುಭಕ್ತಿ ಇವರನ್ನು ತೃಪ್ತರಾಗಿಸಿತು. ಆತ್ಮ ತೃಪ್ತಿಯನ್ನು ಮತ್ತು ಭೌದ್ಧಿಕ ಶಕ್ತಿಯನ್ನು ಹೆಚ್ಚಿಸಿತು.

ಗುರುಗಳ ಸಂದೇಶಗಳನ್ನು ಎಲ್ಲೆಡೆ ಸಾರಲು ಪ್ರಾರಂಭಿಸಿದರು 1887ರಲ್ಲಿ ರಾಮಕೃಷ್ಣ ಮಠವನ್ನು ಬಾರಾ ನಗರದಲ್ಲಿ ಸ್ಥಾಪಿಸಿದರು. 1899ರಲ್ಲಿ ವೆಲ್ಲೂರು ಇದು ಎಲ್ಲಾ ಮಠಗಳ ಕೇಂದ್ರವಾಯ್ತು. 1893ರಲ್ಲಿ ಅಮೇರಿಕಾಕ್ಕೆ ತೆರಳಿ ಪ್ರಪಂಚದ ಎಲ್ಲಾ ಧರ್ಮಗಳ ಸಮ್ಮೇಳನದಲ್ಲಿ ಭಾಗವಹಿಸಿ ಚಿಕಾಗೋದಲ್ಲಿ ತಮ್ಮ ಭಾಷಣ ಮಾಡಿ ಹಿಂದೂ ಧರ್ಮದ ಬಗ್ಗೆ ಸೆಪ್ಟಂಬರ್ 19, 1893, ಅಲ್ಲಿಯ ಎಲ್ಲರನ್ನೂ ಮಂತ್ರ ಮುಗ್ಧರಾಗಿಸಿದರು. ಅವರು ಸಂಭೋಧಿಸಿದ ಅಮೇರಿಕಾದ ಸಹೋದರ ಸಹೋದರಿಯರೇ ಎಂಬುದು ಎಲ್ಲರಿಗೂ ಸಂತಸ ತಂದಿತು. ಇಲ್ಲಿ ಹಿಂದೂ ಧರ್ಮದ ಪರಿಚಯ ಮಾಡಿದರು.

ಇವರು ಒಬ್ಬ ಮಾನವತಾವಾದಿಯಾಗಿ ಎಲ್ಲರೂ ಮಹಾತ್ಮರಾಗಲು ಸಾಧ್ಯ. ಯುವ ಜನರು ಎಚ್ಚೆತ್ತು ಸಮಾಜದಲ್ಲಿಯ ಅನಾಚಾರ. ಬಡತನ, ಅಜ್ಞಾನ, ಮೂಢನಂಬಿಕೆ, ಅಸಮಾನತೆ ತೊಡೆದುಹಾಕಬೇಕೆಂದು ತಿಳಿಸಿದರು. ಸದಾ ಜಾಗೃತರಾಗಿ, ಕ್ರಿಯಾಶೀಲರಾಗಿರಬೇಕೆಂದು ಕರೆ ಇತ್ತರು. ಸಮಾಜಕ್ಕೆ ಏನು ನೀಡಬೇಕೆಂಬುದನ್ನು ಯೋಚಿಸಬೇಕು. ಏಕೆಂದರೆ ತನ್ನನ್ನು ಸಮಾಜ ಬೆಳೆಸಿದೆ ಎಂಬುದನ್ನು ತಿಳಿಯಬೇಕೆಂದರು. ಇವರೊಬ್ಬ ಭಾರತ ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸಿದ ಮಹಾನ್ ವ್ಯಕ್ತಿ ಎನ್ನಬಹುದು.

ದೇಶವನ್ನು ಒಳ್ಳೆಯ ಸಧೃಡ, ಧೈರ್ಯಶಾಲಿ ಮತ್ತು ಚಲನಾಶೀಲನಾಗಿ ಮಾಡಲು ಎಲ್ಲರೂ ಪ್ರಯತ್ನಿಸಬೇಕು. ರಾಷ್ಟ್ರೀಯತೆಯ ಹೆಮ್ಮೆಯನ್ನು ತಿಳಿಸಿದರು. ಆದ್ದರಿಂದಲೇ ಅವರನ್ನು "ಭಾರತದ ದೇಶಭಕ್ತ ಸನ್ಯಾಸಿ" ಎಂದು ಕರೆದಿದ್ದಾರೆ.

## 7.3 ಥಿಯೋಸಾಫಿಕಲ್ ಸೊಸೈಟಿ

ಥಿಯೋ ಅಂದರೆ ದೇವರ ಸೋಫಿಯಾ ಎಂದರೆ ಬುದ್ಧಿವಂತಿಕೆ ಅಂದರೆ ದೇವರ ಬುದ್ಧಿವಂತಿಕೆಯ ಸೊಸೈಟಿಯನ್ನು ಸ್ಥಾಪಿಸಿ ಬ್ರಹ್ಮಜ್ಞಾನವನ್ನು ತಿಳಿಯಲು ಪ್ರಯತ್ನಿಸಲು ಜನರಿಗೆ ಈ ಸಮಾಜದವರು ಕರೆ ಇತ್ತರು. ಈ ಸೊಸೈಟಿಯನ್ನು ನ್ಯೂಯಾರ್ಕ್‌ನಲ್ಲಿ 1875ರಲ್ಲಿ ಮ್ಯಾಡಮ್ ಬ್ಲಾವಟೆಸ್ಕಿ ಮತ್ತು ಕರ್ನಲ್ ಓಲ್ಕಾಟ್‌ರವರು ಸ್ಥಾಪಿಸಿದರು. ಇವರು ಭಾರತೀಯ ಚಿಂತನೆ ಮತ್ತು ಸಂಸ್ಕೃತಿಯ ಬಗ್ಗೆ ಪ್ರೇರೇಪಿತರಾಗಿ ಇದನ್ನು ಸ್ಥಾಪಿಸಿದರು. ಇದರ ಶಾಖೆಯನ್ನುಮದ್ರಾಸ್‌ನ ಅಡ್ಯಾರ್‌ಗೆ ಸ್ಥಳಾಂತರಿಸಿದರು. ಇದರ ಶಾಖೆಗಳು ಹಲವಾರು ಕಡೆಗಳಲ್ಲಿ ಸ್ಥಾಪಿಸಲ್ಪಟ್ಟವು. ಇದರ ಪ್ರಮುಖ ತತ್ವ ಜಗತ್ತಿನಲ್ಲಿ ಎಲ್ಲಾ ಧರ್ಮಗಳೂ ಒಂದೇ, ಧಾರ್ಮಿಕ ಜೀವನಕ್ಕೆ ಪ್ರಾಶಸ್ತ್ಯ ನೀಡಬೇಕು, ಸತ್ಯಶೋಧನೆ, ಜಾಗತಿಕ ಸಹೋದರತೆಯನ್ನು ಬೆಳೆಸಬೇಕು ಇದರ ಈ ತತ್ವಗಳು ಉಪನಿಷತ್ತುಗಳು, ಸಂಖ್ಯಾ, ಯೋಗ ಮತ್ತು ವೇದಾಂತ ಚಿಂತನಾ ಶಾಲೆಗಳಿಂದ ಪ್ರಭಾವಿತವಾಗಿದ್ದವು.

### *7.3.1 ಆನಿಬೇಸೆಂಟರ ಪಾತ್ರ*

1888ರಲ್ಲಿ ಐರ್ಲೆಂಡಿನ ಮಹಿಳೆಯಾದ ಇವರು ಇಂಗ್ಲೇಡಿನ ಇದರ ಶಾಖೆಗೆ ಸೇರಿದರು. ಈ ಸೊಸೈಟಿಯಿಂದ ಬಹಳಷ್ಟು ಪ್ರಭಾವಿತರಾಗಿ ಈ ಸಮಾಜಕ್ಕೆ ಸೇವೆ ಸಲ್ಲಿಸಿದರು. 1893ರ ಅಮೇರಿಕಾದ ಧಾರ್ಮಿಕ ಸಮ್ಮೇಳನದಲ್ಲಿ ಭಾಗವಹಿಸಿದರು. ವಿವೇಕಾನಂದರ ಭಾಷಣದಿಂದ ಪ್ರೇರೇಪಿತರಾದರು. ಭಾರತಕ್ಕೆ ಬಂದರು (1893) ಭಾರತದಾದ್ಯಂತ ಸಂಚರಿಸಿ ಭಾರತೀಯ ಧರ್ಮ, ಕರ್ಮಸಿದ್ಧಾಂತ ಆತ್ಮದ ದೇವರು ಅವತಾರ ಎಲ್ಲಾ ವಿಷಯಗಳನ್ನು ತಿಳಿದುಕೊಂಡರು. ಪಾಶ್ಚಿಮಾತ್ಯ ವೈಜ್ಞಾನಿಕ ಜೀವನವನ್ನು ಖಂಡಿಸಿದರು. ಧರ್ಮಕ್ಕಾಗಿ 20 ವರ್ಷಗಳು ಸಾಕಷ್ಟು ಶ್ರಮಪಟ್ಟು ಸಾಮಾಜಿಕ ಕ್ಷೇತ್ರದಲ್ಲಿ ಸಾಕಷ್ಟು ಸೇವೆ ಸಲ್ಲಿಸಿದರು.

ಕಾಂಗ್ರೆಸ್ಸಿನ ಸದಸ್ಯರೂ, ನಂತರ ಅಧ್ಯಕ್ಷರೂ ಆಗಿದ್ದರು. ಹೋಂರೋಲ್ ಲೀಗ್ ಚಳುವಳಿಯನ್ನು ಪ್ರಾರಂಭಿಸಿದರು. ಸಂವಿಧಾನಾತ್ಮಕ ಮಾರ್ಗದಲ್ಲಿ ಒಲವು ತೋರಿಸಿದರು. 1918ರಲ್ಲಿ ಅಡಿಯಾರ್‌ನಲ್ಲಿ ರಾಷ್ಟ್ರೀಯ ವಿಶ್ವವಿದ್ಯಾನಿಲಯ ಸ್ಥಾಪಿಸಿದರು. ಭಾರತೀಯ ಮಹಿಳೆಯರ ಸಂಘ ಸ್ಥಾಪನೆ ಮಾಡಿದರು. ಸತ್ಯಮಾರ್ಗವಾಗಿ ಕೊನೆಯವರೆಗೂ ನಡೆದುಕೊಂಡರು.

### *7.3.2 ಥಿಯೋಸಾಫಿಕಲ್ ಸೊಸೈಟಿಯ ಗುರಿಗಳು*

- ಮಾನವನ ಜಾಗತಿಕ ಸಹೋದರತೆಯನ್ನು ಬೆಳೆಸುವುದು
- ಪ್ರಾಚೀನ ಧರ್ಮಗಳು, ಸಾಹಿತ್ಯ, ದರ್ಶನ ಮತ್ತು ವಿಜ್ಞಾನಗಳ ಅಧ್ಯಯನ ಮಾಡುವುದು
- ಸ್ವಾಭಾವಿಕ ಕಾನೂನುಗಳು ಮತ್ತು ದೈವಶಕ್ತಿಯು ಮಾನವನ ಮೇಲೆ ಬೀರುವ ಪ್ರಭಾವವನ್ನು ಅಧ್ಯಯನ ಮಾಡುವುದು.

ಹಿಂದೂ ಧರ್ಮ ತತ್ವಗಳನ್ನು ಪ್ರತಿಪಾದಿಸಿದರು. ಜಾತಿ ಪದ್ಧತಿಯನ್ನು ಹೋಗಲಾಡಿಸಿ ವಿಶ್ವಭ್ರಾತೃತ್ವವನ್ನು ತರಬೇಕೆಂದು ಹೇಳಿದರು.

ಈ ಸೊಸೈಟಿಯು ರಾಷ್ಟ್ರೀಯ ಚಳುವಳಿಯಲ್ಲಿ ಉತ್ತಮ ಪಾತ್ರ ನಿರ್ವಹಿಸಿತು. ಭಾರತ ರಾಷ್ಟ್ರೀಯ ಕಾಂಗ್ರೇಸ್ಸನ್ನು ಬೆಂಬಲಿಸಿತು. ಬೇಸೆಂಟರ ಪಾತ್ರ ಇಲ್ಲಿ ಬಹಳ ಹಿರಿದಾದುದು. ರಾಷ್ಟ್ರೀಯತೆಯನ್ನು ಬೆಳೆಸುವಲ್ಲಿ ಪ್ರಮುಖ ಪಾತ್ರ ನಿರ್ವಹಿಸಿತು. 1903ರಲ್ಲಿ ಬೇಸೆಂಟರು "ಭಾರತವನ್ನು ಭಾರತೀಯ ಭಾವನೆಗಳು ಭಾರತೀಯ ಸಂಪ್ರದಾಯ, ಚಿಂತನೆಗಳು ಮತ್ತು ಭಾವನೆಗಳಿಂದ " ಭಾರತೀಯರೇ ಆಳಬೇಕೆಂದು ತಿಳಿಸಿದರು. ಭಾರತ ಚರಿತ್ರೆಯಲ್ಲಿ ರಾಷ್ಟ್ರೀಯತೆಯನ್ನು ಹೆಚ್ಚಿಸುವಲ್ಲಿ ಇದು ಬಹಳ ಉತ್ತಮ ಕಾರ್ಯ ನಿರ್ವಹಿಸಿತು.

## 7.4 ಮುಸ್ಲಿಂ ಸುಧಾರಣಾ ಚಳುವಳಿ

ದೇಶದ ಸುಧಾರಣೆಯಲ್ಲಿ ಮುಸ್ಲಿಂರೂ ಹಿಂದೆ ಉಳಿಯಲಿಲ್ಲ. ಪಾಶ್ಚಿಮಾತ್ಯ ಸಂಸ್ಕೃತಿಯನ್ನು ಅವರು ಕಟುವಾಗಿ ಟೀಕಿಸಿದರು. ಭಾರತದ ಬಡತನ ಸಾಮಾಜಿಕ ಹಿಂದುಳಿಯುವಿಕೆಗೆ ಬ್ರಿಟೀಷರೇ ಕಾರಣ ಎಂದು ತಿಳಿಸಿದರು. ಇವರು ಬಾಲ್ಯವಿವಾಹ, ಬಹುಪತ್ನಿತ್ವ ಪರ್ದಾ ಪದ್ಧತಿ ಮುಂತಾದವುಗಳು ಮೊದಲಿನಿಂದಲೂ ಪಾಲಿಸಿಕೊಂಡು ಬಂದರು ಅವರಲ್ಲಿ ಜಾತಿ ಭೇದ ಮತ್ತು ಅಸ್ಪೃಷ್ಯತೆ ಸೋಂಕು ಇರಲಿಲ್ಲ. ಇವರ ಧರ್ಮ ಮತ್ತು ಸಮಾಜದಲ್ಲಿಯೂ ಅನೇಕ ಕೆಟ್ಟ ನಿಯಮಗಳು, ಸಂಪ್ರದಾಯಗಳು ಬಂದು ಸೇರಿದವು. ಇವುಗಳನ್ನು ತೆಗೆದುಹಾಕಲು 19ನೇ ಶತಮಾನದಲ್ಲಿ ಮುಸ್ಲಿಂ ಜನಾಂಗದಲ್ಲೂ ಒಂದು ರೀತಿಯ ಸುಧಾರಣಾ ಚಳುವಳಿ ಪ್ರಾರಂಭವಾಯಿತು.

ವಹಾಬಿ ಚಳುವಳಿಯು ಅರೇಬಿಯಾದಲ್ಲಿ ಪ್ರಾರಂಭವಾಯಿತು, ಮುಸ್ಲಿಂ ಸಂಪ್ರದಾಯ ಜೀವನದಲ್ಲಿ ಸುಧಾರಣೆಗೆ ಅವರ ನಾಯಕ ಸಯ್ಯದ್ ಅಹಮದ್ ಬರೇಲಿ ಪ್ರಯತ್ನಪಟ್ಟನು. ದೇವರು ಏಕತೆ ಸಂತರಿಗೆ ಗೌರವ, ಹಿಂದೂ-ಮುಸ್ಲಿಂರ ಭೇದ ಭಾವವನ್ನು ತೊಡೆಯಲು ತಿಳಿಸಿ, ಪಾಶ್ಚಾತ್ಯ ಶಿಕ್ಷಣವನ್ನು ವಿರೋಧಿಸಿದನು. ಶೇಖ್ ಕರಾಮತ್ ಅಲಿಯು ಇನ್ನೆರಡು ಸಾಮಾಜಿಕ ಮತ್ತು ಶಾಂತಿಯುತ ಚಳುವಳಿ ಪ್ರಾರಂಭಿಸಿದನು. ಸೂಫಿ ಪಂಥರ ತತ್ವಗಳನ್ನು ಅಳವಡಿಸಿಕ್ಕೊಳ್ಳಲು ಕರೆಇತ್ತರು. ಮುಸ್ಲಿಂರು ಪಾಶ್ಚಿಮಾತ್ಯ ಶಿಕ್ಷಣ ಮತ್ತು ಚಿಂತನೆಯನ್ನು ಅಳವಡಿಸಿಕೊಳ್ಳಲು ತಿಳಿಸಿದನು. ಅಹಮದೀಮ್ ಚಳುವಳಿಯು ಮಿರ್ಜಾ ಗುಲಾಮ್ ನೇತೃತ್ವದಲ್ಲಿ ನಡೆಯಿತು. ಇದನ್ನು ಮುಸ್ಲಿಂರ ಪ್ರಾಚೀನ ಸಂಪ್ರದಾಯವನ್ನು ಬೆಂಬಲಿಸಿದನು. ಇವುಗಳೆಲ್ಲದರ ವಿಷಯಗಳನ್ನು ತಿಳಿದ ಮುಸ್ಲಿಂರು ಯಾವುದರಲ್ಲೂ ಆಸಕ್ತಿ ತೋರಿಸಲೇ ಇಲ್ಲ. ಆದರೆ ಕೊನೆಗೆ ಮತ್ತೊಂದು ಚಳುವಳಿಯೂದ ಅಲೀಘರ್ ಚಲುವಳಿಯನ್ನು ಸರ್‌ಸೈಯದ್ ಅಹಮದ್‌ಖಾನನು ಪ್ರಾರಂಭಿಸಿದನು.

## 7.5 ಅಲೀಘರ್ ಚಳುವಳಿ

ಸರ್ ಸೈಯದ್ ಅಹಮದ್‌ಖಾನನು ಒಬ್ಬ ರಾಜಕೀಯ ಶೈಕ್ಷಣಿಕ ಮತ್ತು ಧಾರ್ಮಿಕ ಸುಧಾರಕನು. ಅಲೀಘರ್ ಚಳುವಳಿ ಪ್ರಾರಂಭಿಸಿ 19ನೇ ಶತಮಾನದ ಮುಸ್ಲಿಂರನ್ನು ಆಧುನಿಕತೆಯ ಕಡೆಗೆ ತಿರುಗಿಸಿ ಅವರಲ್ಲಿ ರಾಷ್ಟ್ರೀಯತೆಯ ಮನೋಭಾವವನ್ನು ಬೆಳೆಸಲು ಕಾರಣನಾದನು. ಇವನು ಮುಸ್ಲಿಂ ಮತ್ತು ಪಾಶ್ಚಾತ್ಯ ಸಂಸ್ಕೃತಿಯ ಸಮ್ಮೇಳನಕ್ಕೆ ಕರೆ ಇತ್ತನು. ಪಾಶ್ಚಿಮಾತ್ಯ ಚಿಂತನೆಗಳಿಂದ ಜನರನ್ನು ಎಚ್ಚರಿಸಲು ಪ್ರಯತ್ನಿಸಿದನು. ಪರ್ದಾಪದ್ಧತಿ, ಗುಲಾಮ ಪದ್ಧತಿಯನ್ನು ಖಂಡಿಸಿ ಸ್ತ್ರೀಯರ ಔನ್ನತ್ಯಕ್ಕೆ ಪ್ರಯತ್ನ ಮಾಡಿದನು. ಶಿಕ್ಷಣದಲ್ಲಿ ಅನೇಕ ಶಾಲೆಗಳನ್ನು ಕಾಲೇಜುಗಳನ್ನು ಸ್ಥಾಪಿಸಿದನು 1877 ಅಲೀಘರ್‌ನಲ್ಲಿ ಆಂಗ್ಲೋ ಓರಿಯಂಟಲ್ ಕಾಲೇಜನ್ನು ಪ್ರಾರಂಭಿಸಿದನು. ಮುಂದೇ ಅದೇ ಅಲಿಘರ್ ಮುಸ್ಲಿಂ ವಿಶ್ವವಿದ್ಯಾನಿಲಯವಾಯ್ತು. ಇಂಗ್ಲೀಷ್ ಶಿಕ್ಷಣಕ್ಕೆ ಒತ್ತು ಕೊಟ್ಟನು. ಇವನು ಒಬ್ಬ ಪತ್ರಿಕೋದ್ಯಮಿ. ರಿಫಾರ್ಮ್ ಮಾರಲ್ ಎಂಬ ಪತ್ರಿಕೆ ಸ್ಥಾಪಿಸಿದನು. ಉರ್ದು ಭಾಷೆಯಲ್ಲಿ ಗದ್ಯಗಳನ್ನು ಬರೆದನು. ಮಹಮ್ಮಡನ್ ಶಿಕ್ಷಣ ಸಮ್ಮೇಳನ ನಡೆಸಿದನು.

ಈ ಚಳುವಳಿಯು ಶೈಕ್ಷಣಿಕ, ಸಾಮಾಜಿಕ ಮತ್ತು ಆರ್ಥಿಕ ಪ್ರಗತಿಗೆ ಕಾರಣವಾಯಿತು. ಇದು ರಾಷ್ಟ್ರೀಯತೆಗೆ ವಿರುದ್ಧವಿತ್ತು ಇದರ ಕಾರಣದಿಂದ ಹಿಂದೂಗಳಲ್ಲಿ ಬದಲಾವಣೆ ಪಡೆಯಲು ಕಾರಣವಾಯ್ತು.

ಹೀಗೆ ಹಿಂದೂ ಸಮಾಜೋ ಧಾರ್ಮಿಕ ಚಲುವಳಿಗಳು ಭಾರತದ ರಾಷ್ಟ್ರೀಯತೆಯ ಬೆಳವಣಿಗೆಗೆ ಕಾರಣರಾದರು, ರಾಷ್ಟ್ರೀಯತೆ, ದೇಶಭಕ್ತಿ ಮುಂತಾದವುಗಳನ್ನು ತಿಳಿಯಲು ಕಾರಣವಾಯ್ತು ರಾಷ್ಟ್ರೀಯ ಏಕತೆಗೆ ಇವರೆಲ್ಲರೂ ಕಾರಣಕರ್ತರಾದರು. ರಾಷ್ಟ್ರೀಯ ಜಾಗೃತಿಯಲ್ಲಿ ಇವರ ಕೊಡುಗೆ ಅಪಾರವಾಗಿದೆ.

## 7.6 ಘಟಕದ ಸಾರಾಂಶ

ಈ ಘಟಕ 7ರ ಅಧ್ಯಯನದ ನಂತರ ನಾವು ಕೆಳಗೆ ತಿಳಿಸಿದ ವಿಷಯಗಳನ್ನು ಅರಿತುಕೊಂಡೆವು.

- ಭಾರತದಲ್ಲಿ ಸಮಾಜೋ ಧಾರ್ಮಿಕ ಚಳುವಳಿಯನ್ನು ಪ್ರಾರಂಭಿಸಿದ್ದು.
- ರಾಮಕೃಷ್ಣ ಮಿಷನ್ ಸ್ಥಾಪನೆ, ಸ್ವಾಮಿ ವಿವೇಕಾನಂದರ ಪಾತ್ರ
- ಥಿಯೋಸಾಫಿಕಲ್ ಸೊಸೈಟಿ ಸ್ಥಾಪನೆ ಆನಿಬೇಸೆಂಟ್ ಮತ್ತು ಈ ಸಮಾಜವು ಭಾರತೀಯರಲ್ಲಿ ಜಾಗೃತಿಯನ್ನು ಮೂಡಿಸಿದ್ದು.
- ಅಲೀಘರ್ ಚಳುವಳಿ ಮತ್ತು ಸರ್ ಸೈಯದ್ ಅಹಮದ್‌ಖಾನ್ ಪಾತ್ರ
- ಈ ಎಲ್ಲಾ ಚಳುವಳಿಗಳು ರಾಷ್ಟ್ರೀಯತೆ ಮತ್ತು ದೇಶಭಕ್ತಿಯನ್ನು ಮೂಡಿಸಿ, ರಾಷ್ಟ್ರೀಯ ಚಳುವಳಿಗೆ ಇವರೆಲ್ಲರೂ ನೆರವಾಗುವಂತೆ ಮಾಡಿದ ವಿಷಯಗಳನ್ನು ತಿಳಿದುಕೊಂಡೆವು.

## 7.7 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ರಾಮಕೃಷ್ಣ ಮಿಷನ್ ಭಾರತದಲ್ಲಿ ನಡೆಸಿದ ಚಳುವಳಿಯನ್ನು ಕುರಿತು ವಿವರಿಸಿ
2. ಥಿಯೋಸಾಫಿಕಲ್ ಸೊಸೈಟಿ ಭಾರತದಲ್ಲಿ ಮಾಡಿದ ಸೇವೆಯನ್ನು ಚಿತ್ರಿಸಿ
3. ಅಲೀಘರ್ ಚಳುವಳಿಯನ್ನು ಕುರಿತು ಟಿಪ್ಪಣಿ ಬರೆಯಿರಿ.
4. ಕೆಳಗಿನ ವಿಷಯಗಳಿಗೆ ಟಿಪ್ಪಣಿ ಬರೆಯಿರಿ.
   ಅ) ರಾಮಕೃಷ್ಣ ಪರಮಹಂಸ
   ಆ) ಸ್ವಾಮಿ ವಿವೇಕಾನಂದ
   ಇ) ಆನಿಬೇಸೆಂಟ್
   ಈ) ಸರ್ ಸೈಯದ್ ಅಹಮದ್‌ಖಾನ್

## 7.8 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು

1. Sharma L.P : History of Modern India
2. Venkatesan.G : History of Freedom struggle in India
3. Tarachand : Vol-2 History of the Freedom Movement in India

ಡಾ. ಎ.ಸೋಮಶೇಖರ್

## ಘಟಕ : 8

# ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆ ಹಾಗೂ ಬೆಳವಣಿಗೆ

## 8.0 ಉದ್ದೇಶಗಳು

ಪ್ರಿಯ ವಿದ್ಯಾರ್ಥಿ ಘಟಕ 8ರಲ್ಲಿ ನೀವು ಕಾಂಗ್ರೆಸ್ ಪಕ್ಷದ ಸ್ಥಾಪನೆಗಿಂತ ಮೊದಲು ಭಾರತದಲ್ಲಿ ಯಾವರೀತಿಯ ಪರಿಸ್ಥಿತಿಗಳಿದ್ದವು ಅದರಲ್ಲೂ ರಾಜಕೀಯ ಸ್ಥಿತಿ ಹೇಗಿತ್ತು ಎಂಬುದನ್ನೂ, ಭಾರತದಲ್ಲಿ ಕಾಂಗ್ರೆಸ್ ಹೇಗೆ ಯಾರಿಂದ ಸ್ಥಾಪಿತವಾಗಿ ಅದು ಭಾರತೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಹೇಗೆ ಕಾರ್ಯನಿರ್ವಹಿಸಿತು ಎಂಬುದರ ಸವಿಸ್ತಾರ ವಿಷಯವನ್ನು ತಿಳಿಯುವಿರಿ.

## 8.1 ಪ್ರಸ್ತಾವನೆ

ಹತ್ತೊಂಬತ್ತನೆಯ ಶತಮಾನದ ಉತ್ತಾರಾರ್ಧದಲ್ಲಿ ರಾಷ್ಟ್ರೀಯವಾದ ರಾಜಕೀಯ ಪ್ರಜ್ಞೆ ಅರಳಿತು. ಒಂದು ವ್ಯವಸ್ಥಿತವಾದ ರಾಷ್ಟ್ರೀಯ ಚಳುವಳಿಯ ಸ್ಥಾಪನೆ ಹಾಗೂ ಬೆಳವಣಿಗೆ ಕಂಡುಬಂದದ್ದು ಆಗಲೇ. ಆಧುನಿಕ ಭಾರತದ ವಿದ್ಯಾವಂತ ವರ್ಗದ ಜನರು ದೇಶದಲ್ಲಿ ರಾಜಕೀಯ ಶಿಕ್ಷಣವನ್ನು ಹರಡಲು ಹಾಗೂ ರಾಜಕೀಯ ಚಟುವಟಿಕೆಯನ್ನು ಪ್ರಾರಂಭಿಸಲು ರಾಜಕೀಯ ಸಂಸ್ಥೆಗಳನ್ನು ಸ್ಥಾಪಿಸಿದರು. ಈ ಕೆಲಸಕ್ಕೆ ಹೊಸ ರಾಜಕೀಯ ವಿಚಾರಗಳು, ವಾಸ್ತವತೆಯ ಬುದ್ಧಿಪೂರ್ವಕ ಅರಿವು, ನೂತನ ಸಾಮಾಜಿಕ ಮತ್ತು ರಾಜಕೀಯ ಧ್ಯೇಯಗಳು, ಹೋರಾಟ ಮತ್ತು ಪ್ರತಿಭಟನೆಗೆ ನೂತನ ಶಕ್ತಿ ಸಾಮರ್ಥ್ಯಗಳು, ರಾಜಕೀಯ ವ್ಯವಸ್ಥೆಯ ನೂತನ ತಂತ್ರ, ಇತ್ಯಾದಿ ಅಂಶಗಳು ಆಧಾರವಾಗಲಿದ್ದುವು. ಆದರ್ಶ, ನೀತಿ, ಸಂಘಟನೆ ಮತ್ತು ನಾಯಕತ್ವಗಳಲ್ಲಿ ಒಂದು ತಿರುವನ್ನೇ ಅದು ತೋರಿಸಲಿತ್ತು. ಕೆಲಸವೇನೋ ಬಹಳ ಕಷ್ಟದ್ದು. ಏಕೆಂದರೆ ಭಾರತೀಯರಿಗೆ ಆಧುನಿಕ ರಾಜಕೀಯ ಚಟುವಟಿಕೆಗಳು ಸಂಪೂರ್ಣವಾಗಿ ಅವಲಂಭಿತವಾಗಿದ್ದುವು. ಜನರು ತಮ್ಮ ಆಳುಗರಿಗೆದುರಾಗಿ ರಾಜಕೀಯವಾಗಿ ಸಂಘಟಿತರಾಗಬಹುದು ಎಂಬ ಕಲ್ಪನೆಯೇ ನೂತನವಾಗಿತ್ತು. ಆದ್ದರಿಂದ ಈ ಮೊದಲಿವ ಸಂಸ್ಥೆಗಳ ಮತ್ತು ರಾಜಕೀಯ ಕಾರ್ಯಕರ್ತರ ಕಾರ್ಯಚಟುವಟಿಕೆಗಳು ಬಹುಮಂದಗತಿಯಿಂದ ಸಾಗಿದುವು. ಸಾಮಾನ್ಯ ಜನರನ್ನು ಆಧುನಿಕ ರಾಜಕೀಯದ ಪ್ರಭಾವದೊಳಕ್ಕೆ ತರಲು ಅರ್ಧಶತಮಾನಕ್ಕಿಂತಲೂ ಹೆಚ್ಚು ಕಾಲವೇ ಬೇಕಾಯಿತು.

ರಾಜಕೀಯ ಸುಧಾರಣೆಗಳಿಗಾಗಿ ಚಳುವಳಿಯನ್ನು ಪ್ರಾರಂಭಿಸಿದ ಮೊದಲ ಭಾರತೀಯ ನಾಯಕರಲ್ಲಿ ರಾಜರಾಮಮೋಹನ ರಾಯ್ ಒಬ್ಬರು. ಪತ್ರಿಕಾ ಸ್ವಾತಂತ್ರ್ಯ, ನ್ಯಾಯದರ್ಶಿ ಮಂಡಲಿಯಿಂದ ವಿಚಾರಣೆ, ಕಾರ್ಯಾಂಗ ಮತ್ತು ನ್ಯಾಯಾಂಗಗಳ ಬೇರ್ಪಡಿಕೆ, ಉನ್ನತ ಅಧಿಕಾರಿಗಳಿಗೆ ಭಾರತೀಯರ ನೇಮಕ, ಜಮೀನ್ದಾರರ ದಬ್ಬಾಳಿಕೆಯಿಂದ ಕೈತನ ರಕ್ಷಣೆ - ಭಾರತೀಯ ವಾಣಿಜ್ಯ ಮತ್ತು ಕೈಗಾರಿಕೆಗಳ ಅಭಿವೃದ್ಧಿ - ಇವುಗಳಿಗಾಗಿ ಅವರು ಹೋರಾಡಿದರು. ಬ್ರಿಟಿಷ್ ಆಳ್ವಿಕೆಯ ಸಮಯ ಮುಗಿದು ಸ್ವತಂತ್ರ ಭಾರತವು ಉದಯವಾಗುತ್ತದೆ ಎಂಬ ಆಸೆಯ ಆಧಾರದ ಮೇಲೆಯೇ ತಮ್ಮ ಸಮಸ್ತ ಚಟುವಟಿಕೆಗಳನ್ನು ನೆಲೆಗೊಳಿಸಿದರು. ಅವರು ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ತೀವ್ರವಾದ ಆಸಕ್ತಿವಹಿಸಿದರು. ಎಲ್ಲೆಲ್ಲೂ ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಮತ್ತು ರಾಷ್ಟ್ರೀಯತೆಗಳನ್ನೇ ಬೆಂಬಲಿಸಿದರು.

ರಾಮ ಮೋಹನ್‌ರ ಪರಂಪರೆಯನ್ನು ಅವರ ಮರಣಾನಂತರ ದರೋಜಿಯನ್ನರು ಎಂಬ ತೀವ್ರಗಾಮಿಗಳಾದ ಯುವಕರು ಮುಂದುವರಿಸಿದರು. ಅವರಿಗೆ ಆ ಹೆಸರು ಬಂದದ್ದು ಅವರ ಪ್ರಸಿದ್ಧ ಆಂಗ್ಲೋ- ಇಂಡಿಯನ್ ಉಪಧ್ಯಾಯ ಹೆನ್ರಿವಿನಿಯನ್ ಡೆರೋಜಿಯೋನಿಂದ. ಅವನು ತನ್ನ ಶಿಷ್ಯರಲ್ಲಿ, ಫ್ರಾನ್ಸಿನ ಮಹಾಕ್ರಾಂತಿ, ಟಾಮ್ ಪೇಯ್ನ್ ಮತ್ತು ಜೆರ್ರಿ ಬೆಂಥಾಮ್‌ರ ಭಾವನೆಗಳಿಂದ ಆಧಾರಗೊಂಡ ಸ್ವಾತಂತ್ರ್ಯ ಮತ್ತು ರಾಷ್ಟ್ರ ಭಕ್ತಿಗಳ ಉಜ್ವಲವಾದ ಪ್ರೇಮವನ್ನುಪ್ರಚೋದಿಸಿದನು. ಆಧುನಿಕ ಭಾವನೆಗಳನ್ನೂ ಭಾರತಕ್ಕೆ ಅವುಗಳ ಅನ್ವಯವನ್ನು ಚರ್ಚಿಸಲು ಅಸಂಖ್ಯಾತವಾದ ಸಾರ್ವಜನಿಕ ಸಂಸ್ಥೆಗಳನ್ನು, ಈ ವಿಚಾರಗಳನ್ನು ಪ್ರಸಾರ ಮಾಡಲು ಅನೇಕ ವರ್ತಮಾನ ಪತ್ರಿಕಗಳು ಮತ್ತು ನಿಯತಕಾಲಿಕಗಳನ್ನು ಡೆರೋಜಿಯನ್ನರು ಪ್ರಾರಂಭಿಸಿದರು. ಹೀಗೆ ಆಧುನಿಕ ರಾಜಕೀಯ ಪ್ರಜ್ಞೆಯ ಬೀಜವನ್ನು ರಾಜರಾಮಮೋಹನ್ ರಾಯ್ ಮತ್ತು ಡೆರೋಜಿಯನ್ನರು 1820 ಮತ್ತು 1830ರ ಸುಮಾರಿನಲ್ಲಿ ಬಿತ್ತಿದರು.

## 8.2 ಕಾಂಗ್ರೆಸ್ ಪೂರ್ವ ಭಾರತದ ರಾಜಕೀಯ ಸಂಸ್ಥೆಗಳು

ಭಾರತದಲ್ಲಿ ಪ್ರಾರಂಭಿಸಿದ ಮೊದಲನೆಯ ರಾಜಕೀಯ ಸಂಸ್ಥೆ 1837ರಲ್ಲಿ ಸ್ಥಾಪಿತವಾದ ಜಮೀನ್ದಾರರ ಸಂಘ. ಆದರೆ ಅದನ್ನು ಪ್ರಾರಂಭಿಸಿದ್ದು ಬಂಗಾಳ. ಬಿಹಾರ ಮತ್ತು ಒರಿಸ್ಸಾಗಳ ಜಮೀನ್ದಾರರ ವರ್ಗ ಹಿತಾಸಕ್ತಿಗಳ ರಕ್ಷಣೆ ಎಂಬ ಕಿರಿದಾದ

ಉದ್ದೇಶದಿಂದ. 1843ರಲ್ಲಿ "ಬಂಗಾಳ ಬ್ರಿಟಿಷ್ ಇಂಡಿಯನ್ ಸೊಸೈಟಿ"ಯು ಇನ್ನೂ ವ್ಯಾಪಕವಾದ ಉದ್ದೇಶಗಳಾದ ವ್ಯವಸ್ಥೆಗೊಂಡಿತು. 1851ರಲ್ಲಿ ಎರಡೂ ಸಂಸ್ಥೆಗಳು ಒಂದುಗೂಡಿ "ಬ್ರಿಟಿಷ್ ಇಂಡಿಯಾ ಅಸೋಸಿಯೇಷನ್" ರೂಪುಗೊಂಡಿತು. ಅದೇ ಕಾಲಕ್ಕೆ 1852ರಲ್ಲಿ "ಮದರಾಸ್ ನೇಟಿವ್ ಅಸೋಸಿಯೇಷನ್" ಮತ್ತು ಬೊಂಬಾಯಿ ಅಸೋಸಿಯೇಷನ್"ಗಳು ಸ್ಥಾಪಿತವಾದವು. ಅಂಥವೇ ಸಂಘಗಳು, ಕೂಟಗಳು ರಾಷ್ಟ್ರದ್ಯಾಂತ ಸಣ್ಣಪುಟ್ಟ ನಗರಗಳಲ್ಲೂ ರಚಿತವಾದವು. ಹೆಚ್ಚು ಕಡಿಮೆ ಅವೆಲ್ಲವುಗಳಲ್ಲಿ ಪ್ರಧಾನಕರಾಗಿದ್ದವರು ಶ್ರೀಮಂತವಣಿಕ ಅಥವಾ ಜಮೀನ್ದಾರಿ ವರ್ಗದ ಜನ, ಹಾಗಾಗಿ ಆ ಸಂಸ್ಥೆಗಳು ಲಕ್ಷಣದಲ್ಲಿ ಸ್ಥಳೀಯವಾಗಿದ್ದವು. ಅವರು ರಾಜಕೀಯ ಮತ್ತು ಆರ್ಥಿಕ ಬೇಡಿಕೆಗಳನ್ನು ಬ್ರಿಟಿಷ್ ಪಾರ್ಲಿಮೆಂಟಿನರು ಮಂಡಿಸುತ್ತಿದ್ದರು ಮತ್ತು ಮುಖ್ಯವಾಗಿ ಆಡಳಿತ ಸುಧಾರಣೆಗಳಿಗಾಗಿ, ಆಡಳಿತಾಧಿಕಾರಿಗಳಲ್ಲಿ ಭಾರತೀಯರನ್ನೇ ಹೆಚ್ಚು ಹೆಚ್ಚಾಗಿ ನೇಮಿಸಿಕೊಳ್ಳಲಿಕ್ಕಾಗಿ, ಶಿಕ್ಷಣದ ಪ್ರಸಾರಕ್ಕಾಗಿ, ಸರಕಾರದಲ್ಲಿ ಭಾರತೀಯರನ್ನು ಜೊತೆಗೂಡಿಸಿಕೊಳ್ಳುವುದಕ್ಕಾಗಿ ಮತ್ತು ಭಾರತೀಯ ವಾಣಿಜ್ಯ ಮತ್ತು ಕೈಗಾರಿಕೆಗಳ ಅಭಿವೃದ್ಧಿಗಾಗಿ ಕೆಲಸಮಾಡುತ್ತಿದ್ದರು.

1857 ಕ್ರಾಂತಿಯು ವಿಫಲವಾದದ್ದರಿಂದ ಒಂದು ವಿಷಯ ಸ್ಪಷ್ಟವಾಯಿತು. ಬೇರೂರಿದ್ದ ಮೇಲುವರ್ಗಗಳಾದ ಜಮೀನ್ದಾರರು, ರಾಜರು ಮತ್ತು ಭೂಮಾಲೀಕರ ನೇತೃತ್ವದಲ್ಲಿ ಬ್ರಿಟಿಷ್ ಆಳ್ವಿಕೆಯ ವಿರುದ್ಧವಾಗಿ ನಡೆಯುತ್ತಿದ್ದ ಸಾಂಪ್ರಾದಾಯಿಕ ರೀತಿಯ ರಾಜಕೀಯ ಪ್ರತಿಭಟನೆ ಯಶಸ್ವಿಯಾಗಲಾರದು, ವಸಾಹತುಶಾಹಿಗೆದುರಾದ ಆ ಪ್ರತಿಭಟನೆ ನೂತನವಾದ ಕಾಲುವೆಗಳಲ್ಲಿ ಹರಿಯಬೇಕು - ಎಂಬುದೇ ಅದು. ಇದು ಒಂದು ಕಡೆಯಾದರೆ, ಇನ್ನೊಂದು ಕಡೆ ನಾವು ಮೊದಲು ನೋಡಿರುವಂತೆ, ಬ್ರಿಟಿಷ್ ಆಳ್ವಿಕೆ ಮತ್ತು ನೀತಿಗಳ ಲಕ್ಷಣ 1858ರ ನತರ ಪ್ರಧಾನವಾದ ಒಂದು ಪರಿವರ್ತನೆಯನ್ನು ಕಂಡಿತು. ಅದು ಹೆಚ್ಚು ಹೆಚ್ಚಾಗಿ ಪ್ರಗತಿ ವಿರೋಧಿಯಾಯಿತು. ಭಾರತದ ವಿದ್ಯಾವಂತ ವರ್ಗವು ಕ್ರಮೇಣ, ಆದರೆ ಹೆಚ್ಚು ಹೆಚ್ಚಾಗಿ ಬ್ರಿಟಿಷ್ ನೀತಿಗಳನ್ನು ಟೀಕಿಸತೊಡಗಿತು, ಬ್ರಿಟಿಷ್ ಆಳ್ವಿಕೆಯ ಸುಲಿಗೆಯ ಸ್ವರೂಪವನ್ನು ಗ್ರಹಿಸತೊಡಗಿತು. ವಸಾಹತುಶಾಹಿಗೆ ವಿರುದ್ಧವಾಗಿ ಆಧುನಿಕ ಸುಶಿಕ್ಷಿತ ವರ್ಗವು ತೋರಿಸಿದ ಪ್ರತಿಕ್ರಿಯೆ. ಕೃಷಿವರ್ಗವು ಸಹಜ ಪ್ರವೃತ್ತಿಯಿಂದ ತೋರಿಸಿದ ಪ್ರತಿಕ್ರಿಯೆಯಂತಲ್ಲದೆ, ಶಂಕೆಯಿಂದ ಕೂಡಿದುದಾಗಿತ್ತು. ಅದರ ಕಾದಾಟ ಸ್ವಭಾವ ಮೃದುವಾಗಿತ್ತು, ಅಷ್ಟು ವೈಜ್ಞಾನಿಕವೂ ಆಗಿರಲಿಲ್ಲ. ಭಾರತೀಯ ಬುದ್ಧಿ ಜೀವಿವರ್ಗದ ಅರಿವು ಬೆಳೆಯುವುದಕ್ಕೆ ಬಹಳ ಕಾಲ ಹಿಡಿಯಿತು. ಆದರೆ ಒಮ್ಮೆ ಅರಿಯುವಿಕೆಯ ಪ್ರಕ್ರಿಯೆ ಪ್ರಾರಂಭವಾದ ಮೇಲೆ, ಅದು ಆಧುನಿಕ ಚಿಂತನೆಯ ಆಧಾರದ ಮೇಲೆ ನಿಂತಿದ್ದುದರಿಂದಾಗಿ, ಸಾಮ್ರಾಜ್ಯಶಾಹಿಯ ನಿಜಸ್ವರೂಪದೊಳಕ್ಕೆ ಆಳವಾಗಿ ಇಳಿದು ಅರ್ಥಮಾಡಿಕೊಂಡಿತು, ಕೊನೆಗೆ ಆಧುನಿಕ ರಾಜಕೀಯ ಚಟುವಟಿಕೆಯಾಗಿ ಪರಿವರ್ತನೆಗೊಂಡಿತು.

ರಾಜಕೀಯ ಪ್ರಜ್ಞೆಯಿದ್ದ ಭಾರತೀಯರಿಗೆ, ಆಗ ಇದ್ದ ರಾಜಕೀಯ ಸಂಸ್ಥೆಗಳು ಬದಲಾದ ಪರಿಸ್ಥಿತಿಗಳಲ್ಲಿ ಸಹಾಯವಾಗುವುದಕ್ಕೆ ಸಾಧ್ಯವಿಲ್ಲದಷ್ಟು ಮಟ್ಟಿಗೆ ಸಂಕುಚಿತವಾಗಿ ಕಲ್ಪಿತವಾಗಿವೆ ಎಂಬ ವಿಷಯ ಮನವರಿಕೆಯಾಯಿತು. ಉದಾಹರಣೆಗೆ, ಬ್ರಿಟಿಷ್ ಇಂಡಿಯಾ ಅಸೋಷಿಯೇಷನ್ ಸಂಘವು ಹೆಚ್ಚಾಗಿ ಜಮೀನ್ದಾರರ ಆಸಕ್ತಿಗಳನ್ನು ಇಟ್ಟುಕೊಂಡು, ಪರಿಣಾಮವಾಗಿ ಆಳುಗಶಕ್ತಿಯೊಂದಿಗೆ ತನ್ನನ್ನು ಸಮೀಕರಿಸಿಕೊಂಡಿತ್ತು. ಆದರೆ ನೂತನ ರಾಜಕೀಯವು ಅಧಿಕಾಧಿಕವಾಗಿ ಬ್ರಿಟಿಷ್ ಆಳ್ವಿಕೆಯ ವಿಮರ್ಶಕ ಮನೋಭಾವದ ಆಧಾರದ ಮೇಲೆ ನಿಲ್ಲಬೇಕಾಗಿತ್ತು. ಆದ್ದರಿಂದ ಅವರು ಹೊಸ ಮಾದರಿಯ ರಾಷ್ಟ್ರೀಯತಾ ರಾಜಕೀಯ ವ್ಯವಸ್ಥೆಯ ಕಡೆಗೆ ತಡವರಿಸುತ್ತಾ ನಡೆದರು.

1866ರಲ್ಲಿ ದಾದಾಬಾಯಿ ನವರೋಜಿ ಅವರು ಲಂಡನ್ನಿನಲ್ಲಿ "ಈಸ್ಟ್ ಇಂಡಿಯಾ ಅಸೋಸಿಯೇಷನ್" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಭಾರತೀಯರಿಗೆ ಸಂಬಂದಿಸಿದ ಪ್ರಶ್ನೆಗಳನ್ನು ಚರ್ಚಿಸಿ ಬ್ರಿಟಿಷ್ ಸಾರ್ವಜನಿಕಾಭಿಪ್ರಾಯದ ಮೇಲೆ ಪ್ರಾಭವ ಬೀರುವುದು ಅದರ ಉದ್ದೇಶ. ಆ ಸಂಸ್ಥೆಯ ಶಾಖೆಗಳನ್ನು ಭಾರತದ ಪ್ರಮುಖ ನಗರಗಳಲ್ಲಿ ತೆರೆಯಲಾಯಿತು. ಶೀಘ್ರದಲ್ಲಿಯೇ ದಾದಾಬಾಯಿ ನವರೋಜಿ ತಮ್ಮ ಸಮಕಾಲೀನರಿಗೂ ಭಾರತೀಯರ ಮುಂದಿನ ಪೀಳಿಗೆಗಳಿಗೂ " ಭಾರತದ ಮಹಾಪುರುಷ" ಎಂದು ಪ್ರಸಿದ್ಧರಾಗಲಿದ್ದರು.

ಜಸ್ಟಿಸ್‌ರಾನಡೆ, ಗಣೇಶ ವಾಸುದೇವ ಜ್ಯೋತಿ, ಎಸ್.ಎಚ್.ಚಿಪ್ಲುಣಕರ್ ಮತ್ತು ಇತರರು 1870ರಲ್ಲಿ "ಪೂನಾ ಸಾರ್ವಜನಿಕ ಸಭೆ"ಯನ್ನು ರೂಪಿಸಿದರು. ಮುಂದಿನ ವರ್ಷಗಳ ಕಾಲ ಸಕ್ರಿಯವಾಗಿ ರಾಜಕೀಯ ಶಿಕ್ಷಣವನ್ನು ಸಭೆ ನಿರ್ವಹಿಸಿತು.

1876ರಿಂದ 1880 ರವರೆಗೆ ನಡೆದ ಲಿಟ್ಟನನ ವೈಸರಾಯಿ ಅಧಿಕಾರಾವಧಿಯಲ್ಲಿ ಸ್ಪಷ್ಟವಾಗಿಯೇ ಜಾರಿಗೆ ತಂದ ಪ್ರಗತಿ ವಿರೋಧಿ ಮತ್ತು ಭಾರತ ವಿರೋಧಿ ಕ್ರಮಗಳ ಭಾರತ ರಾಷ್ಟ್ರೀಯತಾ ಚಟುವಟಿಕೆಯ ಮಂದಗತಿಯನ್ನು ಚುರುಕುಗೊಳಿಸಿದವು.

ಭಾರತೀಯ ಒಟ್ಟು ಕೈಗಾರಿಕೆ ಉದ್ಯೋಮ್ಮ ಖವಾಗುತ್ತಿರುವುದನ್ನು ಸಹಿಸದ ಲ್ಯಂಕಾಷೈರ್ ತಯಾರಿಕೆಗಾರರ ಮಾತ್ಸರ್ಯವನ್ನು ತೃಪ್ತಿಪಡಿಸುವುದಕ್ಕಾಗಿ ಬ್ರಿಟಿಷ್ ಬಟ್ಟೆಗಳ ಮೇಲೆ ಆಮದು ಸುಂಕವನ್ನು ತೆಗೆದು ಹಾಕಿದ್ದು. ಆಫ್ಘಾನಿಸ್ತಾನಕ್ಕೆ ಎದುರಾಗಿ ಅಕ್ರಮಣಕಾರೀ ಹಾಗೂ ವಿಸ್ತರಣಾ ಧ್ಯೇಯದ ಯುದ್ಧ ನಡೆಸಿ ಅದರ ವೆಚ್ಚವನ್ನು ದೇಶದ ಬೊಕ್ಕಸಕ್ಕೆ ಹೇರಿದ್ದು, ಆಯುಧಗಳ ಕಾಯಿದೆಯನ್ನು ಜಾರಿಗೆ ತಂದು ಭಾರತೀಯ ಜನರು ಯಾವುದೇ ಬಗೆಯ ಪ್ರತಿಭಟನೆ ತೋರಿಸುವುದಿಂಲ್ಲಿ, ಆತ್ಮ ರಕ್ಷಣೆ ಮಾಡಿಕೊಳ್ಳಲು ಕಲಿಯುವುದೂ ಅಸಾಧ್ಯವನ್ನಾಗಿ ಮಾಡಿದ್ದು ದೇಶಭಾಷಾ ವೃತ್ತ ಪತ್ರಿಕಗಳ ಶಾಸನಗಳ ಶಾಸನವನ್ನು ತಂದು, ಬ್ರಿಟಿಷ್ ಆಳ್ವಿಕೆಯು ಹೆಚ್ಚು ಹೆಚ್ಚಾಗಿ ವಿವರ್ಶೆಗೊಳಗಾಗುತ್ತಿರುವುದನ್ನು ತಡೆದದ್ದು, ಲಕ್ಷಾಂತರ ಜನರು ಕ್ಷಾಮಕ್ಕೆ ತುತ್ತಾಗಿ ಸಾಯುತ್ತಿದ್ದಾಗ, ದೆಹಲಿಯಲ್ಲಿ ವೈಭವಪೂರ್ಣವಾಗಿ ಚಕ್ರವರ್ತಿಯ ದರ್ಬಾರು ಏರ್ಪಾಟು ಮಾಡಿದ್ದ, ಕೊನೆಯದಾಗಿ, ಇಂಡಿಯನ್ ಸಿವಿಲ್ ಸರ್ವೀಸ್ ಪರೀಕ್ಷೆಗೆ ಸ್ಪರ್ಧಿಸಲು ಗರಿಷ್ಠ ವಯೋಮಿತಿಯನ್ನು 21ರಿಂದ 19ಕ್ಕೆ ಇಳಿಸಿ, ಭಾರತೀಯರು ಸಿವಿಲ್ ಸರ್ವೀಸ್ ಪ್ರವೇಶಿಸಲು ಅವಕಾಶಗಳನ್ನು ಇನ್ನೂ ಕಡಿಮೆ ಮಾಡಿದ್ದು -ಈ ಕ್ರಮಗಳು ಬ್ರಿಟಿಷ್ ಆಳ್ವಿಕೆಯ ಸುಲಿಗೆ ಮತ್ತು ವಸಾಹತುಶಾಹಿ ಸ್ವರೂಪವನ್ನು ತೆರೆದು ತೋರಿಸಿದುವು. ಈ ಕ್ರಮಗಳ ವಿರುದ್ಧವಾಗಿ ದೇಶದ್ಯಾಂತ ಪ್ರತಿಭಟನೆಗಳನ್ನು ಪ್ರದರ್ಶಿಸಲಾಯಿತು. ಭಾರತದ ಕೈಗಾರಿಕೆಗಳನ್ನು ವಿದೇಶೀ ಆಕ್ರಮಣಕೋರರಿಂದ ರಕ್ಷಿಸುವ ಸಲುವಾಗಿ 1870ರ ಸುಮಾರಿನಲ್ಲಿ ಸ್ವದೇಶಿ ಸಿದ್ಧಾಂತವನ್ನು ಮೊದಲು ಭೋದಿಸಲಾಯಿತು.

ಭಾರತೀಯ ಯುವಕರಲ್ಲಿ ನೂತನ ರಾಜಕೀಯ ಮನೋಭಾವ ಮಾಡಲು ವ್ಯಕ್ತವಾದದ್ದು ಬಂಗಾಳದಲ್ಲಿ ಸಾಂಪ್ರದಾಯಿಕವೂ ಜಮೀನ್ದಾರರ ಪರವೂ ಆಗಿದ್ದ ಬ್ರಿಟಿಷ್ ಇಂಡಿಯಾ ಅಸೋಸಿಯೇಷನ್, ಹೊಸ ಮಧ್ಯಮ ವರ್ಗದ ಜನ ಮತ್ತು ವಿದ್ಯಾವಂತ ಜನರಿಗೆ ಹಿಡಿಸಲಿಲ್ಲ. ಏಕೆಂದರೆ ಅವರು ಈಗ ಜಮೀನ್ದಾರರೊಂದಿಗೆ ಸ್ಪರ್ಧಿಸುವುದರಲ್ಲಿ ತಾವೇ ಜನತಾ ನಾಯಕರು ಎಂದು ಘೋಷಿಸಿಕೊಂಡರು. ಭಾರತವನ್ನು ಎಂದೆಂದಿಗೂ ಬ್ರಿಟನ್ನು ಆಳಲೇಬೇಕು ಎಂಬ ಸಿದ್ಧಾಂತವನ್ನು ಒಪ್ಪಿಕೊಳ್ಳಲು ಅವರು ನಿರಾಕರಿಸಿದರು. ಆನಂದ ಮೋಹನ್ ಬೋಸ್ ಮತ್ತು ಸುರೇಂದ್ರ ನಾಥ್ ಬ್ಯಾನರ್ಜಿ ಇವರ ನೇತೃತ್ವದಲ್ಲಿ ಅವರು 1876 ಜುಲೈ ತಿಂಗಳಲ್ಲಿ "ಇಂಡಿಯನ್ ಅಸೋಸಿಯೇಷನ್" ಸ್ಥಾಪಿಸಿದರು. ಚಳುವಳಿಗಾಗಿ ಈ ಸಂಘವು ಕೈಗೆತ್ತಿಕೊಂಡ ಮೊದಲನೆಯ ವಿಚಾರವೆಂದರೆ ಸಿವಿಲ್ ಸರ್ವೀಸ್ ಪರೀಕ್ಷೇಗಳಲ್ಲಿ ಸುಧಾರಣೆ. ಸಂಘವು ಸುರೇಂದ್ರನಾಥ ಬ್ಯಾನರ್ಜಿಯವರನ್ನು ದೇಶದ ಬೇರೆ ಬೇರೆ ಭಾಗಗಳಾಗಿ ಚಳುವಳಿಗೆ ಬೆಂಬಲ ಕೋರಿ ಪ್ರಚಾರ ಮಾಡಲು ವಿಶೇಷ ರಾಯಭಾರಿಯಾಗಿ ಕಳುಹಿಸಿತು. ಬಹುಶಃ ಅಖಿಲ ಭಾರತ ಜನಪ್ರಿಯತೆಯನ್ನು ಗಳಿಸಿದ ಮೊತ್ತ ಮೊದಲನೆಯ ಭಾರತೀಯರೆಂದರೆ ಸುರೇಂದ್ರನಾಥ್ ಬ್ಯಾನರ್ಜಿ ಎಂದು ಕಾಣುತ್ತದೆ. ವಿಶಾಲವಾದ ರಾಜಕೀಯ ಚಳುವಳಿಯ ಪ್ರವಾಹದೊಳಕ್ಕೆ ಸಾಮಾನ್ಯ ಜನರನ್ನು ತರಲು ಇಂಡಿಯನ್ ಅಸೋಸ್‌ಯೇಷನ್ನಿನ ನಾಯಕರು , ಜಮೀದ್ದಾರರ ವಿರುದ್ಧ ಗೇಣಿದಾರರ ಹಕ್ಕು ಸ್ಥಾಪಿಸಲು, ವಿದೇಶೀ ಟೀ ಪ್ಲಾಂಟರರಿಗೆದುರಾಗಿ ಪ್ಲಾಂಟೇಷನ್ ಕೆಲಸಗಾರರ ಹಕ್ಕುಗಳನ್ನು ಸ್ಥಾಪಿಸಲು ಚಳುವಳಿಗಳನ್ನು ಹೂಡಿದರು. ಸಂಘವು ಬಂಗಾಳದ ಬೇರೆ ಬೇರೆ ನಗರಗಳಲ್ಲಿ ಗ್ರಾಮಗಳಲ್ಲಿ ಹಾಗೆಯೇ ಬಂಗಾಳದಿಂದ ಹೊರಗೆ ಅನೇಕ ಪಟ್ಟಣಗಳಲ್ಲಿ ಶಾಖೆಗಳನ್ನು ತೆರೆಯಿತು.

ಭಾರತದ ಇತರ ಭಾಗಗಳಲ್ಲಿಯೂ ಯುವಕ ಶಕ್ತಿಗಳು ಕಾರ್ಯತತ್ಪರವಾಗಿದ್ದುವು. 1884ರಲ್ಲಿ ಎಂ. ವೀರರಾಘವಾಚಾರಿ, ಜಿ. ಸುಬ್ರಹ್ಮಣ್ಯ ಅಯ್ಯರ್. ಆನಂದ ಚಾರ್ಲು ಮತ್ತಿತ್ತರರು " ಮದರಾಸ್ ಮಹಾಜನ ಸಭಾ" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಬೊಂಬಾಯಿಯಲ್ಲಿ ಫಿರೋಜ್ ಷಹಾ ಮೆಹ್ತಾ, ಕೆ.ಟಿ.ತೆಲಂಗ್ ಮತ್ತು ಇತರರು 1885ರಲ್ಲಿ "ಬೊಂಬಾಯಿ ಪ್ರೆಸಿಡೆನ್ಸಿ ಅಸೋಸಿಯೇಷನ್" ಸ್ಥಾಪಿಸಿದರು.

## 8.3 ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆ

ರಾಜಕೀಯ ಪ್ರಜ್ಞೆಯಿದ್ದ ಭಾರತೀಯರಿಗೆ ಹೆಚ್ಚು ಹೆಚ್ಚಾಗಿ ಅಖಿಲ ಭಾರತ ವ್ಯಾಪ್ತಿಯುಳ್ಳ ಸಂಸ್ಥೆಯೊಂದರ ಅಗತ್ಯ ಮನವರಿಕೆಯಾಯಿತು. ಇದು ವಿವಿಧ ಮನೋಭಾವಗಳ ಸಂಗಮಕ್ಕೆ ಸಮಾನವಾದ ಒಂದು ರಂಗವನ್ನು ನಿರ್ಮಿಸಿ ಕಾರ್ಯಚಟುವಟಿಕೆಗೆ ಒಂದು ಸಾಮಾನ್ಯ ಕಾರ್ಯಕ್ರಮವನ್ನು ರೂಪಿಸುವುದಕ್ಕೆ ಮಾತ್ರವಲ್ಲ, ವಿಶಾಲ ತಳಹದಿಯ ಸ್ವಾತಂತ್ರ್ಯ ಹೋರಾಟವನ್ನು ರೂಪಿಸಲು ಅಗತ್ಯವಾದ ಸಾರ್ವಜನಿಕ ಶಿಕ್ಷಣವನ್ನು ವ್ಯಾಪಕವಾಗಿ ಕೈಗೊಳ್ಳುವುದಕ್ಕೂ ಅಗತ್ಯವಾಗಿತ್ತು. ಅಂಥದೊಂದು ಸಂಸ್ಥೆಗೆ ಸೂಕ್ತವಾದ ಸಾಮಾಜಿಕ ತಳಹದಿ ಈಗ ಬಿದ್ದಿತ್ತು, ಸಾಕಷ್ಟು ಅನುಭವವೂ ಸಂಚಿತವಾಗಿತ್ತು, ರಾಷ್ಟ್ರದ ಅನೇಕ ಭಾಗಗಳಿಂದ ಅನೇಕ ಭಾರತೀಯರು ಪಶ್ಚಿಮ ಭಾರತದ ದಾದಾಬಾಯಿ ನವರೋಜಿ, ಜಸ್ಟಿಸ್ ರಾನಡೆ, ಫರೋಜ್ ಮಹಾಮೆಹತಾ, ಕೆ.ಟಿ. ತೆಲಂಗ್, ರಹಿಮುತುಲ್ಲಾ,

ಮಹಮ್ಮದ್ ಸಯಾನಿ, ಝುವೇರಿ ಲಾಲ್ ಉಮಶಂಕರ್ ಯಾಜ್ಞಿಕ್ ಮತ್ತು ಬದ್ರುದ್ದೀನ್ ತ್ಯಾಬ್ಜಿ, ದಕ್ಷಿಣ ಭಾರತದ ಜಿ.ಸುಬ್ರಮಣಿಯ ಅಯ್ಯರ್ , ಎಸ್.ಸುಬ್ರಮಣಿಯ ಅಯ್ಯರ್ ಮತ್ತು ಆನಂದಚಾರ್ಲು, ಪೂರ್ವಭಾರತದ ಡಬ್ಲ್ಯೂ.ಸಿ.ಬ್ಯಾನರ್ಜಿ, ಸುರೇಂದ್ರ ನಾಥ ಬ್ಯಾನರ್ಜಿ, ಆನಂತ ಮೋಹನ್ ಬೋಸ್, ಲಾಲ್ ಮೋಹನ್ ಘೋಷ್ ಮತ್ತು ಕಾಳೀ ಚರಣ ಬ್ಯಾನರ್ಜಿ - ಇವರೆಲ್ಲರೂ ಏಕಕಾಲಕ್ಕೆ ಅಖಿಲ ಭಾರತ ರಾಷ್ಟ್ರೀಯ ಸಂಸ್ಥೆಯೊಂದನ್ನು ರೂಪಿಸುವ ಆಲೋಚನೆ ಮಾಡತೊಡಗಿದ್ದರು. 1883ರ ಡಿಸೆಂಬರ್‌ನಲ್ಲಿ ಇಂಡಿಯನ್ ಅಸೋಸಿಯೇಷನ್ ಒಂದು ಅಖಿಲ ಭಾರತ ರಾಷ್ಟ್ರೀಯ ಸಮ್ಮೇಳನವನ್ನು ಸೂಚಿಸಿತ್ತು. ಆದರೆ ಪ್ರಯತ್ನವು ಅಷ್ಟಾಗಿ ಯಶಸ್ವಿಯಾಗಿರಲಿಲ್ಲ. ಈ ವಿಚಾರಕ್ಕೆ ರಾಷ್ಟ್ರೀಯವಾದೀ ರಾಜಕೀಯ ನಾಯಕರ ಬೊಂಬಾಯಿ ಗುಂಪು ಹೆಚ್ಚು ಖಚಿತವಾದ ರೂಪು ಕೊಟ್ಟಿತು. ಇಂಗ್ಲೀಷ್‌ನವನೂ ನಿವೃತ್ತ ಸಿವಿಲ್ ಅಧಿಕಾರಿಯೂ ಆಗಿದ್ದ ಎ.ಒ.ಹ್ಯೂಮ್(A.O.Hume) ಎಂಬುವನೊಂದಿಗೆ ಈ ಗುಂಪು ಸಹಕರಿಸಿ 1885ರ ಡಿಸೆಂಬರ್ ತಿಂಗಳ ಕೊನೆಯ ದಿನಗಳಲ್ಲಿ ಭಾರತದ ಬೇರೆ ಬೇರೆ ಭಾಗಗಳ ರಾಜಕೀಯ ನಾಯಕರನ್ನು ಬರಮಾಡಿ, ಒಟ್ಟು ಸೇರಿಸುವ ಪ್ರಯತ್ನ ಮಾಡಿದರು. ಈ ನಾಯಕರು "ಭಾರತ ರಾಷ್ಟ್ರೀಯ ಕಾಂಗ್ರೆಸ್(Indian National (ongress)ನ್ನು ಸ್ಥಾಪಿಸಬೇಕೆಂದೂ, ಮೊದಲಿಗೆ ಡಬ್ಲ್ಯೂ.ಸಿ. ಬ್ಯಾನರ್ಜಿಯವರು ಅದರ ಅಧ್ಯಕ್ಷರಾಗಿರಬೇಕೆಂದೂ ನಿರ್ಧರಿಸಿದರು.

ಕಾಂಗ್ರೆಸ್ಸಿನ ಸ್ಥಾಪನೆಯನ್ನು ಪ್ರೋತ್ಸಾಹಿಸಿದುದರಲ್ಲಿ ಹ್ಯೂಮನ ಮುಖ್ಯ ಉದ್ದೇಶ. ಸುಶಿಕ್ಷಿತ ಭಾರತೀಯರಲ್ಲಿ ಬೆಳೆಯುತ್ತಿದ್ದ ಅತೃಪ್ತಿಗೆ ಒಂದು ಬಿಡುಗಡೆಯನ್ನು ಒದಗಿಸುವುದು ಅಥವಾ ಅದಕ್ಕೆ ಒಂದು 'ರಕ್ಷಕ ಕವಾಟವನ್ನು' ನಿರ್ಮಿಸುವುದು ಎಂದು ಹೇಳಲಾಗಿದೆ.ಅತೃಪ್ತಿ ರಾಷ್ಟ್ರೀಯ ವಿದ್ಯಾವಂತ ವರ್ಗವು ಅತೃಪ್ತ ಕೃಷಿಕ ವರ್ಗದೊಂದಿಗೆ ಬೆರೆಯುವುದನ್ನು ನಿವಾರಿಸಲು ಅವನು ಅಪೇಕ್ಷಿಸಿದನು. ಮೃದುವಾದ ರಾಜಕೀಯ ಚಳುವಳಿಯನ್ನು ಪೋಷಿಸುವುದರ ಮೂಲಕ, ಅದು ಉಲ್ಬಣಗೊಂಡ ಹತೋಟಿ ಮೀರುವ ಸಾಧ್ಯತೆಯನ್ನು ತಪ್ಪಿಸಬಹುದೆಂದು ಆಶಿಸಿದನು. ಹ್ಯೂಮ್ ಮುಂದೆ ಹೀಗೆ ಬರೆಯಲ್ಲಿದ್ದನು. " ಚಳುವಳಿಗೆ ಮೂಲ ಪ್ರಚೋದನೆಯನ್ನು ಕೊಟ್ಟವರಿಗೆ ಬೇರೆ ದಾರಿಯೇ ಉಳಿದಿರಲಿಲ್ಲ. ಉದ್ದೇಶವು ತೀವ್ರವಾಗಿ ಉಲ್ಬಣಗೊಳ್ಳುತ್ತಿದ್ದ ಒತ್ತಡದೊಂದಿಗೆ ಕಾರ್ಯತತ್ಪರವಾಗಿತ್ತು. ಅದು ತನ್ನ ಫಲಗಳನ್ನು ಆಗಲೇ ಪ್ರಾರಂಭ ಮಾಡಿದ್ದಂತೆ, ಒಳಗೇ ಕೊರೆಯಲು ಬಿಡುವುದಕ್ಕೆ ಬದಲಾಗಿ ಸ್ಪಷ್ಟವಾದ ಸಾಂವಿಧಾನಿಕವಾದ ಮಾರ್ಗಗಳಲ್ಲಿ ಹರಿಯಲು ಬಿಡುವುದು ಅತ್ಯಂತ ಮುಖ್ಯವಾದ ವಿಚಾರವಾಗಿತ್ತು".

ಈ ವಿವರಣೆ ಸಾಲದು. ಅಷ್ಟು ಮಾತ್ರವಲ್ಲ, ಇದು ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆಗೆ ವಿವರಣೆ ಎಂಬ ತಪ್ಪು ಭಾವನೆಗೆಡೆಗೊಡುತ್ತದೆ. ಹೆಚ್ಚೆಂದರೆ ಇದು ಇಡೀ ಕತೆಯಲ್ಲಿ ಹ್ಯೂಮನ ಪಾತ್ರವಿತ್ತು ಎಂಬುದನ್ನು ಸ್ವಲ್ಪಮಟ್ಟಿ ವಿವರಿಸುತ್ತದೆ ಅಷ್ಟೇ. ಅಖಿಲಭಾರತ ರಾಜಕೀಯ ಸಂಘವೊಂದರ ನಿರ್ಮಾಣಕ್ಕಾಗಿ ಚಟುವಟಿಕೆಯಿಂದ ದುಡಿಯುತ್ತಿದ್ದ ಭಾರತೀಯರು ಬ್ರಿಟಿಷ್ ಆಸಕ್ತಿಗಳಿಗಾಗಿ ಭಾರತವನ್ನು ದೋಚುವ ನೀತಿಗೆ ಹೆಚ್ಚು ಹೆಚ್ಚು ವಿರೋಧಿಮನೋಭಾವ ಬೆಳೆಸಿಕೊಂಡ ನೂತನ ಸಾಮಾಜಿಕ ಶಕ್ತಿಗಳ ಪ್ರತಿನಿಧಿಗಳಾಗಿದ್ದರು. ಭಾರತದ ರಾಜಕೀಯ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಹೋರಾಡುವ ಒಂದು ಸಂಸ್ಥೆ ಅವರಿಗೆ ಅಗತ್ಯವಾಗಿತ್ತು. ಅವರು ಉನ್ನತಮಟ್ಟದ ಚಾರಿತ್ರ್ಯ ರಾಷ್ಟ್ರಭಕ್ತರಾಗಿದ್ದರು. ಯಾವುದೇ ರೀತಿಯಲ್ಲೂ ವಿದೇಶಿ ಸರಕಾರದ ಕೈಗೊಂಬೆಗಳಾಗಿರಲಿಲ್ಲ. ಅವರು ಹ್ಯೂಮನೊಂದಿಗೆ ಸಹಕರಿಸಿದ್ದಕ್ಕೆ ಕಾರಣ. ಮೊದಲ ಮೊದಲ ಪ್ರಯತ್ನಗಳಲ್ಲೇ ಅಧಿಕಾರಿಗಳ ವಿರೋಧವನ್ನು ಕಟ್ಟಿಕೊಳ್ಳಲು ಅವರು ಇಷ್ಟಪಡಲಿಲ್ಲವಾದದ್ದು, ಒಬ್ಬ ನಿವೃತ್ತ ಸಿವಿಲ್ ಅಧಿಕಾರಿಯು ಸಕ್ರೀಯವಾಗಿ ಭಾಗವಹಿಸುವುದರಿಂದಾಗಿ ಅಧಿಕಾರಿಗಳ ಅನುಮಾನ ತಿಳಿಯಾಗಬಹುದೆಂದು ಅವರು ಆಶಿಸಿದರು. ಹ್ಯೂಮನು ಕಾಂಗ್ರೆಸ್ಸನ್ನು ಒಂದು 'ರಕ್ಷಕ ಕವಾಟ' ವನ್ನಾಗಿ ಉಪಯೋಗಿಸಲು ಇಚ್ಛಿಸಿದ್ದರೆ. ಮೊದಮೊದಲ ಕಾಂಗ್ರೆಸ್ ನಾಯಕರು ಅವನನ್ನು ಒಂದು ' ವಿದ್ಯುದ್‌ವಾಹಕ' ದಂತೆ ಬಳಸಿಕೊಳ್ಳಬಹುದೆಂದು ಆಶಿಸಿದರು. ಮುಂದೆ 1913ರಲ್ಲಿ ಗೋಪಾಲ ಕೃಷ್ಣ ಗೋಖಲೆ ಹೀಗೆ ಸೂಚಿಸಿದರು.

ಯಾವನೇ ಭಾರತೀಯನು ಭಾರತ ರಾಷ್ಟ್ರೀಯ ಕಾಂಗ್ರೆಸ್ಸನ್ನು ಪ್ರಾರಂಭಿಸಿವುದು ಸಾಧ್ಯವಿರಲಿಲ್ಲ. ಒಂದು ವೇಳೆ ಯಾವನಾದರೂ ಭಾರತೀಯನು ಇಡೀ ಭಾರತವನ್ನು ವ್ಯಾಪಿಸಿಕೊಳ್ಳುವ ಅಂಥದೊಂದು ಚಳುವಳಿಯನ್ನು ಪ್ರಾರಂಭಿಸಲು ಮುಂದೆ ಬಂದಿದ್ದರೆ ಅಧಿಕಾರಿಗಳು, ಅದು ಅಸ್ತಿತ್ವಕ್ಕೆ ಬರಲು ಬಿಡುತ್ತಿರಲಿಲ್ಲ. ಕಾಂಗ್ರೆಸ್ಸಿನ ಸ್ಥಾಪಕನು ಒಬ್ಬ ಶ್ರೇಷ್ಠ ಇಂಗ್ಲೀಷ್ ಮನುಷ್ಯನೂ ಪ್ರಸಿದ್ಧನಾದ ಮಾಜೀ ಅಧಿಕಾರಿಯೂ ಆಗಿರದಿದ್ದರೆ, ಆ ಕಾಲದಲ್ಲಿ ರಾಜಕೀಯ ಚಟುವಟಿಕೆಗಳ ಬಗೆಗೆ ಎಷ್ಟರ ಮಟ್ಟಿನ ಅವಿಶ್ವಾಸವಿದ್ದಿತೆಂದರೆ, ಒಡನೆಯೇ ಅದನ್ನು ಅಡಗಿಸಿಲು ಒಂದಲ್ಲ ಒಂದು ದಾರಿಯನ್ನು ಕಂಡುಹಿಡಿಯುತ್ತಿದ್ದರು.

ಅದು ಹೇಗೇ ಇರಲಿ, 1885ರಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆಯಿಂದಾಗಿ, ಭಾರತದ ಸ್ವಾತಂತ್ರ್ಯಕ್ಕೆ ಹೋರಾಟವನ್ನು ಚಿಕ್ಕದಾದ, ಅಳುಕಿನಿಂದ ಕೂಡಿದ, ಅಬ್ಬರವಿಲ್ಲದ ಆದರೆ ಸುವ್ಯವಸ್ಥಿತವಾದ ರೀತಿಯಲ್ಲಿ ಪ್ರಾರಂಭಮಾಡಿದಂತಾಯಿತು. ವರ್ಷದಿಂದ ವರ್ಷಕ್ಕೆ ಅದು ಪ್ರಬಲವಾಗುತ್ತಾ ಕೊನೆಗೆ ಭಾರತದ ಜನರನ್ನು ವಿದೇಶೀ ಆಳ್ವಿಕೆಯ ವಿರುದ್ಧ ಬಲಿಷ್ಟವಾದ ಉಗ್ರವಾದ ಹೋರಾಟಗಳಲ್ಲಿ ತೊಡಗಿಸಲಿತ್ತು.

## 8.4 ಉಪಸಂಹಾರ

1885 ರಿಂದ 1905ರವರೆಗಿನ ವರ್ಷಗಳಲ್ಲಿ ರಾಷ್ಟ್ರೀಯತಾ ಪ್ರಜ್ಞೆಯನ್ನು ಹರಡಲು ಭಾರತ ರಾಷ್ಟ್ರೀಯ ಕಾಂಗ್ರೆಸ್ ಒಂದೇ ಏಕೈಕ ಅಥವಾ ಅತಿಮುಖ್ಯ ಮಾಧ್ಯಮವಾಯಿತು ಎಂದು ಭಾವಿಸುವುದು ತಪ್ಪಾಗುತ್ತದೆ. ಈ ಅವಧಿಯಲ್ಲಿ ರಾಷ್ಟ್ರೀಯತೆಯ ಅಭಿವೃದ್ಧಿ ಮತ್ತು ಅಭಿವ್ಯಕ್ತಿಗಳಿಗೆ ಇತರ ಅನೇಕ ಕಾಲುವೆಗಳೂ ಇದ್ದವು. ಸ್ಥಳೀಯ ಮತ್ತು ಪ್ರಾಂತೀಯವಾದ ಅಸಂಖ್ಯಾತ ರಾಜಕೀಯ ಸಂಘಸಂಸ್ಥೆಗಳು ದಿನದಿನವೂ ಪ್ರಾಂತೀಯ ಸಮ್ಮೇಳನವು ಜರಗುತ್ತಿದ್ದಿತು. ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಜನಸಾಮಾನ್ಯರು ಅದರಲ್ಲಿ ಭಾಗವಹಿಸುತ್ತಿದ್ದರು. ರಾಷ್ಟ್ರೀಯ ವರ್ತಮಾನ ಪತ್ರಿಕೆಗಳಲ್ಲಿ ಹೆಚ್ಚಿನವು ರಾಷ್ಟ್ರೀಯ ಮನೋಧರ್ಮವನ್ನು ರೂಪಿಸುವ ಹಾಗೂ ಪ್ರಸಾರ ಮಾಡುವ ಕೆಲಸದಲ್ಲಿ ತೊಡಗಿದುವು. ಆ ಕಾಲದ ಅನೇಕ ವೃತ್ತ ಪತ್ರಿಕೆಗಳನ್ನು ವ್ಯವಹಾರ ಸಾಹಸವಾಗಿ ಪ್ರಾರಂಭಿಸಿರಲಿಲ್ಲ. ಬದಲಿಗೆ ರಾಷ್ಟ್ರೀಯತಾ ಚಟುವಟಿಕೆಯ ಅಂಗಗಳಾಗಿಯೇ ಮೊದಲಿಡಲಾಗಿತ್ತು. ಅವುಗಳ ಮಾಲೀಕರು ಹಾಗೂ ಸಂಪಾದಕರು ಅನೇಕ ವೇಳೆ ವೈಯಕ್ತಿಕವಾಗಿ ಅಪಾರ ತ್ಯಾಗ ಮಾಡಬೇಕಾಗಿತ್ತು. ಈ ರಾಷ್ಟ್ರೀಯ ಮರ್ತಮಾನ ಪತ್ರಿಕೆಗಳಲ್ಲಿ ಹೆಚ್ಚಿನವನ್ನು ರಾಷ್ಟ್ರೀಯ ಕಾಂಗ್ರೆಸ್ಸ್ ಅಸ್ತಿತ್ವಕ್ಕೆ ಬರುವುದಕ್ಕೆ ಮುಂಚೆಯೇ ಸ್ಥಾಪಿಸಲಾಗಿತ್ತು. ಅಮೃತ್ ಬಜಾರ್ ಪತ್ರಿಕಾ, ಇಂಡಿಯನ್ ಮಿರರ್, ಸಂಜೀವನಿ, ಬೆಂಗಾಲೀ - ಇವು ಬಂಗಾಳಿ ಭಾಷೆಯಲ್ಲಿ ಪ್ರಕಟವಾಗುತ್ತಿದ್ದುವು. ಮದರಾಸಿನ ಹಿಂದೂ, ಸ್ವದೇಶ ಮಿತ್ರನ್, ಆಂಧ್ರ ಪ್ರಕಾಶಿಕಾ ಮತ್ತು ಕೇರಳ ಪತ್ರಿಕಾ, ಬೊಂಬಾಯಿನ ಮರಾಠ, ಕೇಸರಿ, ಇಂದು ಪ್ರಕಾಶ, ಸುಧಾರಕ ; ಉತ್ತರ ಪ್ರದೇಶದಲ್ಲಿ ಅಡ್ವೊಕೇಟ್, ಹಿಂದೂಸ್ತಾನಿ ಮತ್ತು ಅಜಾದ್, ಪಂಜಾಬಿನಲ್ಲಿ ಟ್ರಿಬೂನ್, ಅಖ್ಬರ್ -ಇ-ಆಮ್, ಕೊಗಿನೂರ್ - ಇವು ಆ ಕಾಲದ ಬಹುಮುಖ್ಯವಾದ- ಕೆಲವು ರಾಷ್ಟ್ರೀಯ ವೃತ್ತಪತ್ರಿಕೆಗಳು.

## 8.5 ಮಾದರಿ ಪ್ರಶ್ನೆಗಳು

(1) ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆಯ ಬಗ್ಗೆ ಇರುವ ವಿವಿಧ ಸಿದ್ಧಾಂತಗಳನ್ನು ಪರೀಕ್ಷಿಸಿ

(2) ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಉದಯದ ಮೊದಲು ಇರುವ ರಾಜಕೀಯ ಸಂಸ್ಥೆಗಳ ಸ್ವರೂಪ ಮತ್ತು ಲಕ್ಷಣಗಳನ್ನು ಚರ್ಚಿಸಿ.

## 8.6 ಪರಾಮರ್ಶನ ಕೃತಿಗಳು


(1) Seetharamaiah - "History of Indian National Congress"

(2) Sumith Sarkar - "Modern India (1857 - 1947)"

(3) Burton Stein - " Indian History".


ಡಾ. ಸುಗೀತಾ ಸುವರ್ಣ

## ಘಟಕ -9

# ಮಂದಗಾಮಿಗಳು ಮತ್ತು ರಾಷ್ಟ್ರೀಯತೆಗೆ ಅವರ ಕೊಡುಗೆಗಳು

9.0 ಉದ್ದೇಶಗಳು

9.1 ಪ್ರಸ್ತಾವನೆ

9.2 ರಾಜಕೀಯ ಕಾರ್ಯವಿಧಾನಗಳು

9.3 ಆಡಳಿತ ವ್ಯವಸ್ಥೆ

9.4 ಆರ್ಥಿಕ ನೀತಿ

9.5 ನಾಗರೀಕ ಹಕ್ಕುಗಳ ರಕ್ಷಣೆ

9.6 ಪ್ರಜಾಸತ್ತಾತ್ಮಕ ಮತ್ತು ಸ್ವಯಂ ಆಡಳಿತಕ್ಕೆ ಒತ್ತಾಯ

9.7 ಉಪಸಂಹಾರ

9.7 ಮಾದರಿಯ ಪ್ರಶ್ನೆಗಳು

9.8 ಪರಾಮರ್ಶನ ಕೃತಿಗಳು

## 9.0 ಉದ್ದೇಶಗಳು

ಈ ಘಟಕ 9ನ್ನು ಅಧ್ಯಯನ ಮಾಡಿದ ನಂತರ ನೀವು ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆಯ ನಂತರ ಅದರ ನಾಯಕತ್ವವನ್ನು ವಹಿಸಿದ ಮಂದಗಾಮಿ ರಾಜಕೀಯ ನಾಯಕರು, ತಮ್ಮ ಕಾರ್ಯವಿಧಾನಗಳಿಂದ, ಆಡಳಿತ ವ್ಯವಸ್ಥೆ ಆರ್ಥಿಕ ವ್ಯವಸ್ಥೆ, ನಾಗರೀಕ ಹಕ್ಕುಗಳ ರಕ್ಷಣೆ, ಪ್ರಜಾಪ್ರಭುತ್ವ ಮತ್ತು ಸ್ವಯಂ ಆಡಳಿತಕ್ಕೆ ತಮ್ಮ ನಿಲುವನ್ನು ಮತ್ತು ಸರ್ಕಾರದೊಂದಿಗೆ ತಮ್ಮ ಒತ್ತಾಯವನ್ನು ಮಾಡಿದ್ದು ಇವರು ಭಾರತ ರಾಷ್ಟ್ರೀಯತೆಗೆ ಹೇಗೆ ಕೊಡುಗೆ ನೀಡಿದರು ಎಂಬುದನ್ನು ಅಧ್ಯಯನ ಮಾಡುವಿರಿ.

## 9.1 ಪ್ರಸ್ತಾವನೆ

ಮಂದಗಾಮಿ ಭಾರತದ ರಾಷ್ಟ್ರೀಯ ನಾಯಕರ ಅಭಿಪ್ರಾಯದಲ್ಲಿ ಆಗ ಇನ್ನೂ ರಾಷ್ಟ್ರದ ರಾಜಕೀಯ ವಿಮೋಚನೆಗಾಗಿ ನೇರವಾದ ಹೋರಾಟ ನಡೆಸುವುದು ಇತಿಹಾಸದ ಕಾರ್ಯಾನಿಯೋಜನೆಯಲ್ಲಿ ಇರಲಿಲ್ಲ. ಆ ನಿಯೋದನೆಯಲ್ಲಿದ್ದುದ್ದು ರಾಷ್ಟ್ರೀಯತಾ ಭಾವನೆಯ ಉದ್ಭೋಧನೆ. ಆ ಭಾವನೆಯ ಕ್ರೋಡೀಕರಣ, ರಾಷ್ಟ್ರೀಯತಾ ರಾಜಕೀಯದ ಶಿಖರಸ್ಥಿತಿಗೆ ಭಾರೀ ಸಂಖ್ಯೆಯ ಭಾರತೀಯರನ್ನು ತರುವುದು ಮತ್ತು ರಾಜಕೀಯ, ರಾಜಕೀಯ ಚಳುವಳಿ ಮತ್ತು ಹೋರಾಟದ ವಿಷಯಗಳಲ್ಲಿ ಅವರಿಗೆ ಶಿಕ್ಷಣ ಕೊಡುವುದು - ಈ ವಿಚಾರಗಳು ಈ ನಿಟ್ಟಿನಲ್ಲಿ ಮೊದಲನೆಯ ಮುಖ್ಯ ಕರ್ತವ್ಯ, ರಾಜಕೀಯ ಪ್ರಶ್ನೆಗಳಲ್ಲಿ ಸಾರ್ವಜನಿಕ ಆಸಕ್ತಿಯನ್ನು ಮೂಡಿಸುವುದು ಹಾಗೂ ದೇಶದಲ್ಲಿ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವುದು. ಎರಡನೆಯದಾಗಿ, ಜನತಾ ಬೇಡಿಕೆಗಳನ್ನು ರಾಷ್ಟ್ರವ್ಯಾಪೀ ಆಧಾರದ ಮೇಲೆ ಖಚಿತಪಡಿಸಿ, ಮೂಡುವ ಸಾರ್ವಜನಿಕ ಅಭಿಪ್ರಾಯವು ಅಖಿಲ ಭಾರತ ದೃಷ್ಟಿಯನ್ನು ಹೊಂದಿರುವಂತೆ ಮಾಡುವುದು. ಎಲ್ಲಕ್ಕಿಂತ ಹೆಚ್ಚಾಗಿ ರಾಜಕೀಯ ಪ್ರಜ್ಞೆಯಿದ್ದ ಭಾರತೀಯರಲ್ಲಿ ಮತ್ತು ರಾಜಕೀಯ ಕಾರ್ಯಕರ್ತರು ಮತ್ತು ಮುಖಂಡರಲ್ಲಿ ರಾಷ್ಟ್ರ ಐಕ್ಯತೆಯ ಭಾವನೆಯನ್ನು ಮೂಡಿಸುವುದು ಆದ್ಯ ಕರ್ತವ್ಯವಾಗಿತ್ತು. ಭಾರತ ಇನ್ನೂ "ನಿರ್ಮಾಣವಾಗುತ್ತಿರುವ ದೇಶ", ಭಾರತ ರಾಷ್ಟ್ರೀಯತ್ವ ಎನ್ನುವುದು ಕ್ರಮೇಣ ಅಸ್ತಿತ್ವಕ್ಕೆ ಬರುತ್ತಿದೆ. ಆದ್ದರಿಂದ ಅದು ಈಗಾಗಲೇ ಸಿದ್ಧವಾಗಿರುವ ವಿಚಾರ ಎಂದು ಇಟ್ಟುಕೊಳ್ಳುವಂತಿಲ್ಲ ಎಂಬುದನ್ನು ಮಿತಗಾಮಿ ರಾಷ್ಟ್ರೀಯಿತಾವಾದಿಗಳು ಪೂರ್ಣವಾಗಿ ತಿಳಿದುಕೊಂಡಿದ್ದರು. ರಾಜಕೀಯ ನಾಯಕರು ಪ್ರಾಂತ, ಜಾತಿ ಅಥವಾ ಧರ್ಮದ ವಿವಕ್ಷೆಯಿಲ್ಲದೇ ನಿರಂತರವಾಗಿ ರಾಷ್ಟ್ರೈಕ್ಯದ ವಿಕಾಸ ಮತ್ತು ಕ್ರೋಡೀಕರಣಗಳಿಗಾಗಿ ಶ್ರಮಿಸಲೇಬೇಕಾಗಿತ್ತು. ಈ ನಿಟ್ಟಿನಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ ವಿನೀತವಾಗಿ ತನ್ನ ಪ್ರಯತ್ನ ವನ್ನು ಪ್ರಾರಂಭಿಸಿತು. ದೇಶದ ಬೇರೆ ಬೇರೆ ಭಾಗಗಳ ಸಕ್ರಿಯ ರಾಷ್ಟ್ರೀಯತಾವಾದಿಗಳ ನಿಕಟ ಸಂಪರ್ಕ ಮತ್ತು ಸ್ನೇಹಯುತ ಸಂಬಂಧಗಳನ್ನು ಸಾಧಿಸಲು ಪ್ರಯತ್ನಿಸಿತು. ಅಂದಿನ ರಾಷ್ಟ್ರೀಯತಾವಾದಿಗಳ ಆರ್ಥಿಕ ಮತ್ತು ರಾಜಕೀಯ ಬೇಡಿಕೆಗಳು ಒಂದು ಸಮಾನ ಆರ್ಥಿಕ ಮತ್ತು ರಾಜಕೀಯ ಕಾರ್ಯಕ್ರಮಗಳ ಆಧಾರದ ಮೇಲೆ ಭಾರತದ ಜನರನ್ನು ಒಂದುಗೂಡಿಸುವ ಉದ್ದೇಶದಿಂದಲೇ ರೂಪುಗೊಂಡವು.

## 9.2 ರಾಜಕೀಯ ಕಾರ್ಯವಿಧಾನಗಳು

ಆರಂಭಿಕ ರಾಷ್ಟ್ರೀಯವಾದಿಗಳಿಗೆ "ಮಂದಗಾಮಿ"ಗಳು (Moderaters) ಎಂಬ ಹೆಸರನ್ನು ತಂದಿತ್ತದ್ದು, ಅವರ ರಾಜಕೀಯ ಕ್ರಮಗಳಿಗೆ ಕೈಗೊಂಡ ವಿಧಾನಗಳು. ಈ ವಿಧಾನಗಳನ್ನು ಸಂಕ್ಷೇಪವಾಗಿ, ಕಾನೂನಿನ ಗತಿಯ ಚೌಕಟ್ಟಿನೊಳಗೆ ಸುವ್ಯವಸ್ಥಿತವಾಗಿ, ಮಂದವಾಗಿ ನಡೆಸಿದ ಸಾಂವಿಧಾನಿಕ ಚಳುವಳಿಗಳು, ವ್ಯವಸ್ಥಿತ ರಾಜಕೀಯ ಪ್ರಗತಿ ಎಂದು ವರ್ಣಿಸಬಹುದು. ಜನರಿಗೆ ಆಧುನಿಕ ರಾಜಕೀಯದಲ್ಲಿ ಶಿಕ್ಷಣ ಕೊಡುವುದು, ರಾಷ್ಟ್ರವ್ಯಾಪಿಯಾಗಿ ರಾಜಕೀಯ ಪ್ರಜ್ಞೆಯನ್ನು ಪ್ರಚೋಧಿಸುವುದು, ರಾಜಕೀಯ ಪ್ರಶ್ನೆಗಳಲ್ಲಿ ಒಟ್ಟಾದ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವುದು - ಇದು ತಮ್ಮ ಮುಖ್ಯ ಕರ್ತವ್ಯ ಎಂದು ಅವರು ನಂಬಿದ್ದರು. ಇದನ್ನು ಸಾಧಿಸುವುದಕ್ಕಾಗಿ ಅವರು ಹಲವಾರು ಮಾರ್ಗಗಳನ್ನು ಅವಲಂಬಿಸಿದ್ದರು. ಬಹಳ ಉನ್ನತವಾದ ರಾಜಕೀಯ ಮತ್ತು ಬೌದ್ಧಿಕ ಮಟ್ಟವುಳ್ಳ ಭಾಷಣಗಳಿಂದ ಕೂಡಿದ ಸಭೆಗಳನ್ನು ಏರ್ಪಡಿಸಿದರು. ಅಲ್ಲಿ ಜನತೆಯ ಬೇಡಿಕೆಗಳನ್ನು ಕುರಿತ ನಿರ್ಣಯಗಳನ್ನು ಅಂಗೀಕರಿಸಲಾಯಿತು. ವೃತ್ತಪತ್ರಿಕೆಗಳ ಮೂಲಕ ರಾಷ್ಟ್ರೀಯ ವಾದಿಗಳು ಸರಕಾರದ ಬಗೆಗೆ ದಿನ ದಿನವೂ ವಿಮರ್ಶಿ ನಡೆಸಿದರು. ಲೆಕ್ಕವಿಲ್ಲದಷ್ಟು ಮನವಿಗಳನ್ನು, ಭಿನ್ನಹಗಳನ್ನೂ ಉನ್ನತ ಸರ್ಕಾರಿ ಅಧಿಕಾರಿಗಳೂ ಬ್ರಿಟಿಷ್ ಪಾರ್ಲಿಮೆಂಟಿಗೂ ಕಳುಹಿಸಿದರು. ಈ ಬಿನ್ನಹಗಳು ಮತ್ತು ಮನವಿಗಳ ಸತ್ಯಾಂಶಗಳನ್ನೂ, ವಾದಗಳನ್ನು ಬಹುಶ್ರಮದಿಂದ ಸೂಕ್ತವಾಗಿ ಜೋಡಿಸಿ ರಚಿಸಿದ ದಾಖಲೆಗಳಾಗಿದ್ದವು.

ತೋರಿಕೆಗೆ ಸರಕಾರವನ್ನು ಸಂಭೋಧಿಸಿ ಇವುಗಳನ್ನು ರಚಿಸಿದ್ದರೂ, ಅವುಗಳ ನಿಜವಾದ ಗುರಿ ಭಾರತದ ಜನರಿಗೆ ಆ ವಿಷಯಗಳನ್ನು ಮನದಟ್ಟು ಮಾಡಿಕೊಡುವುದಾಗಿತ್ತು. ಉದಾಹರಣೆಗೆ 1891ರಲ್ಲಿ ಆಗ ಯುವಕರಾಗಿದ್ದ ಗೋಖಲೆಯರು, ಪುನಾ ಸಾರ್ವಜನಿಕ ಸಭೆಯು ಬಹು ಎಚ್ಚರಿಕೆಯಿಂದ ವಿಸ್ತಾರವಾಗಿ ತಯಾರಿಸಿದ್ದ ಭಿನ್ನಹಪತ್ರಕ್ಕೆ ಸರಕಾರವು ಕೊಟ್ಟ ಎರಡು ಸಾಲಿನ ಉತ್ತರದ ಬಗೆಗೆ ತಮ್ಮ ತೀವ್ರ ನಿರಾಶೆಯನ್ನು ವ್ಯಕ್ತಪಡಿಸಿದಾಗ ಜಸ್ಟಿಸ್ ರಾನಡೆ, ಅವರಿಗೆ ಹೀಗೆ ಉತ್ತರ ಕೊಟ್ಟರು.

"ನಿಮ್ಮ ದೇಶದ ಇತಿಹಾಸದಲ್ಲಿ ನಮ್ಮ ಸ್ಥಾನ ಏನು ಎಂಬುದು ನಿಮಗೆ ಇನ್ನೂ ಗೊತ್ತಾಗಿಲ್ಲ. ಈ ಮನವಿ ಪತ್ರಗಳನ್ನು ಸುಮ್ಮನೆ ನಾಮ ಮಾತ್ರಕ್ಕೆ ಸರಕಾರವನ್ನು ಸಂಭೋಧಿಸಿ ರಚಿಸಲಾಗುತ್ತದೆ. ವಾಸ್ತವವಾಗಿ ಅವು ಸಂಭೋಧಿಸುವುದು ದೇಶದ ಜನತೆಯನ್ನು, ಅವರು ಈ ವಿಚಾರಗಳಲ್ಲಿ ಹೇಗೆ ಅಲೋಚಿಸಬೇಕು ಎಂಬುದನ್ನು ಕಲಿಸುವುದೇ ಅವುಗಳ ಉದ್ದೇಶ. ಈ ಕೆಲಸವನ್ನು ಹಲವು ವರ್ಷಗಳ ಕಾಲ ಯಾವ ಪ್ರತಿಫಲವನ್ನೂ ನಿರೀಕ್ಷಿಸದೆ ಮಾಡಬೇಕು. ಏಕೆಂದರೆ ಈ ಬಗೆಯ ರಾಜಕೀಯ ಈ ನೆಲಕ್ಕೆ ತೀರಾ ಹೊಸದು".

ಆರಂಭಿಕ ರಾಷ್ಟ್ರೀಯವಾದಿಗಳಿಗಿದ್ದ ಎರಡನೆಯ ಉದ್ದೇಶ ಅಗತ್ಯವಾಗಿದ್ದ ಬದಲಾವಣೆಗಳನ್ನು ಜಾರಿಗೆ ತರುವಂತೆ ಬ್ರಿಟಿಷ್ ಸರಕಾರದ ಮೇಲೂ ಬ್ರಿಟಿಷ್ ಸಾರ್ವಜನಿಕ ಅಭಿಪ್ರಾಯದ ಮೇಲೂ ಪ್ರಭಾವ ಬೀರುವುದು. ರಾಷ್ಟ್ರೀಯ ವಾದಿಗಳು ಮೊದಲಿಗೆ ಭಾರತದಲ್ಲಿನ ವಾಸ್ತವ ಪರಿಸ್ಥಿತಿಗಳು ಬ್ರಿಟಿಷ್‌ರಿಗೆ ನಿಜವಾಗಿಯೂ ಗೊತ್ತೇ ಇಲ್ಲ ಎಂದು ನಂಬಿದ್ದರು. ಆದ್ದರಿಂದ ಬ್ರಿಟಿಷ್ ಜನತೆಗೂ, ರಾಜಕೀಯ ಧುರೀಣರಿಗೂ ಮನವಿಗಳನ್ನೂ ಭಿನ್ನಹಗಳನ್ನು ಕಳಿಸುವುದರ ಮೂಲಕ ಮತ್ತು ಇಂಗ್ಲೆಂಡಿನಲ್ಲಿ ಸಕ್ರೀಯವಾದ ರಾಜಕೀಯ ಪ್ರಚಾರವನ್ನು ನಡೆಸುವುದರ ಮೂಲಕ, ಅವರು ಸತ್ಯಾಂಶವನ್ನು ತಿಳಿದುಕೊಳ್ಳುವಂತೆ ಮೊದಲು ಪ್ರಯತ್ನಿಸಿದರು. ಪ್ರಮುಖರಾಗಿದ್ದ ಭಾರತೀಯ ನಾಯಕರನ್ನು ಬ್ರಿಟನ್ನಿಗೆ ನಿಯೋಗ ಕಳುಹಿಸಲಾಯಿತು. 1889ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನ ಬ್ರಿಟಿಷ್ ಸಮಿತಿಯೆಂದು ರೂಪುಗೊಂಡಿತು. 1890ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನ ಬ್ರಿಟಿಷ್ ಸಮಿತಿಯೆಂದು ರೂಪುಗೊಂಡಿತು. 1890ರಲ್ಲಿ ಈ ಸಮಿತಿಯು 'ಇಂಡಿಯಾ' ಎಂಬ ನಿಯತಕಾಲಿಕವನ್ನು ಪ್ರಾರಂಭಿಸಿತು. ದಾದಾಬಾಯಿ ನವರೋಜಿ ಅವರು ತಮ್ಮ ಜೀವನದ ಬಹುಭಾಗವನ್ನು, ತಮ್ಮ ವರಮಾನದ ಬಹುಭಾಗವನ್ನೂ ಬ್ರಿಟನ್ನಿನಲ್ಲಿ ಅಲ್ಲಿನ ಜನತೆ ಮತ್ತು ರಾಜಕೀಯ ವ್ಯಕ್ತಿಗಳ ನಡುವೆ ಪ್ರಚಾರ ಕಾರ್ಯ ಮಾಡುವುದರಲ್ಲೇ ಸವೆಸಿದರು.

ಆರಂಭಿಕ ರಾಷ್ಟ್ರೀಯವಾದಿಗಳು ನ್ಯಾಯಬದ್ಧ ಚಳುವಳಿಯಲ್ಲಿ ಮಾತ್ರವೇ ನಂಬಿಕೆ ಇಟ್ಟುಕೊಂಡಿದ್ದರಾದರೂ, ಈ ಮಿತವಾದ ಆಧಾರದ ಮೇಲೆ ಕೂಡ ವರ್ತಮಾನ ಪತ್ರಿಕೆಗಳ ಮೂಲಕವಾಗಿ ಹೊರತು, ರಾಷ್ಟ್ರವ್ಯಾಪಿಯಾದ ಅಥವಾ ನಿರಂತವಾದವಾದ ಚಳುವಳಿಗಳನ್ನು ವ್ಯವಸ್ಥೆ ಮಾಡುವುದಕ್ಕೆ ಅಸಮರ್ಥರಾದರು. ಇದಕ್ಕೆ ಸ್ವಲ್ಪಮಟ್ಟಿಗೆ ಕಾರಣ ಹಣದ ಮುಗ್ಗಟ್ಟು ವಿಪರೀತವಾಗಿದ್ದದ್ದು. ಪದೇ ಪದೇ ಹಣವಿಲ್ಲದ ಪರಿಸ್ಥಿತಿ ಅವರಿಗೆ ಒದಗುತ್ತಿತ್ತು. ಶ್ರೀಮಂತರಾಗಿದ್ದ ಭಾರತೀಯರು - ವರ್ತಕರು, ಕೈಗಾರಿಕೋದ್ಯಮಿಗಳು ಮತ್ತುಜಮೀನ್ದಾರರು -ಇನ್ನು ರಾಷ್ಟ್ರೀಯ ಚಳುವಳಿಗೆ ಆರ್ಥಿಕ ಬೆಂಬಲ ಕೊಟ್ಟಿರಲಿಲ್ಲ. ಅನೇಕ ರಾಜಕೀಯ ನಾಯಕರು ತಮ್ಮ ಸ್ವಂತದ ಸಂಪಾದನೆಯಲ್ಲೇ ಬದುಕಬೇಕಾಗಿತ್ತು. ಆ ವರಮಾನವೋ ಅತ್ಯಲ್ಪವಾಗಿರುತ್ತಿತ್ತು. ನಿದರ್ಶನಕ್ಕೆ ಹೇಳುವುದಾದರೆ ಸುರೇಂದ್ರನಾಥ ಬ್ಯಾನರ್ಜಿ ಮತ್ತು ಗೋಪಾಲಕೃಷ್ಣ ಗೋಖಲೆ ಬಹು ಅಲ್ಪ ವರಮಾನದ ಉಪಧ್ಯಾಯ ವೃತ್ತಿಯಿಂದ ಬದುಕುತ್ತಿದ್ದರು. ತಿಲಕರು ನ್ಯಾಯಶಾಸ್ತ್ರರ ವಿದ್ಯಾರ್ಥಿಗಳಿಗಾಗಿ ಒಂದು ಖಾಸಗೀ ತರಬೇತಿ ಶಾಲೆ ನಡೆಸುತ್ತಿದ್ದರು. ಮೊದಲಿನ ರಾಷ್ಟ್ರೀಯ ವಾದಿಗಳಲ್ಲಿ ಹೆಚ್ಚು ಜನ ವಕೀಲರು ಮತ್ತು ಪತ್ರಿಕೋದ್ಯಮಗಳೇ ಪ್ರಧಾನವಾಗಿ ಇದ್ದುದಕ್ಕೆ - ಅವೆರಡೂ ಸ್ವತಂತ್ರ ವೃತ್ತಿಗಳು - ಇದು ಸ್ವಲ್ಪ ಮಟ್ಟಿನ ಕಾರಣವನ್ನು ಕೊಡುತ್ತದೆ.

## 9.3 ಆಡಳಿತ ವ್ಯವಸ್ಥೆ

ಮಂದಗಾಮಿ ರಾಷ್ಟ್ರೀಯವಾದಿಗಳು ಒಂದೊಂದೇ ಆಡಳಿತ ಕ್ರಮವನ್ನು ನಿರ್ಭೀತಿಯಿಂದ ವಿಮರ್ಶಿಸಿದರು. ಭ್ರಷ್ಟಚಾರ, ಅಸಮರ್ಪಕತೆ, ದಬ್ಬಾಳಿಕೆಗಳಿಂದ ತುಂಬಿದ ಆಡಳಿತ ವ್ಯವಸ್ಥೆ ಸುಧಾರಣೆಗೊಳ್ಳಬೇಕೆಂದು ಅವಿರತವಾಗಿ ಶ್ರಮಿಸಿದರು. ಅವರು ಚಳುವಳಿ ಹೂಡುವ ಅತ್ಯಂತ ಮುಖ್ಯವಾದ ಆಡಳಿತ ಸುಧಾರಣೆ ಆಡಳಿತದ ಉನ್ನತಾಧಿಕಾರಿಗಳಿಗೆ ಭಾರತೀಯರನ್ನು ನೇಮಿಸುವ ವಿಚಾರವಾದದ್ದು. ಈ ಬೇಡಿಕೆಯನ್ನು ಆರ್ಥಿಕ, ರಾಜಕೀಯ ಮತ್ತು ನೈತಿಕ ಆಧಾರಗಳ ಮೇಲೆ ಮಂಡಿಸಲಾಯಿತು. ಆರ್ಥಿಕವಾಗಿ ನೋಡುವುದಾದರೆ, ಯೂರೋಪಿಯನ್ನರಿಗೆ ಕೊಡುತ್ತಿದ್ದ ಅಧಿಕ ವೇತನಗಳು ಭಾರತದ ಹಣಕಾಸಿನ ಪರಿಸ್ಥಿತಿಯ ಮೇಲೆ ಭಾರೀ ಹೊರೆಯಾಗಿದ್ದುವಲ್ಲದೆ,

ಸಂಪತ್ತಿನ ಹೊರ ಪರಿವಿಗೆ ಪೋಷಕವಾಗಿದ್ದುವು. ಏಕೆಂದರೆ ಆ ವೇತನಗಳ ಬಹುಭಾಗ ಬ್ರಿಟನ್ನಿಗೆ ರಫ್ತಾಗುತ್ತಿದ್ದಿತು. ರಾಜಕೀಯವಾಗಿ, ಯುರೋಪಿಯನ್ ಸಿವಿಲ್ ಅಧಿಕಾರಿಗಳು ಭಾರತೀಯ ಅಗತ್ಯತೆಗಳನ್ನು ಕಡೆಗಣಿಸುತ್ತಿದ್ದರು. ವಿಶೇಷವಾಗಿ ಭಾರತೀಯ ಬಂಡವಾಳಗಾರರನ್ನು ತಿರಸ್ಕರಿಸಿ ಯುರೋಪಿಯನ್ ಬಂಡವಾಳಗಾರರಿಗೆ ಪಕ್ಷಪಾತ ತೋರಿಸುತ್ತಿದ್ದರು. ಇನ್ನು ನೈತಿಕವಾಗಿ ಹೇಳುವುದಾದರೆ, ಅತ್ಯುನ್ನತವಾದ ಭಾರತೀಯನನ್ನು ತನ್ನದೇ ದೇಶದಲ್ಲಿ ಶಾಶ್ವತವಾಗಿ ಅತಿಕುಬ್ಜನಾಗುವಂತೆ ಮಾಡಿ ಅವನ ಭಾರತೀಯತ್ವವನ್ನೇ ಅದು ಕುಗ್ಗಿಸಿದ್ದಿತು. ಇದರ ಜೊತೆಯಲ್ಲೇ ಮೊದಲ ರಾಷ್ಟ್ರೀಯವಾದಿಗಳು ಸರಕಾರದ ಕೆಳ ಹಂತಗಳ ಅಲ್ಪವೇತನದ ನೌಕರರಿಗೆ ಅಧಿಕ ವೇತನ ನೀಡಬೇಕೆಂದು ಒತ್ತಾಯ ಮಾಡಿದರು. ಅಧಿಕ ಪ್ರಮಾಣದ ಭ್ರಷ್ಟಾಚಾರ ಮತ್ತು ಅಸಮರ್ಪಕತೆಗಳು ಕೆಳಹಂತಗಳಲ್ಲಿ ಕಂಡು ಬರುತ್ತಿರುವುದಕ್ಕೆ ಕಾರಣ, ತಳಹದಿಯ ಹಂತದಲ್ಲಿ ಕೊಡುತ್ತಿರುವ ಅತ್ಯಲ್ಪ ವೇತನ ಎಂದು ಅವರು ನಂಬಿದ್ದರು.

ಸಾಮಾನ್ಯ ಜನರ ಬಗೆಗೆ ಪೋಲೀಸರು ಮತ್ತು ಸರಕಾರಿ ಏಜೆಂಟರು ತೋರಿಸುತ್ತಿದ್ದ ತುಳಿತದ, ದಬ್ಬಾಳಿಕೆಯ ವರ್ತನೆಯನ್ನು ರಾಷ್ಟ್ರೀಯವಾದಿಗಳು ಒಂದೇ ಸಮನೆ ಕಟುವಾಗಿ ಖಂಡಿಸಿ ವಿರೋಧಿಸಿದರು. ರಾಷ್ಟ್ರೀಯ ವೃತ್ತಪತ್ರಿಕೆಗಳು ದಿನದಿನವೂ ಅಂತಹ ನಿರಂಕುಶ ವರ್ತನೆಯ ಅಸಂಖ್ಯಾತ ನಿದರ್ಶನಗಳನ್ನು ಬೆಳಕಿಗೆ ತರುತ್ತಿದ್ದವು. ಜನರಿಗೆ ದಬ್ಬಾಳಿಕೆಯಿಂದ ಮತ್ತು ಪೋಲೀಸರ ನಡತೆಯಿಂದ ರಕ್ಷಣೆ ದೊರಕುವಂತೆ ಕಾರ್ಯಾಂಗವು ನ್ಯಾಯಾಂಗದಿಂದ ಬೇರೆಯಾಗತಕ್ಕದ್ದು ಎಂದು ಅವರು ಒತ್ತಾಯ ಮಾಡಿದರು. ನ್ಯಾಯಾಂಗದ ವಿಳಂಬ ಸೂತ್ರ ಹಾಗೂ ದುಬಾರಿ ವೆಚ್ಚಗಳನ್ನೂ ಖಂಡಿಸಿದರು. ಯುರೋಪಿಯನ್ನನೊಂದಿಗೆ ಭಾರತೀಯನು ವಿವಾದದಲ್ಲಿ ತೊಡಗಿದ್ದ ಸಂದರ್ಭಗಳಲ್ಲಿ, ಪ್ರತಿಸಲವೂ ನ್ಯಾಯವನ್ನು ಯುರೋಪಿಯನ್ನನಿಗೆ ಅನುಕೂಲವಾಗುವಂತೆ ಅಡ್ಡದಾರಿಗೆಳೆಯುವುದನ್ನು ಖಂಡಿಸಿ, ನ್ಯಾಯದೆದುರು ಸಮಾನತೆ ಎಂಬ ತತ್ವ ಯುರೋಪಿಯನ್ನರಿಗೂ ಅನ್ವಯವಾಗಬೇಕೆಂದು ಒತ್ತಿ ಹೇಳಿದರು. ಜನರು ಆಯುಧ ಧರಿಸಬಾರದೆಂದು ವಿಧಿಸಿರುವ ನೀತಿಯನ್ನು ವಿರೋದಿಸಿ, ಎಲ್ಲ ಜನರಿಗೂ ಸಶಸ್ತ್ರರಾಗಿರಲು ಹಕ್ಕಿದೆ ಎಂದು ವಾದಿಸಿದರು. ಭಾರತದ ನೆರೆ ದೇಶಗಳ ಮೇಲೆ ಆಕ್ರಮಣಕಾರೀ ನೀತಿಯನ್ನು ತಾಳಿರುವುದನ್ನು ಆಕ್ಷೇಪಿಸಿದರು. ಬರ್ಮಾದೇಶವನ್ನು ಕೂಡಿಸಿಕೊಂಡದ್ದನ್ನೂ, ಆಫ್ಘಾನಿಸ್ತಾನದ ಮೇಲೆ ಮುತ್ತಿಗೆ ಹಾಕಿದುದುನ್ನು ವಾಯುವ್ಯ ಭಾರತದ ಬುಡಕಟ್ಟು ಜನರನ್ನು ಅಡಗಿಸಿದುದನ್ನು ಅವರು ಖಂಡಿಸಿದರು.

ಭಾರತದಲ್ಲಿ ಜನಹಿತ ಕಾರ್ಯಗಳು ಇದ್ದ ಅತಿ ಕೆಳಗಿವ ಮಟ್ಟವನ್ನು ರಾಷ್ಟ್ರೀಯವಾದಿಗಳು ಟೀಕಿಸಿದರು. ಸರಕಾರ ಜನರಹಿತ ಕಾರ್ಯಗಳನ್ನು ಹೆಚ್ಚುಪಡಿಸಲು ತಕ್ಕ ಕ್ರಮಗಳನ್ನು ಕೈಗೊಳ್ಳಬೇಕು. ಅದರಲ್ಲೂ ಜನಸಾಮಾನ್ಯ ಶಿಕ್ಷಣ ಸೌಲಭ್ಯಗಳು ಹೆಚ್ಚು ಬೇಕು. ವೈದ್ಯಕೀಯ ಮತ್ತು ಆರೋಗ್ಯ ರಕ್ಷಣಾ ಸೌಲಭ್ಯಗಳು ಅಧಿಕವಾಗಬೇಕು ಎಂದು ಒತ್ತಾಯಮಾಡಿದರು. ಎಲ್ಲಕ್ಕಿಂತ ಮಿಗಿಲಾಗಿ, ನಾವು ಆಗಲೇ ನೋಡಿದಂತೆ, ಭಾರತದ ಕೈಗಾರಿಕೆಗಳ ಮತ್ತು ಕೃಷಿಯನ್ನು ಅಭಿವೃದ್ಧಿಪಡಿಸಲು ಚುರುಕಾದ ಆಡಳಿತ ಕ್ರಮಗಳನ್ನು ಕೈಗೊಳ್ಳಬೇಕು ಎಂದು ಒತ್ತಿ ಹೇಳಿದರು.

ದಕ್ಷಿಣ ಆಫ್ರಿಕಾ, ಮಲಯಾ, ಮಾರಿಷಷ್, ಫಿಜಿ, ವೆಸ್ಟ್ ಇಂಡೀಸ್ ಮತ್ತು ಬ್ರಿಟಿಷ್ ಗಯಾನಾ ಮುಂತಾದ ಬ್ರಿಟಿಷ್ ವಸಾಹತುಗಳಿಗೆ ಹೋಗಿ ನೆಲೆಸಿದ್ದ ಭಾರತೀಯರ ಹಿತರಕ್ಷಣೆಯ ವಿಚಾರವನ್ನು ರಾಷ್ಟ್ರೀಯ ನಾಯಕರು ಕೈಗೆತ್ತಿಕೊಂಡರು. ಆದೇಶಗಳಲ್ಲಿ ಅವರನ್ನು ಅತಿರೇಕದ ಜನಾಂಗ ಪಕ್ಷಪಾತ ಮತ್ತು ಇತರ ರೀತಿಯ ದಮನಗಳಿಗೆ ಒಳಪಡಿಸಲಾಗಿತ್ತು. ಹೆಚ್ಚಿನ ಸಂದರ್ಭಗಳಲ್ಲಿ ಅವರ ಸ್ಥಿತಿ ಗುಲಾಮರದಕ್ಕಿಂತ ಉತ್ತಮವಾದುದೇನಾಗಿರಲಿಲ್ಲ. ರಾಷ್ಟ್ರೀಯವಾದಿಗಳು 1893ರ ನಂತರ ದಕ್ಷಿಣ ಆಫ್ರಿಕಾದಲ್ಲಿ ಮೋಹನದಾಸ ಕರಮಚಂದ ಗಾಂಧೀ ಅವರು ಮಾನವ ಹಕ್ಕುಗಳಿಗಾಗಿ ನಡೆಸುತ್ತಿದ್ದ ಜನತಾ ಹೋರಾಟಕ್ಕೆ ಪೂರ್ಣ ಬೆಂಬಲ ಕೊಟ್ಟರು.

ಭಾರತೀಯ ನಾಯಕರು ಪ್ಲಾಂಟ್‌ಷನ್ ಕೆಲಸಗಾರರ ಪರವಾಗಿಯೂ ಹೋರಾಡಿದರು. ವಿದೇಶಿಯ ಪ್ಲಾಂಟರರ ಕೈಗೆಸಿಕ್ಕಿದ್ದ ಕೆಲಸಗಾರರು ಅತ್ಯಲ್ಪ ಸಂಬಳದ ಮೇಲೆ ಹೆಚ್ಚು ಕಡಿಮೆ ಗುಲಾಮಗಿರಿಗೆ ಸಮನಾದ ಸ್ಥಿತಿಯಲ್ಲಿದ್ದರು. ಅದೇ ಸಮಯದಲ್ಲಿ, ಭಾರತೀಯ ಕಾರ್ಖಾನೆಗಳ ಮತ್ತು ಗಣಿಗಳ ಕೆಲಸಗಾರರ ಪರವಾಗಿ ಆ ನಾಯಕರು ಚಳುವಳಿ ಹೂಡಲಿಲ್ಲವೆಂಬುದನ್ನು ಗಮನಿಸಬಹುದು. ಆ ಕೆಲಸಗಾರರೂ ಕ್ರೂರವಾದ ರೀತಿಯ ಸುಲಿಗೆಗೆ ಪಕ್ಕಾಗಿದ್ದವರೇ. ಆದರೆ ಆ ಸಂಧರ್ಭದಲ್ಲಿ ಭಾರತೀಯ ನಾಯಕರು ಭಾರತದ ಬಂಡವಾಳಗಾರರ ಹಿತಕ್ಕೆ ಆದ್ಯತೆ ಕೊಟ್ಟರು. ಒಮ್ಮೆ ವಿದೇಶೀ ನಿಯಂತ್ರಣ ತಪ್ಪಿತೆಂದ ಮೇಲೆ ಭಾರತೀಯ ಬಂಡವಾಳಗಾರನು ತಾನೇ ತನ್ನ ಕೆಲಸಗಾರರ ಹಿತಗಾರರ ಹಿತಗಳನ್ನು ರಕ್ಷಿಸುತ್ತಾನೆ ಎಂದು ಅವರು ನಿರೀಕ್ಷಿಸಿದ್ದಂತೆ ಕಾಣುತ್ತದೆ.

ಸಾವರ್ಕರರ ಬಂಧನ ಮತ್ತು ತಪ್ಪಿಸಿಕೊಳ್ಳಲು ಅವರು ಮಾಡಿದ ಅಪಕ್ವ ವಿಫಲ ಪ್ರಯತ್ನಗಳಿಂದಾಗಿ ಲಂಡನ್ನಿನ ಕ್ರಾಂತಿಕಾರರು ಚೆದುರಿ ಹೋದರು. ವೀರೇಂದ್ರನಾಥ್ ಚಟ್ಟೋಪಾಧ್ಯಾಯ ಪ್ಯಾರಿಸ್ ಮತ್ತು ಜರ್ಮನಿಗೆ ಹೋದರು. ಬರ್ಲಿನಿನಲ್ಲಿ ಜರ್ಮನ್ ವಿದೇಶಾಂಗದ ಕಚೇರಿ ನೆರವಿನಿಂದ ನಿರ್ಮಿಸಿ ಭಾರತೀಯರ ಸಮಿತಿಯೊಂದು ರೂಪುಗೊಂಡಿತು. ಇದೇ ಮುಂದೆ ಇಂಡಿಯನ್ ಇಂಡಿಪೆಂಡೆನ್ಸ್ ಕಮಿಟಿ ಎಂಬ ಹೆಸರು ಪಡೆಯಿತು. ವೀರೇಂದ್ರನಾಥರು ಅದರ ಕಾರ್ಯದರ್ಶಿಯಾದರು. ಅದು ಬಾಗ್‌ದಾದ್, ಇಸ್ತಾಂಬುಲ್, ಪರ್ಷಿಯ ಮತ್ತು ಕಾಬುಲ್‌ಗಳಿಗೆ ನಿಯೋಗಗಳನ್ನು ಕಳುಹಿಸಿತು. ಭಾರತ ಸೇನಾದಳಗಳೊಂದಿಗೆ ಮತ್ತು ಭಾರತದ ಯುದ್ಧ ಸೆರೆಯಾಳುಗಳೊಂದಿಗೆ ಕೆಲಸ ಮಾಡಿತು. ಕಾಬೂಲಿಗೆ ರಾಜಾ ಮಹೇಂದ್ರ ಪ್ರತಾಪರನ್ನು ಮೌಲಾನಾ ಬರ್‌ಕತುಲ್ಲಾ ಮತ್ತು ಮೌಲಾನ ಓಬೀಯಾದುಲ್ಲಾ ಎಂಬುವರ ಜೊತೆ ಕಳುಹಿಸಿಕೊಡಲಾಯಿತು. ಅಲ್ಲಿ ಅವರು ಒಂದು ತಾತ್ಕಾಲಿಕ ಭಾರತ ಸರಕಾರವನ್ನು ರಚಿಸಿದರು.

ಈ ಮಧ್ಯೆ ಹರದಯಾಲ್ ಅಮೇರಿಕಾಕ್ಕೆ ಬಂದರು. ಅಲ್ಲಿ ಆ ವೇಳೆಗಾಗಲೇ ತಾರಕನಾಥ್ ದಾಸ್ ಅವರು. ಪಶ್ಚಿಮ ಕರಾವಳಿಯಲ್ಲಿ ನೆಲೆಸಿದ್ದು ಅಮೇರಿಕದ ಕಟ್ಟುನಿಟ್ಟಾದ ವಲಸೆ ಕಾನೂನುಗಳ ಬಗೆಗೆ ಕಹಿ ಭಾವನೆ ತಳೆದಿದ್ದ ಭಾರತೀಯ ವಲಸೆಗಾರರಲ್ಲಿ ಕ್ರಾಂತೀಯ ಸಂದೇಶವನ್ನು ಹರಡುತ್ತಿದ್ದರು. 1913ರ ನವೆಂಬರ್ 1 ನೆಯ ತಾರೀಖಿನಿಂದ ಕ್ರಾಂತಿಯ ಸ್ಮಾರಕವಾಗಿ ಪ್ರಕಟವಾಗಲು ತೊಡಗಿದ 'ಘದರ್' ಎಂಬ ವಾರಪತ್ರಿಕೆಯಿಂದ ಆ ಪಕ್ಷಕ್ಕೆ ಆ ಹೆಸರು ಬಂದಿತು. (ವಾಸ್ತವವಾಗಿ ಘದರ್ ಎಂಬ ಶಬ್ದದ ಅರ್ಥವೇ ದಂಗೆ ಎಂದಾಗುತ್ತದೆ). ಅದರ ಯೋಜನೆಯಲ್ಲಿ ಸೇನಾದಳಗಳ ನಡುವೆ ಕಾರ್ಯಚಟುವಟಿಕೆ ಅದಿಕಾರಿಗಳ ಕೊಲೆ, ಕ್ರಾಂತಿಕಾರಕವೂ, ಸಾಮ್ರಾಜ್ಯಶಾಹೀ ವಿರೋಧಿಯೂ ಆದ ಸಾಹಿತ್ಯದ ಪ್ರಕಟಣೆ, ಮದ್ದುಗುಂಡುಗಳ, ಶಸ್ತ್ರಾಸ್ತ್ರಗಳ ಸಂಗ್ರಹ - ಇವು ಸೇರಿದ್ದುವು. ಸ್ಯಾನ್ ಫ್ರಾನ್ಸಿಸ್ಕೊ ಅದರ ಮುಖ್ಯ ನೆಲೆಯಾಯಿತು. ಅಮೇರಿಕಾದ ಕರಾವಳಿಯಲ್ಲೂ , ದೂರ ಪ್ರಾಚ್ಯದಲ್ಲೂ ಶಾಖೆಗಳನ್ನು ಸ್ಥಾಪಿಸಲಾಯಿತು. ಬ್ರಿಟಿಷ್ ವಸಾಹತುಗಳೆಲ್ಲದರಲ್ಲೂ ಏಕ ಕಾಲದಲ್ಲಿಯೇ ಕ್ರಾಂತಿಯನ್ನು ಎಬ್ಬಿಸಬೇಕೆಂಬುದೇ ಇದರ ಹಿಂದಿದ್ದ ಉದ್ದೇಶ. 'ಘದರ್' ಜಾಹೀರಾತು ಕೊಟ್ಟಿತು'. "ಭಾರತದಲ್ಲಿ ಘದರನ್ನು ಪ್ರಚೋದಿಸಲಿಕ್ಕಾಗಿ ಧೈರ್ಯಶಾಲಿಗಳಾದ ಯೋಧರು ಬೇಕಾಗಿದ್ದಾರೆ, ವೇತನ-ಮರಣ; ಬೆಲೆ- ಹುತಾತ್ಮತೆ; ನಿವೃತ್ತಿ ವೇತನ -ಸ್ವಾತಂತ್ರ್ಯ; ಯುದ್ಧರಂಗ -ಭಾರತ".

ಕೊಮಾಗಾಟಾಮ ಘಟನೆಯು 'ಘದರ್' ಪಕ್ಷದ ಚಟುವಟಿಕೆಗಳಿಗೆ ನೆರವಾಯಿತು. ಅದು ಗುರುದೀಪ್ ಸಿಂಗನು ಕೆನಾಡಕ್ಕೆ ವಲಸಿಗರನ್ನು ಒಯ್ಯಲು ಬಾಡಿಗೆಗೆ ಪಡೆದುಕೊಂಡಿದ್ದ ಒಂದು ಹಡಗು. ಆದರೆ ಅದು ಬಂದಾಗ ಎರಡು ತಿಂಗಳ ಏಕಾಂತವಾಸ ಮತ್ತು ಅನಿಶ್ಚಯದ ಅನಂತರ ಹಿಂದಿರುಗುವಂತೆ ಹೇಳಲಾಯಿತು. ಕೊನೆಗೊಮ್ಮೆ ಕೊಮಾಗಾಟಾಮರೂ ಹಡಗು ಕಲ್ಕತ್ತು ಬಂದಿರಿನಲ್ಲಿ ಲಂಗುರು ಹಾಕಿದಾಗ, ಸರಕಾರವು ಅವರಿಗಾಗಿ ಮೀಸಲಾಗಿಟ್ಟಿದ್ದ ರೈಲನ್ನು ಹತ್ತಲು ಪ್ರಯಾಣಿಕರು ನಿರಾಕರಿಸಿದರು. ಒಂದು ದಂಗೆ ಎದ್ದಿತು. 20ರಿಂದ 40 ರಷ್ಟು ಜನ ಸತ್ತು ಅನೇಕರು ಗಾಯಗೊಂಡರು. 'ಟೋಷಾಮಾರು '(Toshamaru)ವಿಗೂ ಅದೇ ಗತಿಯಾಯಿತು. ವಿದೇಶಗಳಲ್ಲಿದ್ದ ಪಂಜಾಬಿಗಳು ಈ ಸುದ್ದಿಯಿಂದ ಸಿಡಿದೆದ್ದರು. ಭಾರತಕ್ಕೆ ಧಾವಿಸಿದರು, ಬ್ರಿಟಿಷ್ ಆಡಳಿತಕ್ಕೆ ಎದುರಾಗಿ ಬಿರುಸಾದ ಸಶಸ್ತ್ರ ಚಳುವಳಿ ಹೂಡಲು ಇಲ್ಲಿನವರೊಂದಿಗೆ ಜೊತೆಗೂಡಿದರು. ಜರ್ಮನ್ ಶಾಸ್ತ್ರಾಸ್ತ್ರಗಳನ್ನು ಪಡೆಯಲು ಸಾಧ್ಯವಿಲ್ಲವಾಗಿ ಅವರು ಬಂಗಾಳೀ ಕ್ರಾಂತಿಕಾರರ ಸಂಪರ್ಕಪಡೆದರು.

ಬಂಗಾಳದ ಭಯೋತ್ಪಾದಕ ಕ್ರಾಂತಿಕಾರರಲ್ಲಿ ನೂತನ ನಾಯಕರು ಉದಯಿಸಿದ್ದರು. ಜತೀಂದ್ರನಾಥ ಮುಖರ್ಜಿ, ರಾಶ್‌ಬೆಹಾರಿ ಬೋಸ್ ಮತ್ತು ನರೇಂದ್ರನಾಥ ಭಟ್ಟಾಚಾರ್ಯ ಮುಂತಾದವರು. ಭಾರತದ ಸೇನಾದಳಗಳನ್ನು ಆಕರ್ಷಿಸುವುದು, ಪೇಷಾವರಿನಿಂದ ಚಿತ್ತಾಗಾಂಗ್‌ವರೆಗೆ ಉದ್ದಕ್ಕೂ ಪೋಲೀಸ್ ಲೈನ್‌ಗಳ ಮೇಲೆ ಟ್ರಜರಿಗಳ ಮೇಲೆ ಏಕಕಾಲದಲ್ಲಿ ಆಕ್ರಮಣ ಮಾಡುವುದು ಮತ್ತು ಅಂತಿಮವಾಗಿ ಜರ್ಮನ್ ಶಸ್ತ್ರಾಸ್ತ್ರಗಳೊಂದಿಗೆ ಬ್ರಿಟಿಷರ ಮೇಲೆ ಯುದ್ಧ ಘೋಷಣೆ ಮಾಡುವುದು- ಇದು ಹಂಚಿಕೆಯ ಮುಖ್ಯ ಅಂಶಗಳಾಗಿದ್ದುವು. ದುರದೃಷ್ಟವಶಾತ್ 1915 ಫೆಬ್ರವರಿ 21ರಂದು ನಡೆಯಬೇಕಾಗಿದ್ದ ಕ್ರಾಂತಿ ವಿಫಲವಾಗಿ ಹೋಯಿತು. ಒಳಸಂಚಿನ ಮುಖ್ಯ ವ್ಯಕ್ತಿಗಳಲ್ಲಿ ಒಬ್ಬನಾದ ವಿ.ಜಿ. ಪಿಂಗ್ಲೆಯನ್ನು ಮೀರುತ್ತಿನಲ್ಲಿ ಕುದುರೆಯ ಸೈನಿಕರ ಠಾಣ್ಯದಲ್ಲಿ ಬಾಂಬುಗಳ ಸಹಿತವಾಗಿ ಬಂಧಿಸಲಾಯಿತು. ಕ್ರಾಂತಿಕಾರರ ದಳಗಳನ್ನು ಚೆದುರಿಸಲಾಯಿತು. ಒಳಸಂಚು ಮಾಡಿದವರಲ್ಲಿ ಅನೇಕರನ್ನು ಗಲ್ಲಿಗೇರಿಸಲಾಯಿತು. ಅಲ್ಲವೇ ಅಂಡಮಾನಿಗೆ ಗಡೀಪಾರು ಮಾಡಲಾಯಿತು. ರಾಶ್‌ಬೆಹಾರಿ ಬೋಸ್ ಜಪಾನಿಗೆ ತಪ್ಪಿಸಿಕೊಂಡು ಹೋದನು.

ಜತೀನ್ ಮುಖರ್ಜಿಯಾದರೋ ಇನ್ನು ಹೆಚ್ಚಿನ ಆಸೆಯಿಂದ ಆಗ ಬಿಡಿ ಬಿಡಿಯಾದ ಕೊಲೆ ನಡೆಸುವ ಕೆಲಸವನ್ನು ನಿಲ್ಲಿಸಿದನು. ರೊಡ್ಡಾ ಎಂಡ್ ಕಂಪನಿಗೆಂದು ಬಂದಿದ್ದ ಒಂದು ರಾಶಿ ಮೊಸೆರ್ ಪಿಸ್ತೂಲುಗಳು ಹದವಾಗಿ ಸಿಕ್ಕಿದುವು. ಜರ್ಮನಿಯಿಂದ ಬಂದಿದ್ದ ಶಸ್ತ್ರಾಸ್ತ್ರಗಳನ್ನು ಇಳಿಸಿಕೊಳ್ಳಲು ಕಾದಿದ್ದ ಐದು ಜನ ಬಂಗಾಳಿ ಭಯೋತ್ಪಾದಕರಿಗೂ ಆಯುದಧಾರೀ ಪೋಲೀಸ್‌ರ ಒಂದು ಪಡೆಗೂ ಬಾಲಸೋರ್ (Balasore) ನಲ್ಲಿ ಬೂರಿಬಲಮ್ ನದಿಯ ದಂಡೆಯ ಮೇಲೆ ಒಂದು ಸ್ಮರಣೀಯ ಕಾಳಗ ನಡೆಯಿತು. ಈ ಕಾಳಗದಲ್ಲಿ ಕಂದಕವೊಂದರಿಂದ ವೀರಾವೇಶವಾಗಿ ಯುದ್ಧಮಾಡುತ್ತಿದ್ದ ಜತೀಂದ್ರನಾಥನು ಗುಂಡೇಟಿನ ಗಾಯದಿಂದ ಮೃತನಾದರು.

ಯುದ್ಧಾಕಾಲದ ಕ್ರಾಂತಿ ಚಟುವಟಿಕೆಗಳು ವಿಫಲವಾದುದಕ್ಕೆ ಕಾರಣಗಳು ಇವು : ಭಾರತೀಯ ನಾಯಕರ ನಡುವೆ ಹೊಂದಾಣಿಕೆಯಿಲ್ಲದುದು ; ಭಾರತೀಯ ಕ್ರಾಂತಿಕಾರರು, ಬರ್ಲಿನ್ ಸಮಿತಿ ಮತ್ತು ಘದರ್ ಪಕ್ಷಗಳ ನಡುವೆ ಸಂಪರ್ಕ ಸರಿಯಾಗಿರಲಿಲ್ಲವಾದುದು ಮೊದಲಿನಿಂದಲೂ ಸಂದೇಹಗ್ರಸ್ತವಾಗಿದ್ದ ಸರಕಾರ ಶಸ್ತ್ರಾಸ್ತ್ರಗಳನ್ನು ಹಡಗಿಗೆ ತುಂಬಿ ಕಳುಹಿಸುವುದನ್ನು ನಿಲ್ಲಸಬೇಕೆಂದು ಅಮೇರಿಕಾದ ಅಧಿಕಾರಿಗಳನ್ನು ಕೇಳಿಕೊಂಡಿತು. ಅಮೇರಿಕವು ಜರ್ಮನಿಯ ವಿರುದ್ಧವಾಗಿ ಮಿತ್ರರಾಷ್ಟ್ರಗಳೊಂದಿಗೆ ಸೇರಿಕೊಂಡಮೇಲೆ, ಅಲ್ಲಿ ಯಾವ ಚಟುವಟಿಕೆಯೂ ಇನ್ನೂ ನಡೆಯದಾಯಿತು. ಸಾನ್‌ಫ್ರಾನ್ಸಿಸ್ಕೋದಲ್ಲಿ ಘದರ್ ನಾಯಕರ ವಿಚಾರಣೆ ನಡೆದು, ಇನ್ನು ಮುಂದೆ ಅಮೆರಿಕದಲ್ಲಿ ನೆಲ್ಲೆಗೊಂಡು ಯಾವ ಕ್ರಾಂತೀಕಾರಿ ಚಟುವಟಿಕೆಯೂ ನಡೆಯುವ ಸಾಧ್ಯತೆಯೇ ಇಲ್ಲದಂತೆ ಅಳಿಸಿಹಾಕಲಾಯಿತು.

## 11.6 ಉಪಸಂಹಾರ

ನಮ್ಮ ಸ್ವಾತಂತ್ರ್ಯ ಹೋರಾಟದ ಇತಿಹಾಸಕ್ಕೆ ಈ ಭಯೋತ್ಪಾದಕ ಕ್ರಾಂತಿಕಾರಿಗಳು ವರ್ಣರಂಜಿತವೂ ಸ್ಫೂರ್ತಿದಾಯಕವೂ ಆದ ಒಂದು ಅಧ್ಯಾಯವನ್ನು ಸೇರಿಸಿದರು. ಅವರ ಹತಾಶೆಯ ಹುಚ್ಚು ಸಾಹಸಗಳು, ದಿಟ್ಟತನದ ಯೋಜನೆಗಳು, ನಿರುದ್ವಿಗ್ನವಾದ ಕಾರ್ಯಾಚಟುವಟಿಕೆ, ಸಾವನ್ನು ಕುರಿತ ಅಲಕ್ಷ್ಯ - ಇವು ರಾಷ್ಟ್ರದ ನೆನಪಿನಲ್ಲಿ ಚಿರವಾಗಿ ಉಳಿಯುವಂತಹ ಸ್ಥಾನವನ್ನು ಅವರಿಗೆ ದೊರಕಿಸಿಕೊಟ್ಟವು. ಆದರೆ ಅವರ ಆದರ್ಶ, ಅವರ ಕ್ಲೇಶ ಎಷ್ಟೇ ಇದ್ದರೂ ಸೋಲು ಅವರಿಗೆ ಸಿದ್ಧವಾದುದಾಗಿತ್ತು. ವೈಯಕ್ತಿಕವಾಗಿ ನಡೆಸಿದ ಹಿಂಸಾಕೃತ್ಯಗಳು ಅವೆಷ್ಟೇ ವೀರತನದಿಂದ ಕೂಡಿರಲಿ, ಜನಸಾಮಾನ್ಯರನ್ನು ಆಕರ್ಷಿಸಲಿಲ್ಲ. ಅಧಿಕಾರದ ಶಿಖರದಲ್ಲಿದ್ದ ಸಾಮ್ರಾಜ್ಯಶಾಹೀ ಬಹಳ ಸುಲಭವಾಗಿ ಅವರನ್ನು ಹಿಡಿಯಬಹುದಾಗಿತ್ತು. ಒಳಸಂಚು ದ್ರೋಹದ ಮೊಕದ್ದಮೆಗಳು, ತೀವ್ರವಾದ ದಂಡನೆಗಳು, ಕ್ರೂರವಾದ ಕಾನೂನುಗಳು ಅವರ ಬೆನ್ನು ಮುರಿದುವು. ವರ್ತಮಾನ ಪತ್ರಿಕೆಯ (ಅಪರಾಧಗಳಿಗೆ ಪ್ರಚೋಧನೆ) ಶಾಸನ, ಅಪರಾಧಗಳ ಕಾನೂನು ತಿದ್ದುಪಡಿ ಶಾಸನ, ಸಿಡಿಮದ್ದುಗಳನ್ನು ಕುರಿಕ ಶಾಸನ, ಭಾರತೀಯ ವೃತ್ತಪತ್ರಿಕಾ ಶಾಸನ - ಇವು ಅಧಿಕಾರಶಾಹಿಯ ಬತ್ತಳಿಕೆಯ ಹೊಸ ಭಾಣಗಳಾದವು. ಎರಡನೆಯದಾಗಿ ಬಹುಮಟ್ಟಿಗೆ ಭಯೋತ್ಪಾದಕರು ಒಂದು ಸಮಾನ ಯೋಜನೆಯಾಗಲಿ, ಒಂದು ಕೇಂದ್ರ ನಾಯಕತ್ವವಾಗಲಿ ಇಲ್ಲದೆ ಪರಸ್ಪರ ವಿರುದ್ಧ ಉದ್ದೇಶಗಳಿಂದ ಕೆಲಸ ಮಾಡುತ್ತಿದ್ದರು. ಮೂರನೆಯದಾಗಿ, ಜನತೆಯಲ್ಲಿ ಅವರಿಗೆ ಆಧಾರವಿರಲಿಲ್ಲ. ರಹಸ್ಯ ಸಂಸ್ಥೆಗಳಾಗಿದ್ದುದರಿಂದ ಅವರು ಜನರನ್ನು ತಮ್ಮ ನಂಬುಗೆಗೆ ತೆಗೆದುಕೊಳ್ಳಲು ಸಾಧ್ಯವಿರಲಿಲ್ಲ, ಸಮಿತಿಗಳಲ್ಲಿ ಮುಖ್ಯವಾಗಿ ಮಧ್ಯಮ ವರ್ಗದ ವಿದ್ಯಾವಂತ ಜನರು, ರೈತರು ಮತ್ತು ಕಾರ್ಮಿಕರ ಸಂಪರ್ಕವೇ ಇಲ್ಲದ ಜನ ಇದ್ದರು ಎಂಬುದನ್ನು ನೆನಪಿನಲ್ಲಿಡಬೇಕು. ಮಿತಗಾಮಿಗಳು ಬಹಿರಂಗವಾಗಿ ಅವರನ್ನು ಕೈಬಿಟ್ಟರು. ಅನೇಕ ತೀವ್ರಗಾಮಿಗಳು ಅವರನ್ನು ಸ್ವೀಕರಿಸಲು ಹಿಂದು ಮುಂದು ನೋಡುತ್ತಿದ್ದರು.

ಆದರೆ ಅಷ್ಟುಮಟ್ಟಿಗೆ ಪೂರ್ಣವಾದ ಬಲಿದಾನ ಯಾವುದೂ ವ್ಯರ್ಥವಾಗಿ ಹೋಗುವುದಿಲ್ಲವಷ್ಟೇ. ಭಯೋತ್ಪಾದಕರನ್ನು ಕೆಲವರು ಮೂರ್ಖರು ಎಂದು ಕರೆದರೆ, ಇನ್ನು ಕೆಲವರು ವೀರರು ಎಂದರು. ದೇಶವು ಆ ಹುತಾತ್ಮರ ನೆನಪನ್ನೇ ಮೆಲುಕು ಹಾಕಿತು. ಏಕೆಂದರೆ "ನಮ್ಮ ಮಾನವತ್ವದ ಅಭಿಮಾನವನ್ನು ಅವರು ನಮಗೆ ತಂದು ಕೊಟ್ಟರು"

## 11.7 ಮಾದರಿ ಪ್ರಶ್ನೆಗಳು

(1) ಕ್ರಾಂತಿಕಾರಿ ಭಯೋತ್ಪಾದನೆಯು ಬೆಳೆಯಲು ಕಾರಣವಾದ ಅಂಶಗಳನ್ನು ವಿಶ್ಲೇಷಿಸಿ

(2) ರಾಷ್ಟ್ರೀಯ ಆಂದೋಲನದ ಇತಿಹಾಸದಲ್ಲಿ ಕ್ರಾಂತಿಕಾರಿಗಳ ಪಾತ್ರವನ್ನು ಚರ್ಚಿಸಿ

## 11.8 ಪರಾಮರ್ಶನ ಕೃತಿಗಳು


(1) Seetha Ramaiah - History of Indian National congress

(2) Sumith Sartar - Modern India (1857-1947)

(3) Burton Stein - Indian History.


ಡಾ. ಸುಗೀತಾ ಸುವರ್ಣ

# ಘಟಕ : 12 ಹೋಂ ರೂಲ್ ಚಳುವಳಿ

ವಿಷಯಸೂಚಿ

## 12.0 ಉದ್ದೇಶಗಳು

ಈ ಘಟಕದ ಅಧ್ಯಯನದ ಉದ್ದೇಶ ಬ್ರಿಟಿಷರ ಆಳ್ವಿಕೆಯ ವಿರುದ್ಧ ನಡೆಸಿದ ಭಾರತೀಯ ಹೋಂರೂಲ್ ಚಳುವಳಿಯು ಐಸಾಮರಾಣಿ ಆಂದೋಲನ ಜನರ ರಾಷ್ಟ್ರೀಯತೆ ಮತ್ತು ಸ್ವಯಂ ಆಡಳಿತದ ಬಗ್ಗೆ ಒತ್ತು ನೀಡಿ ಭಾರತದಲ್ಲಿ ಹೋಂರೂಲ್ ಪ್ರಾರಂಭವಾಗಬೇಕೆಂದು ಚಳುವಳಿ ನಡೆಸಿದ ತಿಲಕ್ ಅನಿಬೆಸೆಂಟ್ ಮುಸ್ಲಿಂ ಲೀಗ್ ಮುಂತಾದವರು ಈ ಚಳುವಳಿಯನ್ನು ಪಾಲ್ಗೊಂಡರು ಎಂಬುದನ್ನು ತಿಳಿಯುವುದಾಗಿದೆ.

## 12.1 ಪೀಠಿಕೆ

ಭಾರತೀಯರು ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆಯಲು ಹೋರಾಟ ನಡೆಸಿ ಮಂದಗಾಮಿಗಳ ಕಾಲದಲ್ಲಿ ವಿಫುಲರಾಗಿದ್ದರು. ತೀವ್ರಗಾಮಿಗಳು ಇದರ ಹೋರಾಟವನ್ನು ಮುಂದುವರಿಸಿದ್ದರು. ಇದೇ ಸಂದರ್ಭದಲ್ಲೇ ಹೋಂರೂಲ್ ಚಳುವಳಿಯನ್ನು ತಿಲಕರ 1916ರಲ್ಲಿ ಪ್ರಾರಂಭಿಸಿದರು. ಇದರ ಉದ್ದೇಶ ಸ್ವಯಂ ಆಡಳಿತರಾಗಿದ್ದು ಈ ಹೋರಾಟದಲ್ಲಿ ಶ್ರೀಮತಿ ಅನಿಬೆಸೆಂಟ್‌ರವರನ್ನು ಒಂದು ಸೇರಿದ್ದು ಈಚಳುವಳಿಗೆ ಬಾಲ ಬಂದಂತಾಗಿತ್ತು. ಇದೊಂದು ರಾಷ್ಟ್ರವ್ಯಾಪಿ ಚಳುವಳಿಯಾಯಿತು. ನಂತರ ಕೊನೆಗೆ ಕಾಂಗ್ರೆಸ್‌ನೊಂದಿಗೆ ವಿಲೀನವಾಯಿತು. ಈ ಚಳುವಳಿಯು ವಿಸ್ತಾರವಾಗಿ ಈ ಘಟಕದಲ್ಲಿ ತಿಳಿಯಲಾಗುವುದು.

## 12.2 ಹೋಂ ರೂಲ್ ಚಳುವಳಿ

20ನೇ ಶತಮಾನದ ಎರಡನೇ ದಶಕದ ವೇಳೆಗೆ ಯೂರೋಪಿನ ಮೇಲೆ ಯುದ್ಧದ ಕಾರ್ಮೋಡಗಳು ಕಾಣಿಸಿಕೊಂಡವು. 1914ರ ಜೂನ್ ತಿಂಗಳಿನಲ್ಲಿ ಪ್ರಥಮ ಮಹಾಯುದ್ಧವು ಪ್ರಾರಂಭವಾಯಿತು. ಅದರ ಪ್ರಭಾವ ಭಾರತದ ಸ್ವಾತಂತ್ರ್ಯ ಚಳುವಳಿಯ ಮೇಲೂ ಕಂಡು ಬಂದಿತು. 1914ರ ಜುಲೈ ತಿಂಗಳ 16ರಂದು 6 ವರ್ಷಗಳ ಕಾರಾಗೃಹ ಶಿಕ್ಷೆಯನ್ನು ಅನುಭವಿಸಿದ ಬಾಲಗಂಗಾಧರ ತಿಲಕರ ಬಿಡುಗಡೆಯಾಯಿತು. ಅವರೂ ಸೇರಿದಂತೆ ಅನೇಕ ರಾಷ್ಟ್ರೀಯವಾದಿಗಳು ಯುದ್ಧಕಾಲದಲ್ಲಿ ಗ್ರೇಟ್ ಬ್ರಿಟನ್ ಭಾರತೀಯರ ರಾಜಕೀಯ ಬೇಡಿಕೆಗಳನ್ನು ಈಡೇರಿಸುತ್ತದೆಂಬ ಆಶಾಭಾವನೆಯನ್ನು ಹೊಂದಿದ್ದರು. ಆದರೆ ಗ್ರೇಟ್ ಬ್ರಿಟನ್ ಮತ್ತು ಅದರ ಮಿತ್ರ ರಾಷ್ಟ್ರಗಳು ಹಾಗೂ ಜರ್ಮನಿ ಮತ್ತು ಅದರ ಮಿತ್ರರಾಷ್ಟ್ರಗಳು ಪರಸ್ಪರ ಹೋರಾಡುತ್ತಿರುವುದು ತಮ್ಮ ವೈಯಕ್ತಿಕ ಹಿತಾಸಕ್ತಿಗಳ ರಕ್ಷಣೆಗಾಗಿ ಎಂಬ ಮಾರ್ಮಿಕ ಸತ್ಯದ ಅರಿವು ಮೊದಲನೆ ಮಹಾಯುದ್ಧ ಪ್ರಾರಂಭದಲ್ಲಿ ಭಾರತದ ರಾಜಕೀಯ ಮುಂಖಡರಿಗೆ ಅರಿವಾಗಲಿಲ್ಲ. ಯೂರೋಪಿನ ವಸಾಹತುಶಾಹಿ ರಾಷ್ಟ್ರಗಳ ನಡುವಿನ ಯುದ್ಧದಿಂದಾಗಿ ಭಾರತೀಯರು ಹಲವು ಸಮಸ್ಯೆಗಳನ್ನು ಎದುರಿಸಬೇಕಾಯಿತು.

ದಿನನಿತ್ಯದ ಬಳಕೆಯ ಅಗತ್ಯ ವಸ್ತುಗಳ ಬೆಲೆಯಲ್ಲಿ ಗಣನೀಯ ಹೆಚ್ಚಳವು ಕಂಡು ಬಂದಿತು. ತೆರಿಗೆಯ ಏರಿಕೆಯಿಂದಾಗಿ ಜನಸಾಮಾನ್ಯರ ಬದುಕು ಕಠಿಣವಾಯಿತು. ಹೀಗಾಗಿ ತೀವ್ರವಾದ ಅಸಮಾಧಾನವನ್ನು ಹೊಂದಿದ್ದ ಭಾರತೀಯರು ಯಾವುದೇ ರೀತಿಯ ವಸಾಹತುಶಾಹಿ ಆಡಳಿತದ ಪ್ರಭುತ್ವದ ವಿರುದ್ಧ ಚಳುವಳಿಯನ್ನು ಬೆಂಬಲಿಸಲು ಸಿದ್ಧರಿದ್ದರು. ಅಲ್ಲದೇ ವಸಾಹತುಶಾಹಿ ಸರ್ಕಾರದ ಮೇಲೆ ರಾಜಕೀಯ ಒತ್ತಡವನ್ನು ತರದಿದ್ದಲ್ಲಿ ಗ್ರೇಟ್ ಬ್ರಿಟನ್ ರಾಷ್ಟ್ರವು ಭಾರತೀಯರ ಯಾವುದೇ ರಾಜಕೀಯ ಬೇಡಿಕೆಗಳನ್ನು ಈಡೇರಿಸುವುದಿಲ್ಲವೆಂಬುದು ರಾಷ್ಟ್ರೀಯವಾದಿಗಳಿಗೂ ಅರಿವಾಗಿತ್ತು. ಅಂತಹ ರಾಜಕೀಯ ಚಳುಳಿಯನ್ನು ಪ್ರಾರಂಭಿಸುವ ಸಾಮರ್ಥ್ಯ ಮಂದಗಾಮಿಗಳ ಹಿಡಿತದಲ್ಲಿದ್ದ ಕಾಂಗ್ರೆಸ್ಸಿಗೆ ಇರಲಿಲ್ಲ. ಹೀಗಾಗಿ ವಸಾಹತು ಶಾಹಿ ವ್ಯವಸ್ಥೆಯ ವಿರುದ್ಧ ವಿನೂತನ ರಾಜಕೀಯ ಚಳುಳಿಯನ್ನು ಸಂಘಟಿಸುವ ಜವಾಬ್ದಾರಿಯನ್ನು ಬಾಲಗಂಗಾಧರ ತಿಲಕ ಮತ್ತು ಶ್ರೀಮತಿ ಅನಿಬೆಸೆಂಟರು ಹೊರಬೇಕಾಯಿತು. ಈ ಕಾರಣದಿಂದಾಗಿ ಪ್ರಥಮ ಮಹಾ ಯುದ್ಧದ ಅವಧಿಯಲ್ಲಿ ಹೋಂ ರೂಲ್ ಚಳುವಳಿಯನ್ನು ಪ್ರಾರಂಭಿಸಲಾಯಿತು.

1916ರ ಏಪ್ರಿಲ್ 28ರಂದು ಬಾಲಗಂಗಾಧರ ತಿಲಕ್ ಮತ್ತಿತರರು ಪೂಣೆಯಲ್ಲಿ ಹೋಂ ರೂಲ್ ಲೀಗನ್ನು ಸ್ಥಾಪಿಸಿದರು. ಬ್ಯಾರಿಸ್ಟರ್ ಬ್ಯಾಪ್ಟಿಸ್ಟಾ ಅದರ ಪ್ರಥಮ ಅಧ್ಯಕ್ಷರಾದರು. ಸ್ವಯಮಾಡಳಿತಕ್ಕೆ ಹೋರಾಡುವುದು ಹೋಂ ರೂಲ್ ಲೀಗಿನ ಗುರಿಯಾಗಿತ್ತು. "ಸ್ವಯಾಮಾಡಳಿತ ನನ್ನ ಜನ್ಮ ಸಿದ್ಧ ಹಕ್ಕು" ಎಂಬ ಬಾಲಗಂಗಾಧರ ತಿಲಕರ ಘೋಷಣೆ ಜನಪ್ರಿಯವಾಯಿತು. ಅದೇ ವರ್ಷ ಶ್ರೀಮತಿ ಅನಿಬೆಸೆಂಟ್ ಮದ್ರಾಸ್ (ಆಡ್ಯಾರ್)ನಲ್ಲಿ ಹೋಂ ರೂಲ್ ಲೀಗಿನ ಕೇಂದ್ರ ಶಾಖೆಯನ್ನು ಸ್ಥಾಪಿಸಿದರು. ಅವರೊಂದಿಗೆ ಜಿ. ಸುಬ್ರಮಣ್ಯ ಅಯ್ಯರ್ ಸಹಕರಿಸಿದರು. ಶ್ರೀಮತಿ ಅನಿಬೆಸೆಂಟರು ಅದರ ಅಧ್ಯಕ್ಷರಾಗಿಯೂ ಶ್ರೀಮತಿ ಅರುಂಡೇಲ್ ಅದರ ವ್ಯವಸ್ಥಾಪಕ ಕಾರ್ಯದರ್ಶಿಯಾಗಿಯೂ ಆಗಿ ನಿಯುಕ್ತರಾದರು. ಸಿ.ಪಿ.ರಾಮಸ್ವಾಮಿ ಐಯ್ಯರ್ ಅದರ ಒಬ್ಬ ಪ್ರಧಾನ ಕಾರ್ಯದರ್ಶಿಯಾದರು ಹಾಗೂ ಬಿ.ಪಿ. ವಾಡಿಯಾ ಖಜಾಂಚಿಯಾದರು.

## 12.3 ಶ್ರೀಮತಿ ಅನಿಬೆಸೆಂಟ್ (1847-1933) ಪಾತ್ರ

ಕ್ರಿ.ಶ. 1847 ರ ಅಕ್ಟೋಬರ್ ತಿಂಗಳಿನಲ್ಲಿ ಲಂಡನ್ನಿನ ಅನಿಬೆಸೆಂಟರು ಜನಿಸಿದರು. ಇವರ ತಂದೆ ಮಿಸ್ಟರ್ ಪೇಜ್‌ವುಡ್. ತನ್ನ 20ನೇ ವಯಸ್ಸಿನಲ್ಲಿ ರೆವರೆಂಡ್ ಫ್ರಾಂಕ್ ಬೆಸೆಂಟರನ್ನು ವಿವಾಹವಾದರು. ಆದರೆ ಅವರ ಈ ವೈವಾಹಿಕ ಜೀವನ ಸುಗಮವಾಗಿರಲಿಲ್ಲ. 1873ರಲ್ಲಿ ಅವರು ಪತಿಯಿಂದ ಬೇರೆಯಾದರು. ಆನಂತರ ಸ್ವತಂತ್ರ ಚಿಂತನೆಯನ್ನು ರೂಢಿಸಿಕೊಂಡ ಅವರು 11 ವರ್ಷಗಳ ಕಾಲ ಗ್ರೇಟ್ ಬ್ರಿಟನ್ನಿನ ಸಮಾಜವಾದಿಯಾಗಿದ್ದ ಚಾರ್ಲ್ಸ್‌ಬ್ರಾಡ್‌ಲಾ ಜೊತೆಗೂಡಿ ಕಾರ್ಯವನ್ನು ನಿರ್ವಹಿಸಿದರು. ಅಲ್ಲದೆ ಬ್ರಾಡ್‌ಲಾರ "ನ್ಯಾಶನಲ್ ರಿಫಾರ್ಮರ್" ಪತ್ರಿಕೆಯಲ್ಲಿಯೂ ಕೆಲಸವನ್ನು ನಿರ್ವಹಿಸಿದರು. "ಅಜಾಕ್ಸ್" ಎಂಬ ಹೆಸರಿನಲ್ಲಿ ಲೇಖನವನ್ನು ಬರೆಯುತ್ತಿದ್ದರು. ಕ್ರಮೇಣ ಕ್ರಾಂತಿಕಾರಿ ಸಮಾಜವಾದಿಯಾಗಿ ಪರಿವರ್ತನೆಗೊಂಡ ಅವರು ಸೌಮ್ಯ ಸಮಾಜವಾದಿಯಾಗಿದ್ದ ಚಾರ್ಲ್ಸ್ ಬ್ರಾಡಲಾನಿಂದ ದೂರವಾದರು. 1884ರಲ್ಲಿ ಅವರು ಗ್ರೇಟ್ ಬ್ರಿಟನ್ನಿನಲ್ಲಿ ಖ್ಯಾತನಾಮರಾಗಿದ್ದ ಸಿಡ್ನಿವೆಬ್, ಜಾರ್ಜ್, ಬರ್ನಾಡ್ ಷಾ ಮತ್ತು ಇತರರೊಂದಿಗೆ "ಫ್ಯಾಬಿಯನ್ ಸಂಘ"ದ ಪರವಾಗಿ ಕೆಲಸಗಳನ್ನು ನಿರ್ವಹಿಸಿದರು. 1886ರಲ್ಲಿ ಮೇಡಮ್ ಬ್ಲಾವಟ್‌ಸ್ಕಿಯ ಪ್ರಭಾವಕ್ಕೊಳಗಾಗಿ "ಥಿಯೋಸೋಫಿಕಲ್ ಸೊಸೈಟಿ"ಯನ್ನು ಸೇರಿದರು. 1893ರಲ್ಲಿ ಭಾರತಕ್ಕೆ ಬಂದ ಅವರು ಭಾರತೀಯ ಧರ್ಮ ಮತ್ತು ಸಂಸ್ಕೃತಿಯ ಪ್ರಭಾವಕ್ಕೊಳಗಾದರು.

ಶ್ರೇಷ್ಠ ವಾಗ್ಮಿಯಾಗಿದ್ದ ಶ್ರೀಮತಿ ಅನಿಬೆಸೆಂಟರು ಭಾರತದ ಯುವ ಜನಾಂಗದಲ್ಲಿ ತಮ್ಮ ಸಂಸ್ಕೃತಿ ಮತ್ತು ಧರ್ಮದ ಶ್ರೇಷ್ಠತೆಯ ಬಗ್ಗೆ ಅರಿವು ಮೂಡಿಸುವ ಪ್ರಯತ್ನಗಳನ್ನು ನಡೆಸಿದರು. 1907ರಲ್ಲಿ ಥಿಯೋಸೋಫಿಕಲ್ ಸೊಸೈಟಿಯ ಅಧ್ಯಕ್ಷರಾದರು. ಶಿಕ್ಷಣ ಪ್ರಸಾರಕ್ಕೆ ಆದ್ಯತೆ ನೀಡಿದ ಅವರು ಬೆನಾರಸ್‌ಲ್ಲಿ ಸೆಂಟ್ರಲ್ ಹಿಂದೂ ಕಾಲೇಜನ್ನು ಸ್ಥಾಪಿಸಿದರು. ಭಾರತಕ್ಕೆ ಸ್ವಯಮಾಡಳಿತವನ್ನು ನೀಡುವಂತೆ ಬ್ರಿಟೀಷ್ ಭಾರತ ಸರ್ಕಾರವನ್ನು ಒತ್ತಾಯಿಸಿದರು. ಬ್ರಿಟೀಷ್ ಸಾಮ್ರಾಜ್ಯದೊಳಗೆ ಭಾರತವು ಸ್ವಯಮಾಡಳಿತವನ್ನು ಪಡೆಯಬೇಕೆಂದು ಅವರ ಅಪೇಕ್ಷೆಯಾಗಿತ್ತು. 1914ರಲ್ಲಿ "ಕಾಮನ್‌ವ್ಹೀಲ್" ಎಂಬ ವಾರ ಪತ್ರಿಕೆಯನ್ನು ಮತ್ತು "ನ್ಯೂ ಇಂಡಿಯಾ" ಎಂಬ ದಿನಪತ್ರಿಕೆಯನ್ನು ಆರಂಭಿಸಿದರು.

1915ರಲ್ಲಿ ನಡೆದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಅನಿಬೆಸೆಂಟ್ ಹೋಂ ರೂಲ್ ಚಳುವಳಿಯನ್ನು ಆರಂಭಿಸುವ ಪ್ರಸ್ತಾಪವನ್ನು ಮಂಡಿಸಿದರು. ಆದರೆ ಕಾಂಗ್ರೆಸ್ಸಿನ ಬೆಂಬಲವು ಅದಕ್ಕೆ ದೊರೆಯಲಿಲ್ಲ. 1916ರ ಸೆಪ್ಟೆಂಬರ್ 1ರಂದು ಮದರಾಸಿನಲ್ಲಿ ಹೋಂ ರೂಲ್ ಲೀಗನ್ನು ಸ್ಥಾಪಿಸಿದರು. ಬಾಲಗಂಗಾಧರ ತಿಲಕರ ನೇತೃತ್ವದಲ್ಲಿ ಪೂನೆಯಲ್ಲಿನ ಹೋಂರೂಲ್ ಮತ್ತು ಮದರಾಸಿನ ಹೋಂ ರೂಲ್, ಎರಡೂ ಲೀಗ್‌ಗಳು ಪರಸ್ಪರ ಸಹಕರಿಸಿ ಕಾರ್ಯವನ್ನು ನಿರ್ವಹಿಸಿದವು. ಬಾಲಗಂಗಾಧರ ತಿಲಕರು, ತಮ್ಮ ಹೋಂ ರೂಲ್ ಚಳುವಳಿಯನ್ನು ಬೊಂಬಾಯಿ ಪ್ರಾಂತ್ಯ, ಕರ್ನಾಟಕ (ಈಗೀನ ಉತ್ತರ ಕರ್ನಾಟಕದ ಜಿಲ್ಲೆಗಳು) ಮತ್ತು ಕೇಂದ್ರ ಪ್ರಾಂತ್ಯಗಳಿಗೆ ಸೀಮಿತಗೊಳಿಸಿದರು. ಭಾರತದ ಉಳಿದ ಭಾಗಗಳಲ್ಲಿ ಶ್ರೀಮತಿ ಅನಿಬೆಸೆಂಟರು ತಮ್ಮ ಚಳುವಳಿಯನ್ನು ನಡೆಸಿದರು. ಬಾಲಗಂಗಾಧರ ತಿಲಕರ ಹೋಂ ರೂಲ್ ಲೀಗಿನ ಸದಸ್ಯರ ಸಂಖ್ಯೆ 1914ರ ಏಪ್ರಿಲ್‌ನಲ್ಲಿ 14,000ಇದ್ದದ್ದು 1918ರ ವೇಳೆಗೆ 32,000ಕ್ಕೆ ಏರಿತು. ಶ್ರೀಮತಿ ಅನಿಬೆಸೆಂಟರ ಲೀಗ್ ದೇಶಾದ್ಯಂತ ಸುಮಾರು 200ಕ್ಕೂ ಹೆಚ್ಚಿನ ಶಾಖೆಗಳನ್ನು ಹೊಂದಿತು. 1917ರ ಮಧ್ಯಭಾಗದಲ್ಲಿ ಅದರ ಒಟ್ಟು ಸದಸ್ಯರ ಸಂಖ್ಯೆ 27,000.

ಬಾಲಗಂಗಾಧರ ತಿಲಕರು ದೇಶದಾದ್ಯಂತ ಪ್ರವಾಸವನ್ನು ಕೈಗೊಂಡು ನೂರಾರು ಸಭೆಗಳಲ್ಲಿ ಜನರನ್ನುದ್ದೇಶಿಸಿ ಭಾಷಣ ಮಾಡಿದರು. ಅವರ ಶ್ರೇಷ್ಠ ವ್ಯಕ್ತಿತ್ವ ಮತ್ತು ತ್ಯಾಗ ಮನೋಭಾವ ಅಪಾರ ಜನರನ್ನು ಅವರತ್ತ ಆಕರ್ಷಿಸಿತು. ಶ್ರೀಮತಿ ಅನಿ ಬೆಸೆಂಟರು ಕೂಡಾ ದೇಶದ ವಿವಿಧ ಭಾಗಗಳಲ್ಲಿ ಪ್ರಚಾರವನ್ನು ಕೈಗೊಂಡರು. ತಮ್ಮ ಪತ್ರಿಕೆಗಳಾದ "ಕಾಮನ್‌ವ್ಹೀಲ್" ಮತ್ತು "ನ್ಯೂ ಇಂಡಿಯಾ" ಹಾಗೂ ಬೊಂಬಾಯಿ ನಗರದಲ್ಲಿ ಅವರ ಅನುಯಾಯಿಗಳಾಗಿದ್ದ ಶಂಕರ್ ಲಾಲ್ ಬ್ಯಾಂಕರ್, ಇಂದುಲಾಲ್ ಯಾಜ್ಞಿಕ್ ಮತ್ತು ಜಮ್ನಾದಾಸ್ ದ್ವಾರಕಾದಾಸ್ ಪ್ರಾರಂಭಿಸಿದ್ದ "ಯಂಗ್ ಇಂಡಿಯಾ" ಪತ್ರಿಕೆಗಳನ್ನು ಹೋಂ ರೂಲ್‌ನ ಪ್ರಚಾರಕ್ಕಾಗಿ ಬಳಸಿಕೊಂಡರು. ಇಂಗ್ಲೀಷ್ ಮತ್ತು ಭಾರತೀಯ ಭಾಷೆಗಳಲ್ಲಿ ಸ್ವಯಮಾಡಳಿತದ ಬೇಡಿಕೆಗಳನ್ನು ಸಮರ್ಥಿಸುವ ಕರಪತ್ರಗಳನ್ನು ಮುದ್ರಿಸಿ ಹಂಚಲಾಯಿತು. ಜನರು ಉತ್ಸಾಹದಿಂದ ಚಳುವಳಿಯಲ್ಲಿ ಪಾಲ್ಗೊಂಡರು. ಬಾಲಗಂಗಾಧರ ತಿಲಕರು ಸ್ವದೇಶಿ ಮತ್ತು ಬಹಿಷ್ಕಾರ ಚಳುವಳಿಯನ್ನು ಬೆಂಬಲಿಸಿದರು.

ಹೋಂ ರೂಲ್ ಚಳುವಳಿಯ ಜನಪ್ರಿಯತೆಯಿಂದ ಆತಂಕಗೊಂಡ ವಸಾಹತುಶಾಹಿ ಸರ್ಕಾರ ಕಠಿಣ ಕ್ರಮಗಳ ಮೂಲಕ ಅದನ್ನು ಹತ್ತಿಕ್ಕಲು ಯತ್ನಿಸಿತು. 1916ರ ಜುಲೈ 23ರಂದು ಬಾಲಗಂಗಾಧರ ತಿಲಕರ 60ನೇ ಹುಟ್ಟುಹಬ್ಬವನ್ನು ಆಚರಿಸಲಾಯಿತು. ಅಂದು ಅವರ ಅಭಿಮಾನಿಗಳು 1ಲಕ್ಷ ರೂಪಾಯಿಗಳನ್ನು ಅವರಿಗೆ ಕೊಡುಗೆಯಾಗಿ ನೀಡಿದರು. ಅಂದಿನ ದಿನವೇ ಬ್ರಿಟೀಷ್ ಭಾರತ ಸರ್ಕಾರವು ಅವರ ವಿರುದ್ಧ ರಾಜದ್ರೋಹದ ಆರೋಪದ ಕ್ರಮವನ್ನು ಜರುಗಿಸಿತು.

ಆದರೆ ಬೊಂಬಾಯಿಯ ಶ್ರೇಷ್ಠ ನ್ಯಾಯಲಯ ಅವರ ವಿರುದ್ಧ ಕ್ರಮಕ್ಕೆ ತಡೆಯಾಜ್ಞೆಯನ್ನು ನೀಡಿತು. 1917ರ ಜೂನ್‌ನಲ್ಲಿ ಶ್ರೀಮತಿ ಅನಿಬೆಸೆಂಟ್, ಬಿ.ಬಿ. ವಾಡಿಯಾ ಮತ್ತು ಅರುಂಡೇಲ್ ಅವರನ್ನು ಬಂಧಿಸಲಾಯಿತು. ಈ ಕ್ರಮಕ್ಕೆ ದೇಶಾದ್ಯಂತ ತೀವ್ರ ಪ್ರತಿಭಟನೆ ವ್ಯಕ್ತವಾಯಿತು. ಜಿ.ಸುಬ್ರಮಣ್ಯ ಅಯ್ಯರ್ ತಮಗೆ ಬ್ರಿಟಿಷ್ ಭಾರತ ಸರ್ಕಾರವು ನೀಡಿದ್ದ ನೈಟ್‌ಹುಡ್ ಪದವಿಯನ್ನು ತಿರಸ್ಕರಿಸಿದರು. ಅದುವರೆವಿಗೂ ರಾಜಕೀಯ ಚಳುವಳಿಗಳಿಂದ ದೂರವಿದ್ದ ಮದನಮೋಹನ ಮಾಳವೀಯ, ಮಹಮ್ಮದ್ ಆಲಿಜಿನ್ನಾ, ಸುರೇಂದ್ರನಾಥ ಬ್ಯಾನರ್ಜಿ ಮೊದಲಾದವರು ಹೋಂ ರೂಲ್ ಚಳುವಳಿಗೆ ತಮ್ಮ ಬೆಂಬಲವನ್ನು ನೀಡಿದರು.

1917ರ ಜುಲೈ 28ರಂದು ನಡೆದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ (ಎ.ಐ.ಸಿ.ಸಿ) ಸಭೆಯಲ್ಲಿ ಬಾಲಗಂಗಾಧರ ತಿಲಕರು ಬಂಧಿತರನ್ನು ಬಿಡುಗಡೆ ಮಾಡದಿದ್ದರೆ, ಕಾಯಿದೆ ಭಂಗ ಚಳುವಳಿಯನ್ನು ಆರಂಭಿಸಲು ಕರೆ ನೀಡಿದರು. ದೇಶದ ಹಲವು ಭಾಗಗಳಲ್ಲಿ ವ್ಯಕ್ತವಾದ ಪ್ರತಿಭಟನೆಯನ್ನು ಗಮನಿಸಿ ಸರ್ಕಾರವು ಶ್ರೀಮತಿ ಅನಿಬೆಸೆಂಟರನ್ನು 1917ರ ಸೆಪ್ಟೆಂಬರ್‌ನಲ್ಲಿ ಬಿಡುಗಡೆ ಮಾಡಿತು. ಇದರಿಂದಾಗಿ ರಾಜಕೀಯವಾಗಿ ಅವರ ಪ್ರಾಮುಖ್ಯತೆ ಹೆಚ್ಚಿತು. ಆದುದರಿಂದಲೇ 1917ರ ಡಿಸೆಂಬರ್‌ನಲ್ಲಿ ನಡೆಯಲಿದ್ದ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ವಾರ್ಷಿಕ ಅಧಿವೇಶನಕ್ಕೆ ಬಾಲಗಂಗಾಧರ ತಿಲಕರ ಸಲಹೆಯ ಮೇರೆಗೆ ಅವರನ್ನು ಅಧಿವೇಶನ ಅಧ್ಯಕ್ಷರನ್ನಾಗಿ ಮಾಡಲಾಯಿತು. 1916ರ ಲಕ್ನೋ ಅಧಿವೇಶನದಲ್ಲಿ ಹೋಂ ರೂಲ್ ಲೀಗಿನ ಸದಸ್ಯರೂ ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಂಡಿದ್ದರು.

## 12.4 ಹೋಂ ರೂಲ್ ಚಳುವಳಿ ರಾಷ್ಟ್ರೀಯ ಹೋರಾಟದಲ್ಲಿ ವಿಲೀನ

1917ರ ಕೊನೆಯ ವೇಳೆಗೆ ಹೋಂ ರೂಲ್ ಚಳುವಳಿಯು ದುರ್ಬಲಗೊಂಡಿತು. ಭಾರತದ ವ್ಯವಹಾರಗಳ ಕಾರ್ಯದರ್ಶಿ ಲಾರ್ಡ್ ಮಾಂಟೆಗ್ಯೂನ 1917ರ ಆಗಸ್ಟ್ 20ರ ಘೋಷಣೆಯಿಂದ ತೃಪ್ತರಾದ ಮಂದಗಾಮಿಗಳು ಚಳುವಳಿಯಿಂದ ದೂರವುಳಿದರು. ಶ್ರೀಮತಿ ಅನಿಬೆಸೆಂಟರೂ ಅನಿರೀಕ್ಷಿತವಾಗಿ ಮಂದಗಾಮಿಯಾಗಿ ಪರಿವರ್ತನೆಗೊಂಡರು. ಅವರ ಬೆಂಬಲಿಗರಾಗಿದ್ದ ಅರುಂಡೇಲ್, ಬಿ.ಪಿ. ವಾಡಿಯಾ ಮತ್ತು ಸಿ.ಪಿ. ರಾಮಸ್ವಾಮಿ ಮುಂತಾದವರು ಅವರನ್ನು ಅನುಸರಿಸಿದರು. ಬಾಲಗಂಗಾಧರ ತಿಲಕರ ನಿಲುವಿನಲ್ಲಿ ಬದಲಾವಣೆಯಾಗದಿದ್ದರೂ 1918ರಲ್ಲಿ ವ್ಯಾಲಂಟೈನ್ ಚಿರೋಲ್ ವಿರುದ್ಧ ಮೊಕದ್ದಮೆಯ ಸಂಬಂಧವಾಗಿ ಗ್ರೇಟ್ ಬ್ರಿಟನ್ನಿಗೆ ತೆರಳಬೇಕಾಯಿತು. ಇವೆಲ್ಲವುಗಳ ಫಲವಾಗಿ ಹೋಂ ರೂಲ್ ಚಳುವಳಿ ದುರ್ಬಲಗೊಂಡಿತು.

## 12.5 ಹೋಂ ರೂಲ್ ಚಳುವಳಿಗೆ ಇತರರ ಕೊಡುಗೆಗಳು

ಆದರೆ ಹೋಂ ರೂಲ್ ಚಳುವಳಿಯು ರಾಷ್ಟ್ರೀಯ ಹೋರಾಟಕ್ಕೆ ಕೊಟ್ಟ ಕೊಡುಗೆಗಳನ್ನು ನಿರ್ಲಕ್ಷಿಸುವಂತಿಲ್ಲ. ಆ ಕಾಲದಲ್ಲಿ ಕ್ರಿಯಾಶೀಲ ಯುವಕರಾಗಿದ್ದ ಮದರಾಸಿನ ಟಿ.ವಿ.ಸತ್ಯಮೂರ್ತಿ, ಕಲ್ಕತ್ತೆಯ ಜಿತೇಂದ್ರಲಾಲ್ ಬ್ಯಾನರ್ಜಿ, ಅಲಹಾಬಾದ್‌ನ ಜವಹಾರಲಾಲ್ ನೆಹರೂ, ಲಕ್ನೋದ ಖಲಿಕುಜಮಾನ್ ಬೊಂಬಾಯಿಯ ಶ್ರೀಮಂತ ವರ್ತಕ ಜಮ್ನಾದಾಸ್ ದ್ವಾರಕನಾಥ್, ಕೈಗಾರಿಕೋದ್ಯಮಿ ಉಮರ್ ಸೋಭನಿ, ಶಂಕರಲಾಲ್ ಬ್ಯಾಂಕರ್, ಇಂದುಲಾಲ್ ಯಾಜ್ಞಿಕ್ ಮೊದಲಾದವರು 1920ರ ನಂತರದ ರಾಷ್ಟ್ರೀಯ ಚಳುವಳಿಯಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸಿದರು. ಶ್ರೀಮತಿ ಅನಿಬೆಸೆಂಟರು 1919ರ ಮಾಂಟೆಗ್ಯೂ-ಚೆಲ್ಮ್ಸ್‌ಫೋರ್ಡ್ ಸುಧಾರಣೆಗಳನ್ನು ಮೊದಲು ಸ್ವಾಗತಿಸಿದರೂ ಆನಂತರ ಅದಕ್ಕೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿದರು. ಆದರೂ ಭಾರತದ ರಾಜಕೀಯದಿಂದ ಬಹುತೇಕ ದೂರ ಸರಿದಿದ್ದ ಅವರು ದಾರ್ಶನಿಕ ಜಿ.ಕೃಷ್ಣಮೂರ್ತಿಯವರೊಂದಿಗೆ ಗ್ರೇಟ್ ಬ್ರಿಟನ್ ಮತ್ತು ಅಮೇರಿಕ ಸಂಯುಕ್ತ ಸಂಸ್ಥಾನಗಳಲ್ಲಿ ವ್ಯಾಪಕ ಪ್ರವಾಸವನ್ನು ನಡೆಸಿದರು. ಶ್ರೇಷ್ಠ ವಾಗ್ಮಿಯಾಗಿದ್ದ ಅವರು ಭಾರತೀಯ ಸಂಸ್ಕೃತಿಯ ಪ್ರಚಾರಕರಾಗಿಯೂ ಕಾರ್ಯವನ್ನು ನಿರ್ವಹಿಸಿದ್ದರು. 1933ರಲ್ಲಿ ಶ್ರೀಮತಿ ಅನಿಬೆಸೆಂಟರು ನಿಧನರಾದರು.

- **ಲಕ್ನೋ ಅಧಿವೇಶನ (1916)**

ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ವಿಭಜನೆಯಿಂದ ಕೇವಲ ವಸಾಹತುಶಾಹಿ ಆಡಳಿತ ಪ್ರಭುತ್ವಕ್ಕೆ ಮಾತ್ರ ಪ್ರಯೋಜನವಾಗಿದೆಯೆಂಬುದು ಮತ್ತು ರಾಷ್ಟ್ರೀಯ ಚಳುವಳಿಯು ದುರ್ಬಲಗೊಂಡಿದೆ ಎಂಬುದನ್ನು ಕಾಂಗ್ರೆಸ್ಸಿನ ಎರಡೂ ಬಣಗಳ ಮುಖಂಡರು ಗಮನಿಸಿದ್ದರು. ಬಾಲಗಂಗಾಧರ ತಿಲಕರು 1914ರಲ್ಲಿ ಜೈಲಿನಿಂದ ಬಿಡುಗಡೆಯಾದ ನಂತರ ಮಂದಗಾಮಿ ಮುಖಂಡರ ಬಗ್ಗೆ ತಮ್ಮ ನಿಲುವನ್ನು ಸ್ವಲ್ಪ ಮಟ್ಟಿಗೆ ಬದಲಾಯಿಸಿಕೊಂಡಿದ್ದರು. 1915ರಲ್ಲಿ ಗೋಪಾಲಕೃಷ್ಣ ಗೋಖಲೆ ಮತ್ತು ಫಿರೋಜ್ ಷಹಾ ಮೆಹ್ತಾರವರ ನಿಧನದಿಂದಾಗಿ ಕಾಂಗ್ರೆಸ್ಸಿನ ಮಂದಗಾಮಿ ಬಣಕ್ಕೆ ನಾಯಕತ್ವದ ಕೊರತೆ ಕಂಡುಬಂದಿತು. ಶ್ರೀಮತಿ ಅನಿಬೆಸೆಂಟರು ಕಾಂಗ್ರೆಸ್ಸಿನ ಎರಡೂ ಬಣಗಳನ್ನು ಒಂದುಗೂಡಿಸಲು ತೀವ್ರ ಪ್ರಯತ್ನಗಳನ್ನು ನಡೆಸಿದರು. ಅದರ ಫಲವಾಗಿ 1915ರಲ್ಲಿ ಬೊಂಬಾಯಿಯ

ಅಧಿವೇಶನದಲ್ಲಿ ಕಾಂಗ್ರೆಸ್ಸಿನ ಸಂವಿಧಾನವನ್ನು ತಿದ್ದುಪಡಿಸಿ ತೀವ್ರಗಾಮಿಗಳನ್ನು ಕಾಂಗ್ರೆಸ್ಸಿಗೆ ಬರಮಾಡಿಕೊಳ್ಳಲು ನಿರ್ಧರಿಸಲಾಯಿತು. 1916ರ ಡಿಸೆಂಬರ್‌ನಲ್ಲಿ ಕಾಂಗ್ರೆಸ್ಸಿನ ವಾರ್ಷಿಕ ಅಧಿವೇಶನ ಲಕ್ನೋದಲ್ಲಿ ಸಮಾವೇಶಗೊಂಡಿತು. ಆ ಅಧಿವೇಶನದಲ್ಲಿ ಬಾಲಗಂಗಾಧರ ತಿಲಕ್ ಮತ್ತು ಅವರ ಬೆಂಬಲಿಗರನ್ನು ಅಧಿವೇಶನದ ಅಧ್ಯಕ್ಷರಾದ ಅಂಬಿಕಾಚರಣ್ ಮಜುಂದಾರ್ ಕಾಂಗ್ರೆಸ್ಸಿಗೆ ಸ್ವಾಗತಿಸಿದರು. 10 ವರ್ಷಗಳ ದುಃಖದಾಯಕವಾದ ಪ್ರತ್ಯೇಕತೆಯ ನಂತರ ಎರಡೂ ಬಣಗಳು ಒಂದುಗೂಡಿದವು. ಬಾಲಗಂಗಾಧರ ತಿಲಕರು ಕಾಂಗ್ರೆಸ್ಸಿನ ನಾಯಕರಾದರು. ಇದರಿಂದಾಗಿ ಕಾಂಗ್ರೆಸ್ಸಿನ ನಾಯಕತ್ವದಲ್ಲಿ ಚಳುವಳಿಯು ಚುರುಕುಗೊಂಡಿತು. ಆದರೆ ಮಂದಗಾಮಿ ಮುಖಂಡರಲ್ಲಿ ಶ್ರೇಷ್ಠರಾಗಿದ್ದ ಸುರೇಂದ್ರನಾಥ ಬ್ಯಾನರ್ಜಿ ಮೊದಲಾದವರು ಕಾಂಗ್ರೆಸ್ಸಿನ ಕಾರ್ಯ ಚಟುವಟಿಕೆಗಳಿಂದ ದೂರವುಳಿದರು.

- **ಕಾಂಗ್ರೆಸ್- ಮುಸ್ಲಿಂ ಲೀಗ್ ಒಡಂಬಡಿಕೆ - 1916**

ಲಕ್ನೋ ಅಧಿವೇಶನದ ಸಮಯದಲ್ಲಿ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ತಮ್ಮ ಹಳೆಯ ಭಿನ್ನಾಭಿಪ್ರಾಯಗಳನ್ನು ಮರೆತು ಒಂದು ಒಪ್ಪಂದವನ್ನು ಮಾಡಿಕೊಂಡವು. ಇದೊಂದು ರಾಜಕೀಯ ಮಹತ್ವದ ಘಟನೆಯಾಯಿತು. ಹಲವಾರು ವರ್ಷಗಳಿಂದಲೂ ಮುಸ್ಲಿಂ ಲೀಗ್ ವಸಾಹತುಶಾಹಿ ಸರ್ಕಾರದ ಧೋರಣೆಯಿಂದ ಅಸಮಾಧಾನಗೊಂಡಿತ್ತು. 1911ರಲ್ಲಿ ಬಂಗಾಳದ ವಿಭಜನೆಯನ್ನು ರದ್ದುಗೊಳಿಸಿದ ಸರ್ಕಾರದ ಕ್ರಮ ಮುಸ್ಲಿಂ ಲೀಗಿನ ಮುಖಂಡರಿಗೆ ಆಘಾತವನ್ನುಂಟು ಮಾಡಿತು. ವಸಾಹತುಶಾಹಿ ಸರ್ಕಾರವು ತನ್ನ ಹಿತರಕ್ಷಣೆಗಾಗಿ ಅಲ್ಪಸಂಖ್ಯಾತರಾಗಿರುವ ಇಸ್ಲಾಂಧರ್ಮೀಯರನ್ನು ಬಳಸಿಕೊಳ್ಳುತ್ತಿದೆ ಎಂಬ ಭಾವನೆ ಅವರಲ್ಲಿ ಮೂಡಿ ಬಂದಿತು. ಪ್ರಥಮ ಮಹಾಯುದ್ಧ ಕಾಲದಲ್ಲಿ ಗ್ರೇಟ್ ಬ್ರಿಟನ್ ಟರ್ಕಿಯ ವಿರುದ್ಧ ಯುದ್ಧವನ್ನು ಘೋಷಿಸಿದ್ದು, ಅದಕ್ಕೂ ಮೊದಲು ಬಾಲ್ಕನ್ ಯುದ್ಧಗಳ ಸಮಯದಲ್ಲಿ ಗ್ರೇಟ್ ಬ್ರಿಟನ್ ಟರ್ಕಿಯ ವಿರುದ್ಧ ತಳೆದ ನಿಲುವು ಇಸ್ಲಾಂ ಧರ್ಮೀಯರ ಅಸಮಾಧಾನಕ್ಕೆ ಕಾರಣವಾಯಿತು. ಯುದ್ಧವು ಪ್ರಾರಂಭವಾದಾಗ ಸರ್ಕಾರ, ಮೌಲಾನಾ ಅಬುಲ್ ಕಲಮ್ ಅಜಾದರ ಉರ್ದು ಪತ್ರಿಕೆ "ಅಲ್-ಹಿಲಾಲ್" ಮತ್ತು ಮಹಮ್ಮದ್ ಆಲಿಯವರ ಇಂಗ್ಲೀಷ್ ಪತ್ರಿಕೆ "ಕಾಮ್ರೇಡ್"ನ ಪ್ರಕಟಣೆಯನ್ನು ನಿರ್ಬಂಧಿಸಿತು. ಆಲಿ ಸಹೋದರರು, ಅಜಾದ್ ಮತ್ತು ಹಸ್ರತ್ ಮೋಹಾನಿ ಅವರುಗಳನ್ನು ಬಂಧಿಸಲಾಯಿತು.

ಇವೆಲ್ಲವುಗಳಿಂದಾಗಿ ಮುಸ್ಲಿಂ ಲೀಗ್ ತನ್ನ ಸಂಕುಚಿತ ರಾಜಕೀಯ ದೃಷ್ಟಿಕೋನದಿಂದ ಹೊರಬಂದು ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ರಾಷ್ಟ್ರೀಯ ದೃಷ್ಟಿಕೋನಕ್ಕೆ ಸಮೀಪವಾಯಿತು. ಬಾಲಗಂಗಾಧರ್ ತಿಲಕ್, ಮಹಮ್ಮದ್ ಆಲಿ ಜಿನ್ನಾ ಮತ್ತು ಶ್ರೀಮತಿ ಅನಿಬೆಸೆಂಟ್ ಎರಡೂ ರಾಜಕೀಯ ಪಕ್ಷಗಳ ನಡುವೆ ಹೊಂದಾಣಿಕೆಯನ್ನು ಉಂಟುಮಾಡಲು ಪ್ರಾಮಾಣಿಕವಾಗಿ ಯತ್ನಿಸಿದರು. ಹಿಂದೂ-ಮುಸ್ಲಿಂ ನಡುವಿನ ಏಕತೆಯ ಮೂಲಕ ಮಾತ್ರ ಭಾರತ ಸ್ವಯಮಾಡಳಿತವನ್ನು ಗಳಿಸಲು ಸಾಧ್ಯ ಎಂದು ಅವರು ಭಾವಿಸಿದ್ದರು. 1915ರಲ್ಲಿ ಬೊಂಬಾಯಿಯಲ್ಲಿ ಕಾಂಗ್ರೆಸ್ಸಿನ ಅಧಿವೇಶನವು ನಡೆದ ಸಂದರ್ಭದಲ್ಲಿ ಮುಸ್ಲಿಂ ಲೀಗ್‌ನ ಅಧಿವೇಶನವು ನಡೆಯಿತು. 1916ರಲ್ಲಿ ಲಕ್ನೋ ನಗರದಲ್ಲಿ ಕಾಂಗ್ರೆಸ್ ಅಧಿವೇಶನ ನಡೆದ ಸಮಯದಲ್ಲಿ ಕಾಂಗ್ರೆಸ್ ಮತ್ತು ಮುಸ್ಲಿಂ ನಡುವೆ ಒಂದು ರಾಜಕೀಯ ಒಪ್ಪಂದವು ಏರ್ಪಟ್ಟಿತು. ಇದನ್ನು 'ಲಕ್ನೋಒಪ್ಪಂದ' ಎಂದು ಕರೆಯಲಾಗಿದೆ.

ಲಕ್ನೋ ಒಪ್ಪಂದದ ಪ್ರಕಾರ ಕಾಂಗ್ರೆಸ್ ಇಸ್ಲಾಂ ಧರ್ಮೀಯರಿಗೆ ಈಗಾಗಲೇ ವಸಾಹತುಶಾಹಿ ಸರ್ಕಾರ ನೀಡಿದ್ದ ಪ್ರತ್ಯೇಕ ಪ್ರಾತಿನಿಧ್ಯತೆಗೆ ಸಮ್ಮತಿಯನ್ನು ನೀಡಿತು. ಕೇಂದ್ರ ಶಾಸನ ಸಭೆಯಲ್ಲಿ ಭಾರತೀಯ ಚುನಾಯಿತ ಸದಸ್ಯರಲ್ಲಿ 1/3 ಭಾಗ ಮುಸ್ಲಿಂ ಸದಸ್ಯರಿರಬೇಕೆಂದು ನಿರ್ಧರಿಸಲಾಯಿತು. ಪ್ರಾಂತೀಯ ಶಾಸನ ಸಭೆಗಳಲ್ಲಿ ಮುಸ್ಲಿಂ ಸದಸ್ಯರ ಪ್ರಮಾಣಕ್ಕೆ ಸಂಬಂಧಿಸಿದಂತೆಯೂ ಒಂದು ಒಪ್ಪಂದಕ್ಕೆ ಬರಲಾಯಿತು. ಈ ಒಪ್ಪಂದದ ಬಗ್ಗೆ ವ್ಯಕ್ತವಾದ ಟೀಕೆಗೆ ಉತ್ತರಿಸುತ್ತಾ ಬಾಲಗಂಗಾಧರ ತಿಲಕರು.

"ಹಿಂದೂಗಳಾದ ನಾವು ಮುಸ್ಲಿಂ ಸಹೋದರರಿಗೆ ಬಿಟ್ಟುಕೊಟ್ಟಿರುವುದು ಬಹಳ ಎಂದು ಹೇಳಲಾಗಿದೆ. ನಾವು ಎಷ್ಟು ಬಿಟ್ಟುಕೊಟ್ಟರೂ ಹೆಚ್ಚಲ್ಲ ಎಂಬುದು ಹಿಂದೂಗಳ ಅಬಿಪ್ರಾಯವೆಂದು ಭಾರತದ ಎಲ್ಲಾ ಹಿಂದೂಗಳ ಪ್ರತಿನಿಧಿಯಾಗಿ ನಾನು ಹೇಳುತ್ತೇನೆ. ಸ್ವಯಾಮಾಡಳಿತದ ಹಕ್ಕು ಇಸ್ಲಾಂಧರ್ಮೀಯರಿಗೆ ಮಾತ್ರವೇ ಕೊಡಲ್ಪಟ್ಟರೂ ನನಗೆ ಚಿಂತೆಯಿಲ್ಲ. ಅವು ರಜಪೂತರಿಗೆ ಕೊಡಲ್ಪಟ್ಟರೂ ನನಗೆ ಚಿಂತೆಯಿಲ್ಲ. ಹಿಂದೂ ಸಮಾಜದ ಕೆಳವರ್ಗದವರಿಗೆ ಕೊಡಲ್ಪಟ್ಟರೂ ನನಗೆ ಚಿಂತೆಯಿಲ್ಲ" ಎಂದು ಹೇಳಿದರು.

ಎರಡೂ ಪಕ್ಷಗಳು ಭಾರತಕ್ಕೆ ಸ್ವಯಾಮಾಡಳಿತವನ್ನು ನೀಡುವಂತೆ ಸರ್ಕಾರವನ್ನು ಒತ್ತಾಯಿಸಿದವು. ಇಸ್ಲಾಂ ಧರ್ಮೀಯರಿಗೆ ನೀಡಲಾಗಿದ್ದ ಮತೀಯ ಪ್ರಾತಿನಿಧ್ಯತೆಯನ್ನು ಕಾಂಗ್ರೆಸ್ ಒಪ್ಪಿಕೊಂಡಿದ್ದು ಕಟುವಾದ ಟೀಕೆಗೆ ಗುರಿಯಾಯಿತು. ಕಾಂಗ್ರೆಸ್ ತಾನು ಪ್ರತಿಪಾದಿಸಿಕೊಂಡು ಬಂದಿದ್ದ ತತ್ವವನ್ನು ಬಿಟ್ಟುಕೊಟ್ಟಿದೆ ಎಂದು ಟೀಕಿಸಲಾಯಿತು. ಅಲ್ಲದೆ ಮುಸ್ಲಿಂಮರು ಅಲ್ಪ ಸಂಖ್ಯಾತರಾಗಿದ್ದ ಸಂಯುಕ್ತ ಪ್ರಾಂತ್ಯ, ಬೊಂಬಾಯಿ, ಬಿಹಾರ್ ಮತ್ತು ಮದರಾಸಿನಲ್ಲಿ ಅವರಿಗೆ ಹೆಚ್ಚುವರಿ ಪ್ರಾತಿನಿಧ್ಯಕ್ಕೆ ಒಪ್ಪಿಕೊಂಡಿದ್ದನ್ನು ಮದನ ಮೋಹನ ಮಾಳವೀಯ ಮೊದಲಾದವರು ವಿರೋಧಿಸಿದರು. ಖ್ಯಾತ ಇತಿಹಾಸಕಾರ ಡಾ.ಆರ್.ಸಿ.

ಮಜುಂದಾರ್‌ರವರು ಲಕ್ನೋ ಒಪ್ಪಂದವನ್ನು ಕುರಿತು ಬರೆಯುತ್ತಾ "1916ರಲ್ಲಿನ ಕಾಂಗ್ರೆಸ್ಸಿನ ಈ ಕ್ರಮ 30 ವರ್ಷಗಳ ನಂತರ ಪಾಕಿಸ್ತಾನದ ನಿರ್ಮಾಣಕ್ಕೆ ಬುನಾದಿಗಳಿಸಿಕೊಳ್ಳುವ ಉದ್ದೇಶಕ್ಕೆ ಒಪ್ಪಂದವು ವಿರುದ್ಧವಾಗಿದೆಯೆಂದು ಟೀಕಿಸಿದರು. ಇದರ ಬಗ್ಗೆ ಪತ್ರಕರ್ತರು ಕೇಳಿದ ಪ್ರಶ್ನೆಗೆ ಮಹಾತ್ಮ ಗಾಂಧೀಯವರು.

" ಮತ್ತೆ ಕರಾಚಿ ಅಧಿವೇಶನದಲ್ಲಿ ಅಂತಹುವುದೇ ನಿರ್ಣಯವನ್ನು ಅಂಗೀಕರಿಸುವುದಕ್ಕೆ ಯಾವುದೇ ಅಡ್ಡಿಗಳಿಲ್ಲ".

ಎಂದು ಉತ್ತರಿಸಿದರು. ಯುವ ಸಂಘರ್ಷ ಸಮಿತಿಗಳು ಒಪ್ಪಂದವನ್ನು ಕಟುವಾಗಿ ಟೀಕಿಸಿದವು. ಭಗತ್‌ಸಿಂಗ್ ಮತ್ತು ಅವರ ಸಂಗಡಿಗರಿಗೆ ವಿಧಿಸಲಾಗಿದ್ದ ಮರಣದಂಡನೆ ಶಿಕ್ಷೆಯನ್ನು ಜೀವಾವಧಿ ಶಿಕ್ಷೆಗೆ ಇಳಿಸುವಂತೆ ಮಾಡಲಾಗಿದ್ದ ಒತ್ತಾಯವನ್ನು ಸರ್ಕಾರ ಒಪ್ಪಿಕೊಂಡಿರಲಿಲ್ಲ. ಈ ಬೇಡಿಕೆಯನ್ನು ಸರ್ಕಾರವು ಒಪ್ಪಿಕೊಳ್ಳುವವರೆಗೂ ಮಹಾತ್ಮ ಗಾಂಧೀಜಿಯವರು ಒಪ್ಪಂದಕ್ಕೆ ಸಹಿಯನ್ನು ಹಾಕಬಾರದಾಗಿತ್ತು ಎಂಬುದು ಕ್ರಾಂತಿಕಾರಿ ಯುವ ಸಂಘಟನೆಗಳ ಅಭಿಪ್ರಾಯವಾಗಿತ್ತು. ಈಗಾಗಲೇ ಹರಾಜಾಗಿದ್ದ ರಾತರ ಜಮೀನುಗಳನ್ನು ಅವರಿಗೆ ಹಿಂದಿರುಗಿಸುವ ಬಗ್ಗೆ ಸರ್ಕಾರದ ಮೇಲೆ ಸಾಕಷ್ಟು ಒತ್ತಡವನ್ನು ತರದೆ, ರೈತರ ಹಿತವನ್ನು ಬಲಿಕೊಡಲಾಯಿತು ಎಂದೂ ಟೀಕಿಸಲಾಯಿತು. ಸುಭಾಷ್ ಚಂದ್ರಬೋಸ್ ಮತ್ತು ಜವಹಾರಲಾಲ್ ನೆಹರೂ "ಗಾಂಧೀಜಿ ತಿಳಿಯದೆ ಭಾರತವನ್ನು ಮಾರಿದರು" ಎಂಬ ಅಭಿಪ್ರಾಯವನ್ನು ಪಟ್ಟರು.

ಮಹಾತ್ಮ ಗಾಂಧಿಯವರಂತೆಯೇ ವೈಸ್‌ರಾಯ್ ಇರ್ವಿನ್ನರು ಕೂಡಾ ಒಪ್ಪಂದಕ್ಕೆ ಸಹಿಯನ್ನು ಹಾಕಿದುದಕ್ಕಾಗಿ ತೀವ್ರ ಆಕ್ಷೇಪಕ್ಕೆ ಗುರಿಯಾದರು. ಗ್ರೇಟ್ ಬ್ರಿಟನ್ನಿನ ಸಂಪ್ರದಾಯವಾದಿ ರಾಜಕಾರಣಿಗಳು, ಅದರಲ್ಲೂ ಮುಖ್ಯವಾಗಿ ವಿನಸ್ಟನ್ ಚರ್ಚಿಲ್ ಕಾಂಗ್ರೆಸ್ಸಿನೊಂದಿಗೆ ಒಪ್ಪಂದವನ್ನು ಮಾಡಿಕೊಂಡ ಇರ್ವಿನ್ನರ ಕ್ರಮವನ್ನು ಕಟುವಾಗಿ ಟೀಕಿಸಿದರು. ಕಾಂಗ್ರೆಸ್ಸನ್ನು ಸರ್ಕಾರದ ಸಮಾನವೆಂದು ಪರಿಗಣಿಸಿದ ಕ್ರಮ ಸರ್ಕಾರಿ ಅಧಿಕಾರಿಗಳ ಅಸಮಾಧಾನಕ್ಕೆ ಕಾರಣವಾಯಿತು. ಇದರಿಂದಾಗಿ ಅವರು ಒಪ್ಪಂದದ ನಿಯಮಗಳನ್ನು ಜಾರಿಗೊಳಿಸುವ ಪ್ರಾಮಾಣಿಕ ಪ್ರಯತ್ನಗಳನ್ನು ನಡೆಸಲಿಲ್ಲ. ಪೂರ್ವ ಗೋದಾವರಿ ಜಿಲ್ಲೆಯಲ್ಲಿ ಮಹಾತ್ಮ ಗಾಂಧೀಯವರ ಭಾವಚಿತ್ರವನ್ನು ಹೊಂದಿದ್ದಕ್ಕಾಗಿ ಜನರ ಮೇಲೆ ಗುಂಡು ಹಾರಿಸಿ 4 ಮಂದಿಯನ್ನು ಕೊಲ್ಲಲಾಯಿತು. ಗಾಂಧೀ ಟೋಪಿಯನ್ನು ಧರಿಸಿದ್ದಕ್ಕಾಗಿ ಜನರನ್ನು ಶಿಕ್ಷೆಗೆ ಗುರಿಪಡಿಸಲಾಯಿತು. ಮಾರ್ಚ್ 23ರಂದು ಭಗತ್‌ಸಿಂಗ್, ರಾಜಗುರು ಮತ್ತು ಸುಖದೇವ್.ಅವರನ್ನು ಭಾರತೀಯರ ತೀವ್ರ ಪ್ರತಿಭಟನೆಗಳ ನಡುವೆಯೂ ಗಲ್ಲಿಗೇರಿಸಲಾಯಿತು. ಏಪ್ರಿಲ್‌ನಲ್ಲಿ ಲಾರ್ಡ್ ಇರ್ವಿನ್ನರ ಅಧಿಕಾರವು ಕೊನೆಗೊಂಡು ವಿಲ್ಲಿಂಗ್‌ಡನ್ ವೈಸ್‌ರಾಯ್‌ರಾದರು. ಅವರಿಗೆ ಒಪ್ಪಂದದ ಬಗ್ಗೆ ಗೌರವಗಳಿರಲಿಲ್ಲ. ಹೀಗಾಗಿ ಒಪ್ಪಂದವನ್ನು ಜಾರಿಗೊಳಿಸುವ ನಿಟ್ಟಿನಲ್ಲಿ ಪ್ರಾಮಾಣಿಕ ಯತ್ನಗಳನ್ನು ನಡೆಸಲಿಲ್ಲ. ಹಲವಾರು ಸಂದರ್ಭ ಮತ್ತು ವಿಷಯಗಳಲ್ಲಿ ಅವರು ಒಪ್ಪಂದವನ್ನು ಉಲ್ಲಂಘಿಸಿದರು.

ಈ ಎಲ್ಲಾ ದೋಷಗಳಿದ್ದರು ಗಾಂಧೀ -ಇರ್ವಿನ್ ಒಪ್ಪಂದದ ಮಹತ್ವವನ್ನು ಅಲ್ಲಗಳೆಯುವಂತಿಲ್ಲ. ಒಪ್ಪಂದದಲ್ಲಿ ಮಹಾತ್ಮ ಗಾಂಧಿಯವರು ಬಿಟ್ಟುಕೊಟ್ಟಿದ್ದು ಬಹಳವಾದರೂ ಮೊದಲ ಬಾರಿಗೆ ಸಾಮ್ರಾಜ್ಯಶಾಹಿ ಸರ್ಕಾರ ಕಾಂಗ್ರೆಸ್ಸನ್ನು ಸಮಾನ ದೃಷ್ಟಿಯಿಂದ ನೋಡಿದ್ದು ಗಮನಾರ್ಹವಾದ ವಿಷಯವಾಗಿದೆ. ಅಲ್ಲದೆ ಯಾವುದೇ ಮಿತಿಯಿದೆ ಎಂಬುದನ್ನು ಪ್ರಸ್ತುತ ಗಮನಿಸುವುದು ಅಗತ್ಯವೆನಿಸುತ್ತದೆ. 1931ರ ಮಾರ್ಚ್ 5ರ ಒಪ್ಪಂದದಿಂದ ಕಾಯಿದೆ ಭಂಗ ಚಳುವಳಿಯು ತಾತ್ಕಾಲಿಕವಾಗಿ ಅಂತ್ಯಗೊಂಡಿತು. ಜನರಲ್ಲಿ ಉತ್ಸಾಹವು ಕಡಿಮೆಯಾಗಿತ್ತು. ನಗರ ಪ್ರದೇಶಗಳಲ್ಲಿ ವಿದ್ಯಾರ್ಥಿಗಳು ಮತ್ತು ಯುವಕರು ಇನ್ನೂ ಉತ್ಸಾಹವನ್ನು ಕಳೆದುಕೊಳ್ಳದಿದ್ದರೂ ವರ್ತಕರು ಬಹುದೀರ್ಘಕಾಲ ನಷ್ಟವನ್ನು ಅನುಭವಿಸಲು ಸಿದ್ಧರಿರಲಿಲ್ಲ. ಗ್ರಾಮಾಂತರ ಪ್ರದೇಶಗಳಲ್ಲಿ ಮೊದಲಿನ ಉತ್ಸಾಹವು ಉಳಿದಿರಲಿಲ್ಲ. ಹೀಗಾಗಿ ಚಳುವಳಿಯು ತನ್ನ ತೀವ್ರತೆಯನ್ನು ಕಳೆದುಕೊಂಡಿತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಒಪ್ಪಂದವನ್ನು ಮಾಡಿಕೊಂಡಿದ್ದರಿಂದ ಕಾಂಗ್ರೆಸ್ಸಿನ ಪ್ರತಿಷ್ಠೆಯೂ ಹೆಚ್ಚಿತು. ಕಾಂಗ್ರೆಸ್ಸಿನ ಹಲವಾರು ಮುಖಂಡರು ಒಪ್ಪಂದವನ್ನು ಕಾಂಗ್ರೆಸ್ಸಿನ ವಿಜಯವೆಂದು ಭಾವಿಸಿದ್ದರು. "ವಿಜಯ ಎರಡೂ ಪಕ್ಷಗಳಿಗೂ ಸೇರಿದೆ" ಎಂದು ಮಹಾತ್ಮ ಗಾಂಧೀಜಿಯವರು ಬಣ್ಣಿಸಿದರು. ಅವರ ಸತ್ಯಾಗ್ರಹದ ಕಲ್ಪನೆಯಲ್ಲಿ ವಿರೋಧಿಗಳಿಗೆ ತಮ್ಮ ಹೃದಯ ಪರಿವರ್ತನೆಯನ್ನು ತೋರ್ಪಡಿಸಲು ಅವಕಾಶಗಳನ್ನು ಕಲ್ಪಿಸಿಕೊಡುವುದು ಮಣಿದು ಒಪ್ಪಂದವನ್ನು ಮಾಡಿಕೊಂಡಿದ್ದು ಜನರ ಮೇಲೆ ಅಪಾರ ಪ್ರಭಾವವನ್ನು ಬೀರಿತು. ಇದರಿಂದಾಗಿಯೇ ಸೆರೆಮನೆಯಿಂದ ಬಿಡುಗಡೆ ಹೊಂದಿದ್ದ ರಾಜಕೀಯ ಕಾರ್ಯಕರ್ತರನ್ನು ಯುದ್ಧರಂಗದಲ್ಲಿ ಜಯವನ್ನು ಗಳಿಸಿ ಹಿಂದುರಿಗಿದ ಸೈನಿಕರ ರೀತಿಯಲ್ಲಿ ಸತ್ಕರಿಸುವಂತಹ ಸ್ವಾಗತವನ್ನು ನೀಡಲಾಯಿತು.

## 12.6 ಘಟಕದ ಸಾರಾಂಶ

ಈ ಘಟಕದ ಸವಿಸ್ತಾರದ ಅಧ್ಯಯನದ ನಂತರ ನಾವು

- ಸ್ವಯಂ ಆಡಳಿತವನ್ನು ಸ್ಥಾಪಿಸಲು ಪ್ರಾರಂಭವಾದ ಹೋಂರೂಲ್ ಚಳುವಳಿಯನ್ನು ಅರಿತೆವು.
- ಈ ಚಳುವಳಿಯನ್ನು ಪ್ರಾರಂಭಿಸಿದ ಬಾಲಗಂಗಾಧರ ತಿಲಕ್‌ರ ಬಗ್ಗೆ ತಿಳಿದೆವು.
- ಈ ಚಳುವಳಿಯು ತೀವ್ರಗತಿಯಲ್ಲಿ ನಡೆಯಲು ಶ್ರಮಿಸಿದ ಶ್ರೀಮತಿ ಅನಿಬೆಸೆಂಟ್ ಬಗ್ಗೆ ತಿಳಿದೆವು
- ಈ ಚಳುವಳಿಯು ರಾಷ್ಟ್ರವ್ಯಾಪಿ ಅರಡಿ ಕೊನೆಗೆ ಕಾಂಗ್ರೆಸ್‌ನಲ್ಲಿ ವಿಲೀನವಾದ ವಿಷಯವನ್ನು ಸಹ ತಿಳಿದುಕೊಂಡೆವು.

## 12.7 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಭಾರತ ಸ್ವಾತಂತ್ರ ಚಳುವಳಿಯಲ್ಲಿ ಹೋಂರೂಲ್ ಚಳುವಳಿಯ ಪ್ರಾಮುಖ್ಯತೆ ವಿವರಿಸಿ.
2. ಹೋಂರೂಲ್ ಚಳುವಳಿಯ ಸಾಧನೆಯನ್ನು ತಿಳಿಸಿ.
3. ಹೋಂರೂಲ್ ಚಳುವಳಿಯಲ್ಲಿ ತಿಲಕ್ ಮತ್ತು ಅನಿಬೆಸೆಂಟ್‌ರವರ ಸಾಧನೆಯನ್ನು ತಿಳಿಸಿ.

## 12.8 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


| | | | |
|---|---|---|---|
| 1. | Dodwell | : | Cambridge History of India |
| 2. | Sumit Sarkar | : | Modern India |
| 3. | Hansraj | : | History of Modern India |
| 4. | ನರೇಂದ್ರಪ್ರಸಾದ್ ಮತ್ತು ಇತರರು | : | ಭಾರತ ಸ್ವಾತಂತ್ರ್ಯ ಚಳುವಳಿ |

## ಘಟಕ : 13 ಖಿಲಾಫತ್ ಚಳುವಳಿ

ವಿಷಯಸೂಚಿ:

## 13.0 ಉದ್ದೇಶಗಳು

ಈ ಘಟಕದ ಅಧ್ಯಯನದಲ್ಲಿ ನಾವು ಖಿಲಾಫತ್ ಚಳುವಳಿಯ ಬಗ್ಗೆ ತಿಳಿಯುತ್ತೇವೆ.

- ಖಿಲಾಫತ್ ಚಳುವಳಿಯ ಐತಿಹಾಸಿಕ ಹಿನ್ನೆಲೆಯನ್ನು ಅಧ್ಯಯನ ಮಾಡುತ್ತೇವೆ.
- ಖಿಲಾಫತ್ ಮತ್ತು ಗಾಂಧೀಜಿಯವರ ಸಂಬಂಧ
- ಖಿಲಾಫತ್ ಚಳುವಳಿ ಮತ್ತು ಕಾಂಗ್ರೆಸ್‌ನ ಸಂಬಂಧ
- ಖಿಲಾಫತ್ ಚಳುವಳಿಯ ಪರಿಣಾಮ ಮುಂತಾದ ವಿಷಯಗಳನ್ನು ಅಧ್ಯಯನ ಮಾಡುವ ಉದ್ದೇಶವನ್ನು ಈ ಘಟಕದಲ್ಲಿ ಮಾಡಲಾಗುತ್ತದೆ.

## 13.1 ಪೀಠಿಕೆ

ಮೊಹಮ್ಮದ್ ಆಲಿ ಆಕ್ಸ್‌ಫರ್ಡ್‌ನಲ್ಲಿ ಆಧುನಿಕ ಇತಿಹಾಸವನ್ನು ಅಧ್ಯಯನ ಮಾಡಿ ಪದವಿ ಪಡೆದವರು. ಆದರೆ ಅವರ ಮನಸ್ಸು ಮಧ್ಯಯುಗದ ಇಸ್ಲಾಮೀ ಕಂದಾಚಾರಕ್ಕೆ ಬಲಿಯಾಗಿ ಜಾಗತಿಕ ಇಸ್ಲಾಮಿತನ ಅವರಲ್ಲಿ ತುಂಬಿ ತುಳುಕುತ್ತಿತ್ತು. ಆ ವೇಳೆ ತುರ್ಕಿಯ ಒಟ್ಟೊಮನ್ ಸಾಮ್ರಾಜ್ಯವು ಭ್ರಷ್ಟ ಹಾಗೂ ದುರ್ಬಲವಾಗಿದ್ದರೂ ಕೂಡ, ಅದರಿಂದಲೇ ಜಗತ್ತಿನಲ್ಲಿ ಇಸ್ಲಾಮಿ ಸಂಸ್ಕೃತಿ, ಪ್ರಭಾವಗಳು ಉಳಿಯಬಲ್ಲವು ಎನ್ನುವುದು ಅವರ ಅಭಿಪ್ರಾಯವಾಗಿತ್ತು. ಅವರ ಅಭಿಮತದಂತೆ, ಇಸ್ಲಾಮ್ ಎಂಬುದು ದೇವಪ್ರಭುತ್ವಪರವೂ (ಥಿಯಾಕ್ರೆಟಿಕ್) ರಾಷ್ಟ್ರೀಯಾತೀತವೂ (ಸೂಪರ್ ಪ್ಯಾಶನಲಿಸ್ಟ್) ಆಗಿದೆ. ಹೀಗಾಗಿ ಕಾಂಗ್ರೆಸ್ಸಿನ ಜಾತ್ಯತೀತ ರಾಷ್ಟ್ರೀಯತೆಯು ಇಸ್ಲಾಮಿಗೆ ವಿರುದ್ಧವಾದುದು ಎಂದು ಅವರು ಭಾವಿಸಿದ್ದರು.

ಒಂದನೇ ಮಹಾಯುದ್ಧಕ್ಕಿಂತ ಮೊದಲು ಮೊಹಮ್ಮದ್ ಆಲಿಯವರ ರಾಜಕೀಯ ಜೀವನ ಆರಂಭಗೊಂಡಿತು. ಪ್ರಾರಂಭದಲ್ಲಿ ಅವರು "ಕಾಮ್ರೇಡ್" ಎಂಬ ಇಂಗ್ಲೀಷ್ ವಾರ ಪತ್ರಿಕೆಯ ಸಂಪಾದಕರಾಗಿದ್ದರು. ಇದು ವಿದ್ಯಾವಂತ ಮುಸ್ಲಿಮರಿಗಾಗಿ ಇದ್ದ ಪತ್ರಿಕೆಯಾಗಿತ್ತು. ಮೊಹಮ್ಮದ್ ಆಲಿಯವರು ಆಲಿಘರ್ ವಿಚಾರಧಾರೆಯ ಮುಸ್ಲಿಮ್ ರಾಜಕಾರಣಿಗಲನ್ನು ಟೀಕಿಸುತ್ತಿದ್ದರು. ಯಾಕೆಂದರೆ, ಅಂಥ ರಾಜಕಾರಣಿಗಳು ಭಾರತೀಯ ಮುಸಲ್ಮಾನರ ಭವಿಷ್ಯವನ್ನು ಬ್ರಿಟಿಷ್ ಪ್ರಭುಗಳ ಕೃಪಾಶ್ರಯಕ್ಕೆ ಒತ್ತೆ ಇಟ್ಟಿದರು. ಹಿಂದುಗಳ ಮತ್ತು ಮುಸ್ಲಿಮರ ಹಿತಾಸಕ್ತಿಗಳು ಸಮಾನ ಎಂಬುದು ಒಂದು ಕಟ್ಟುಕತೆಯೇ ಹೊರತು ಮತ್ತೇನಲ್ಲ ಎಂದು ಮೋಹಮ್ಮದ್ ಆಲಿಯವರು ಭಾವಿಸಿದ್ದರು. ತಮ್ಮ ವಿಚಾರಧಾರೆ ಹಾಗೂ ಭಾವಧಾರೆಗಳೆರಡರಲ್ಲೂ ಈ ಎರಡು ಸಮುದಾಯಗಳು ಪೂರ್ತಿ ವಿಭಿನ್ನ ಎನ್ನುವುದು ಅವರ ಖಚಿತ ಅಭಿಪ್ರಾಯವಾಗಿತ್ತು. ಅಂದರೆ, ಅವರು "ದ್ವಿರಾಷ್ಟ್ರ ಸಿದ್ಧಾಂತ"ವನ್ನು ಅಂಗೀಕರಿಸಿದ್ದರು.

## 13.3 ಖಿಲಾಫತ್ ಚಳವಳಿ

ಖಿಲಾಫತ್ ಚಳವಳಿಯ ಅಂತಾರಾಷ್ಟ್ರೀಯ ಹಿನ್ನೆಲೆ ಹೀಗಿದೆ. ಪ್ರಥಮ ಜಾಗತಿಕ ಯುದ್ಧದಲ್ಲಿ (1914-1918) ತುರ್ಕಿ ಸಾಮ್ರಾಜ್ಯವು ಬ್ರಿಟನ್ನಿಗೆ ವಿರೋಧವಾಗಿ ನಿಂತು ಜರ್ಮನಿಯೊಂದಿಗೆ ಸೇರಿಕೊಂಡಿತು. ಯುದ್ಧದಲ್ಲಿ ಜರ್ಮನಿಯೂ ತುರ್ಕಿಯೂ ಪರಾಭವಗೊಂಡವು. ಖಲೀಫನ ತುರ್ಕಿ ಸಾಮ್ರಾಜ್ಯವು ಛಿದ್ರಛಿದ್ರವಾಗತೊಡಗಿತು. ತುರ್ಕಿಯ ಒಂದು ಭಾಗವಾಗಿದ್ದ ಅರೇಬಿಯಾ ಒಂದು ಸ್ವತಂತ್ರ ರಾಷ್ಟ್ರವಾಗಿ ಉದಯಿಸಿತು. ಅಂತೆಯೇ ಇತರ ಭಾಗಗಳಾದ ಜೋರ್ಡಾನ್, ಇರಾಕ್‌ಗಳೂ ಸ್ವತಂತ್ರ ರಾಜ್ಯಗಳಾಗಿ ಅಸ್ತಿತ್ವಕ್ಕೆ ಬಂದವು.

1919ರ ಕೊನೆಯಲ್ಲಿ ತುರ್ಕಿಯಲ್ಲಿ ನಡೆದ ಕ್ರಾಂತಿಯಿಂದಾಗಿ, ಒಬ್ಬ ಪ್ರತಿಭಾಶಾಲಿ ರಾಷ್ಟ್ರ ನಾಯಕನ ಉದಯವಾಯಿತು. ಅವನೇ ಅತಾತುರ್ಕ್ ಮುಸ್ತಾಫಾ ಕಮಾಲ್ ಪಾಷಾ. 1920 ಏಪ್ರಿಲ್‌ನಲ್ಲಿ ಅವನು ತುರ್ಕಿಯಲ್ಲಿ ತನ್ನ ತಾತ್ಕಾಲಿಕ ,ರಕಾರವನ್ನು ಸ್ಥಾಪಿಸಿದ. ಖಲೀಫನ ಭ್ರಷ್ಟ, ದುರ್ಬಲ ಅರಸೊತ್ತಿಗೆಯನ್ನು ಮೂಲೆಗೊತ್ತಿದ ತುರ್ಕಿಯನ್ನು ಪ್ರಗತಿಪರವಾದ ಬಲಾಢ್ಯ ರಾಷ್ಟ್ರವನ್ನಾಗಿ ಕಟ್ಟುವ ಯೋಜನೆ ಹಾಕಿದ. ತುರ್ಕಿಯ ಸುಲ್ತಾನ, ಖಲೀಫಾ ಸಕಲ ಮುಸ್ಲಿಮ್ ಲೋಕದ ಧರ್ಮಗುರು ಎನ್ನುವುದನ್ನು ಅನೇಕ ಮುಸ್ಲಿಮರು ನಂಬಿದ್ದರು. ಆದರೆ ತುರ್ಕಿಯನ್ನು ಖಲೀಫನಿಂದ ಬಿಡುಗಡೆಗೊಳಿಸಿ ತನ್ನ ದೇಶವನ್ನು ಮುಸ್ಲಿಮ್ ಕಂದಾಚಾರಗಳಿಂದ ವಿಮುಕ್ತಗೊಳಿಸಿ ಆಧುನಿಕ ರಾಷ್ಟ್ರವನ್ನಾಗಿಸಲು ಕಮಾಲ್ ಪಾಷಾ ಅನೇಕ ಪ್ರಬಲ ಕ್ರಮಗಳನ್ನು ಕೈಗೊಂಡ. ಆದರೆ ತುರ್ಕಿಯು ಒಂದು ಸ್ವತಂತ್ರ ಸ್ವಾಭಿಮಾನ ಸಂಪನ್ನವಾದ ರಾಷ್ಟ್ರವಾಗಿ ಬೆಳೆಯುವುದನ್ನು ಬ್ರಿಟಿಷರು ಸಹಿಸಲಿಲ್ಲ. ಕಮಾಲ್ ಪಾಷಾನ ವಿರುದ್ಧವಾಗಿ ಖಲೀಫನನ್ನು ಎತ್ತಿ ಹಿಡಿಯುವ ಪಿತೂರಿಯನ್ನು ಬ್ರಿಟಿಷರು ನಡೆಸತೊಡಗಿದರು. ಆಗಾಖಾನನನ್ನು ಪುಸಲಾಯಿಸಿ ಖಲೀಫನಿಗೆ ಬೆಂಬಲವಾಗಿ ನಿಲ್ಲಿಸಿದರು. ಇದು ತುರ್ಕರನ್ನು ಒಡೆಯುವ ಬ್ರಿಟಿಷ್ ತಂತ್ರವಾಗಿತ್ತು.

ಈ ಎಲ್ಲಾ ರಾಜಕೀಯ ಬೆಳವಣಿಗೆಯನ್ನು ಒಲ್ಲದ ಭಾರತೀಯ ಮುಸಲ್ಮಾನರು ತುರ್ಕಿಯ ಒಟ್ಟೊಮನ್ ಸಾಮ್ರಾಜ್ಯದ ದೊರೆ ಖಲೀಫನ ಪರವಾಗಿಯೂ ಮಿತ್ರರಾಷ್ಟ್ರಗಳ ವಿರುದ್ಧವಾಗಿಯೂ (ವಿಶೇಷವಾಗಿ ಬ್ರಿಟನ್ನಿನ ವುರುದ್ಧವಾಗಿ) ಒಂದು ಆಂದೋಲನವನ್ನು ನಡೆಸಿದರು. ಈ ಆಂದೋಲನವೇ ಖಿಲಾಫತ್ ಚಳವಳಿ, ತುರ್ಕಿಯ ಖಲೀಫನ ಸಾಮ್ರಾಜ್ಯ ನಾಮಾವಶೇಷವಾಗುವುದನ್ನರಿತ ಭಾರತೀಯ ಮುಸ್ಲಿಮರ ಮನಸ್ಸಿಗೆ ಅಸಹನೀಯ ಅಘಾತವಾಗಿತ್ತು. ಒಂದು ಕಡೆ ಖಲೀಫನ ಸಾಮ್ರಾಜ್ಯದ ವಿಚ್ಛೇದನ ಇನ್ನೊಂದೆಡೆ ಖಲೀಫನ ಪದಚ್ಯುತಿ. ಈ ಸಂದರ್ಭದಲ್ಲಿ ಖಲೀಫನ ರಾಜಪೀಠವನ್ನಾದರೂ ಉಳಿಸಬೇಕೆಂಬುದು ಭಾರತೀಯ ಮುಸ್ಲಿಮರ ದೂರದ ಆಸೆಯಾಗಿತ್ತು. ಅದಕ್ಕಾಗಿ ಬ್ರಿಟಿಷ್ ಸರಕಾರವನ್ನು ಒತ್ತಾಯಿಸತೊಡಗಿತು. ಆನಂತರ ಬೆದರಿಕೆ ಹಾಕಲು ಪ್ರಾರಂಭಿಸಿದರು. (ಆದರೆ ಮುಂದೆ ತುರ್ಕಿಯ ಮುಸಲ್ಮಾನರೇ ಖಲೀಫನನ್ನು ಆವನ ಪೀಠದಿಂದ ಉಚ್ಚಾಟಿಸಿದರು ಎಂಬುದನ್ನು ಮರೆಯಬಾರದು) ಅಂತೂ ಭಾರತದ ಮುಸ್ಲಿಮರಿಗೆ ಈಗ ಬ್ರಿಟಿಷ್ ಮೇಲೆ ಕ್ರೋಧ ಬೆಳೆಯಲಾರಂಭಿಸಿತು. ಅದೇ ತಿಂಗಳಲ್ಲಿ ದೆಹಲಿಯಲ್ಲಿ ಅಖಿಲ ಭಾರತ ಖಿಲಾಫತ್ ಅಧಿವೇಶನ ನಡೆದು, ಗಾಂಧೀಜಿಯವರನ್ನು ಅದರ ಅಧ್ಯಕ್ಷರನ್ನಾಗಿ ಆರಿಸಲಾಯಿತು.

ತಮ್ಮ ಬ್ರಿಟಿಷ್ ವಿರೋಧಿ ಹೋರಾಟದಲ್ಲಿ ಹಿಂದುಗಳೂ ಸೇರಿದರೆ ಮಾತ್ರ ಆಂದೋಲನ ಯಶಸ್ವಿಯಾಗಬಹುದೆದು ಭಾರತದ ಮುಸ್ಲಿಮರಿಗೆ ತಿಳಿದಿತ್ತು. ದೆಹಲಿಯ ಖಿಲಾಫತ್ ಅಧಿವೇಶನದಲ್ಲಿ ಮೌಲಾನಾ ಅಬ್ದುಲ್ ಬಾರಿ ಹೇಳಿದ ಮಾತುಗಳಿವು. "ಹಿಂದುಗಳ ಸಹಕಾರವನ್ನು ನಾವು ಮರೆತದ್ದೇ ಆದರೆ ಮುಸಲ್ಮಾನರ ಖಾನ್‌ದಾನ್ ಗಂಡಾಂತರಕ್ಕೆ ಒಳಗಾದೀತು. ನಾವು ಒಂದೇ ಮಣ್ಣಿನ ಮಕ್ಕಳು. ಆದ್ದರಿಂದ ಗೋಹತ್ಯೆಯನ್ನು ನಾವು ನಿಲ್ಲಿಸಬೇಕು". (ನೋಡಿ: ರಾಮಗೋಪಾಲ್, ಇಂಡಿಯನ್ ಮುಸ್ಲಿಮ್ಸ್, ಪುಟ138)

## 13.4 ಖಿಲಾಫತ್ ಚಳವಳಿ ಮತ್ತು ಕಾಂಗ್ರೆಸ್

ಭಾರತದ ಮುಸಲ್ಮಾನರನ್ನು ಬ್ರಿಟಿಷರ ಪ್ರಭಾವದಿಂದ ಹೊರ ತರಲು ಇದೊಂದು ಅವಕಾಶವೆಂದು ಅನೇಕ ಕಾಂಗ್ರೆಸ್ ನಾಯಕರು ದೃಢವಾಗಿ ನಂಬಿದ್ದರು. ಗಾಂಧೀಜಿಯವರು ಖಿಲಾಫತ್ ಚಳವಳಿಗೆ ಒಂದು ಸೈದ್ಧಾಂತಿಕ ಹಿನ್ನೆಲೆಯನ್ನು ಒದಗಿಸಿದರು. "ನೂರಾರು ವರ್ಷಗಳಿಗೊಮ್ಮೆ ಬರುವಂತಹ ಸುವರ್ಣ ಸಂಧಿ ಇದು. ಹಿಂದುಗಳೂ ಮುಸಲ್ಮಾನರೂ ಶಾಶ್ವತವಾದ ಮೈತ್ರಿಯನ್ನು ರೂಢಿಸಿಕೊಳ್ಳಬೇಕಾದರೆ ಇಸ್ಲಾಮಿನ ಗೌರವವನ್ನು ಕಾಯ್ದುಕೊಳ್ಳುವಲ್ಲಿ ಅದರೊಂದಿಗೆ ನಾವೂ ಪ್ರಾಣ ಕೊಡಬೇಕು". ಎಂದರು ಗಾಂಧೀಜಿ. (ನೋಡಿ: ವಿ.ಬಿ.ಕುಲಕರ್ಣಿ, ಇಂಡಿಯ ಏಂಡ್ ಪಾಕೀಸ್ಥಾನ್. ಪುಟ219). 1919 ದಶಂಬರದಲ್ಲಿ ನಡೆದ ಮುಸ್ಲಿಂ ಲೀಗ್ ಅಧಿವೇಶನದಲ್ಲಿ ಕಾಂಗ್ರೆಸ್ ಮುಂದಾಳುತನವನ್ನು ವಹಿಸಲು ಗಾಂಧೀಜಿಯವರೇ ಮುಂದೆ ಬಂದರು. 1920ರಲ್ಲಿ ಕಾಂಗ್ರೆಸ್ಸಿನ ತುರ್ತು ಅಧಿವೇಶನವನ್ನು ಕಲ್ಕತ್ತದಲ್ಲಿ ಕರೆಯಲಾಯಿತು. (ಆಶ್ಚರ್ಯದ ಮಾತೆಂದರೆ, ದೇಶವನ್ನು ವಿಭಜಿಸಬೇಕೆಂದು ಪಟ್ಟು ಹಿಡಿದ ಜಿನ್ನಾ ಕೂಡ. ತುರ್ಕಿ ಮತ್ತು ಖಲೀಫನ ಕುರಿತು ಭಾರತವು ತಲೆಕೆಡಿಸಿಕೊಳ್ಳುವ ಅಗತ್ಯವಿಲ್ಲ ಎಂದಿದ್ದರು. ಬೇರೆ ಒಂದು ದೇಶದ ಮೇಲೆ ನಿಷ್ಠೆಯನ್ನು ಬೆಳೆಸುವ ಈ ರೀತಿಯ ಆಂದೋಲನದಿಂದ ಭಾರತವು ಮುಸ್ಲಿಮರು ದೂರ ಉಳಿಯುವುದೇ ಕ್ಷೇಮಕರ ಎನ್ನುವ ಸ್ಪಷ್ಟ ಅಭಿಪ್ರಾಯ ತಳೆದಿದ್ದರು. ಅವರು ಸ್ವತಃ ಖಿಲಾಫತ್ ಚಳವಳಿದಿಂದ ದೂರ ಉಳಿದರು.)

ಈ ಮಧ್ಯೆ ತುರ್ಕಿಯನ್ನು 1923 ಅಕ್ಟೋಬರದಲ್ಲಿ ಗಣರಾಜ್ಯವನ್ನಾಗಿ ಘೋಷಿಸಲಾಯಿತು. ಖಲೀಫನು ತುರ್ಕಿ ಜನರ ರೋಷಕ್ಕೆ ಗುರಿಯಾಗಿ ಬ್ರಿಟಿಷರ ಹಡಗಿನಲ್ಲೇ ಕುಳಿತು ಮಾಲ್ಟಾಕ್ಕೆ ಫರಾರಿಯಾದನು. ಕಮಾಲ್ ಪಾಷಾ ತುರ್ಕಿಯನ್ನು ಸರ್ವಾಧಿಕಾರಿಯಾಗಿ ತನ್ನ ಮರಣದ ವರೆಗೂ (ನವೆಂಬರ್ 1938) ಆಳಿದನು. ತನ್ನ ಪ್ರಗತಿಪರ ಧೋರಣೆಯ ಸ್ವರೂಪವೆಂಬಂತೆ ಪಾಶ್ಚಾತ್ಯ ಉಡುಗೆಯನ್ನು ಧರಿಸಲು ಅವನು ಪ್ರೋತ್ಸಾಹಿಸಿದನು. ಸ್ತ್ರೀಯರಿಗೆ ಅನೇಕ ಬಗೆಯ ಸ್ವಾತಂತ್ರ್ಯ ನೀಡಿದನು. ಲ್ಯಾಟಿನ್ ಅಕ್ಷರ ಮಾಲೆಯನ್ನು ಜಾರಿಗೆ ತಂದನು. ಇಸ್ಲಾಮನ್ನು ರಾಜ್ಯದ ಅಧಿಕೃತ ಮತಧರ್ಮದ ಪಟ್ಟದಿಂದ ಕಿತ್ತೊಗೆದನು. ತುರ್ಕಿಯನ್ನು ಲೌಕಿಕ ರಾಜ್ಯವೆಂದು ಘೋಷಣೆ ಮಾಡಿದನು. ಆಧರೆ ಭಾರತ ಹಾಗೂ ಮುಸ್ಲಿಮ್ ರಾಷ್ಟ್ರಗಳ ಮುಸ್ಲಿಮರು ಅದನ್ನು ಪ್ರತಿಭಟಿಸಲಿಲ್ಲವೆನ್ನುವುದು ಆಶ್ಚರ್ಯದ ಸಂಗತಿ.

## 13.5 ಗಾಂಧೀಜಿ ಮತ್ತು ಖಿಲಾಫತ್ ಚಳವಳಿ

ಕಾಂಗ್ರೆಸ್ ತನ್ನ ಆರಂಭದ ಕಾಲದಿಂದಲೂ ಭಾರತದ ಸಮಸ್ತ ವರ್ಗಗಳಿಗೆ ಸಂಬಂಧ ಪಟ್ಟ ರಾಜಕೀಯ ಮತ್ತು ಆರ್ಥಿಕ ವಿಷಯಗಳಷ್ಟೇ ತನ್ನ ವ್ಯಾಪ್ತಿಯನ್ನು ಕಾರ್ಯಕ್ರಮಗಳನ್ನು ಸೀಮಿತಗೊಳಿಸಿತ್ತು; ಅದು ಮತೀಯ ವಿಷಯಗಳಿಂದ ದೂರವಿದ್ದ ಜಾತ್ಯತೀತ ಸಂಸ್ಥೆಯಾಗಿತ್ತು. ಹೀಗಿರುತ್ತ ಕಾಂಗ್ರೆಸ್ಸಿಗೆ ಒಂದು ಮತೀಯ

ಸಂಘಟನೆಯೊಂದಿಗೆ ಬೆರೆತುಕೊಳ್ಳುವುದು ಅಸಾಧ್ಯದ ಮಾತಾಗಿತ್ತು. ಆದರೆ ಗಾಂಧೀಜಿಯವರು ಇದಕ್ಕಿಂತ ಪೂರ್ತಿ ಭಿನ್ನವಾದ ಅಭಿಪ್ರಾಯ ತಳೆದಿದ್ದರು. "ಮುಸ್ಲಿಮರ ಪ್ರಮುಖ ಹಿತಾಸಕ್ತಿಗಳನ್ನು ಅಪಾಯಕ್ಕೊಳಗಾದಾಗ ಹಿಂದುಗಳು ಅವರಿಂದ ದೂರ ಉಳಿದರೆ ಕಾಂಗ್ರೆಸಿನ ಧೋರಣೆಯಾದ ಹಿಂದು -ಮುಸ್ಲಿಂ ಐಕ್ಯದ ಕೂಗು ಟೊಳ್ಳು ಘೋಷಣೆಯಾಗುತ್ತದೆ. ಮುಸ್ಲಿಮರ ಜತೆಗಿನ ತನ್ನ ಮೈತ್ರಿ ಮೂರು ಬಗೆಯಗುರಿ ಸಾಧನೆಗಳಿಗಾಗಿ, "ಎಂದು ಅವರು ಹೇಳಿದರು. ಆ ಮೂರು ಗುರಿಗಳಾವುವೆಂದರೆ - ಸತ್ಯಾಗ್ರಹ ವಿಧಾನದಿಂದ ಅನ್ಯಾಯದ ವಿರುದ್ಧ ಹೋರಾಡಿ ನ್ಯಾಯ ಪಡೆಯುವುದು ಒಂದನೆಯದು. ಹಿಂದುಗಳಿಗೆ ಮುಸ್ಲಿಮರ ಸ್ನೇಹವನ್ನು ಗಳಿಸಿಕೊಟ್ಟು ತನ್ಮೂಲಕ ಆಂತರಿಕ ಶಾಂತಿ ಸಾಧಿಸುವುದು ಎರಡನೆಯದು, ಮತ್ತು ಭಾರತೀಯರಿಗೆ ಬ್ರಿಟಿಷರು ಮತ್ತು ಅವರ ಸಂವಿಧಾನದ ಬಗೆಗಿರುವ ಕೋಪವನ್ನು ಪ್ರೀತಿಯಾಗಿ ಪರಿವರ್ತಿಸುವುದು ಮೂರನೆಯದು.

1920 ಮಾರ್ಚ್‌ನಲ್ಲಿ ಗಾಂಧೀಜಿಯವರು ಬ್ರಿಟಿಷ್ ಸರಕಾರಕ್ಕೆ ಸರಿಯಾದ ಎಚ್ಚರಿಕೆ ನೀಡಿದರು. ಅಸಹಕಾರ ಚಳವಳಿಗೆ ಶಿಫಾರಸು ಮಾಡಿದರು. ಅಸಹಕಾರ ಚಳವಳಿಯು ಖಿಲಾಫತ್ ಆಂದೋಲನ ನಡೆಸಲು ಒಂದು ತಂತ್ರವಾಗಬೇಕೆಂದು ವಾದಿಸುವ ಮೂಲಕ ಗಾಂಧೀಜಿಯವರು ಖಿಲಾಫತ್ ನಾಯಕರನ್ನು ಇಕ್ಕಟ್ಟಿಗೆ ಸಿಲುಕಿಸಿದರು ಯಾಕೆಂದರೆ ಖಿಲಾಫತ್ ನಾಯಕರಿಗೆ ಸತ್ಯಾಗ್ರಹ ವಿಧಾನದಲ್ಲಿ ನಂಬಿಕೆ ಇರಲಿಲ್ಲ. ಒಟ್ಟಿನಲ್ಲಿ ಅವರಿಗೆ ಕಾಂಗ್ರೆಸ್ಸಿನ ಸಹಕಾರ ಮಾತ್ರ ಬೇಕಿತ್ತು. ಈ ಒಂದು ಕಾರಣಕ್ಕಾಗಿ ಅವರು ಅಸಹಕಾರ ಸತ್ಯಾಗ್ರಹವನ್ನು ಅಧಿವೇಶನದ ವೇದಿಕೆಗಳಲ್ಲಿ ಬೆಂಬಲಿಸಿದರು. ಅವರ ಈ ಮನೋಭಾವವನ್ನು ತಿಳಿದ ಗಾಂಧೀಜಿಯವರಿಗೆ ಅನಂತರ ಬೇಸರವಾಯಿತು.

ಕೇಂದ್ರಿಯ ಖಿಲಾಫತ್ ಸಮಿತಿಯು 1920 ಆಗಸ್ಟ್ 1ರಂದು ಅಖಿಲ ಭಾರತ ಮಟ್ಟದ ಬೃಹತ್ ಮುಷ್ಕರವೊಂದನ್ನು ಸಂಘಟಿಸಿತು. ಹಲವು ಫೀರ್‌ಗಳು ಹಾಗೂ ಮುಲ್ಲಾಗಳು ಮುಂದೆಬಂದು ಮತೀಯ ನೆಲೆಯಲ್ಲಿ ಚಳವಳಿ ಹೂಡಲು ಅಶಿಕ್ಷಿತ ಮುಸ್ಲಿಂ ಜನ ಸಮೂಹವನ್ನು ಉರಿದುಂಬಿಸಿದರು. ಇದರ ಫಲವಾಗಿ ಚಳವಳಿ ತೀವ್ರತೆಯನ್ನು ಪಡೆದುಕೊಂಡಿತು. ಯುದ್ಧಕಾಲದ ಸೇವೆಗಾಗಿ ಬ್ರಿಟಿಷ್ ಸರ್ಕಾರ ನೀಡಿದ ಎಲ್ಲಾ ಪ್ರಶಸ್ತಿ ಪದಕಗಳನ್ನು ಗಾಂಧೀಜಿ ವೈಸ್‌ರಾಯ್ ಅವರಿಗೆ ಹಿಂದಿರುಗಿಸಿದರು.

ಭಾರತದಲ್ಲಿ ಖಿಲಾಫತ್ ಚಳವಳಿಯ ಆವೇಶ ಏರತೊಡಗಿತು. ಮುಲ್ಲಾಗಳು, ಮೌಲವಿಗಳು ಮುಸ್ಲಿಮರಿಗೆ ಭಾರತದ ಮುಸ್ಲಿಮೇತರ ಆಧಿಪತ್ಯದಲ್ಲಿ ಹೆಚ್ಚುಕಾಲ ಇರಬಾರದೆಂದು ಮುಸ್ಲಿಂ ರಾಜ್ಯಭಾರವಿರುವಲ್ಲಿಗೆ ಹಿಜರತ್ (ವಲಸೆ ಹೋಗುವುದು) ಹೋಗಬೇಕೆಂದು ಉಪದೇಶವಿತ್ತರು. ಇಂಥ ಉಪದೇಶದ ಗುಂಗಿಗೆ ಒಳಗಾದ ಸಿಂಧ್ ಮತ್ತು ವಾಯುವ್ಯ ಗಡಿಪ್ರಾಂತ್ಯದ ಸುಮಾರು ಇಪ್ಪತ್ತು ಸಾವಿರ ಮಂದಿ ಮುಸ್ಲಿಮರು 1920ರ ಆಗಸ್ಟ್‌ನಲ್ಲಿ ತಮ್ಮ ಮನೆಮಟಗಳನ್ನು ತೊರೆದು ದೂರದ ಮುಸ್ಲಿಮ್ ರಾಜ್ಯವಾದ ಅಫಘಾನಿಸ್ಥಾನಕ್ಕೆ ವಲಸೆ ಹೋಗಲು ಪ್ರಾರಂಭಿಸಿದರು. ಆದರೆ ಅಫಘಾನಿಸ್ಥಾನದ ಮುಸ್ಲಿಮರು ಭಾರತದ ಮುಸ್ಲಿಮರನ್ನು ಗಡಿಯಲ್ಲಿಯೇ ತಡೆದು ಬಲತ್ಕಾರವಾಗಿ ಹಿಂದಕ್ಕಟ್ಟಿದರು. ಹೀಗೆ ಅವರು ನಿರ್ಗತಿಕರಾಗಿ ವಾಪಾಸ್ಸು ಭಾರತಕ್ಕೆ ಬರಬೇಕಾಯಿತು.

ಜವಹಾರ್‌ಲಾಲ್ ನೆಹರು ಅವರು ತಮ್ಮ "ಡಿಸ್ಕವರಿ ಆಫ್ ಇಂಡಿಯ" ಕೃತಿಯಲ್ಲಿ (ಪುಟ 408-09) ಅಂದಿನ ಕಾಲದ ಮುಸ್ಲಿಮರ ಮನಸ್ಥಿತಿಯನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ಹೀಗೆ ವಿಶ್ಲೇಷಿಸಿದ್ದಾರೆ. "ತುರ್ಕಿ ಯುದ್ಧದ ಈ ಪ್ರಕ್ಷೋಭೆಯ ದಿನಗಳಲ್ಲಿ ಮುಸಲ್ಮಾನರು, ಹಿಂದೂಗಳು ಬೇರೆ ಬೇರೆ ಕಾರಣಗಳಿಗಾಗಿ ಆ ದೇಶಕ್ಕೆ ಸಹಾನುಭೂತಿ ತೋರಿದರು. ಮುಸಲ್ಮಾನರಿಗೆ ಅದು ತಮ್ಮ ಮತಿಯ ಕರ್ತವ್ಯ ಹಾಗೂ ಬೃಹತ್ ಇಸ್ಲಾಂ ಬಾಂಧವ್ಯದ ಸಂಕೇತ ಎನಿಸಿದರೆ, ಹಿಂದೂಗಳಿಗೆ ಅದು ಕಷ್ಟದಲ್ಲಿ ಸಿಲುಕಿರುವ ಪರರಾಜ್ಯವೆಂಬ ಅನುಕಂಪ, ಅಂತಹ ಮುಸ್ಲಿಮರು ತಮ್ಮ ರಾಷ್ಟ್ರೀಯ ಮೂಲಗಳಿಗಾಗಿ ಬೇರೆ ಕಡೆ ಹುಡಕಾಡತೊಡಗಿದರು. ಅಫಘಾನ್ ಮತ್ತು ಭಾರತದ ಮೊಗಲ್ ಆಳ್ವಿಕೆಗಳಲ್ಲಿ ಕೆಲಮಟ್ಟಿಗೆ ಅದನ್ನು ಅವರು ಗುರುತಿಸಿದ್ದರು. ಆದರೆ ಇದು ಅವರ ಮನಸ್ಸಿನ ಶೂನ್ಯವನ್ನು ಪೂರ್ಣವಾಗಿ ತುಂಬಲಿಲ್ಲ, ತಮ್ಮ ಸಾಂಸ್ಕೃತಿಕ ಬೇರುಗಳನ್ನು ಶೋಧಿಸ ಹೊರಟ ಅವರು ಬಾಗದಾದ್, ಸ್ಪೇನ್, ಕಾನ್‌ಸ್ಟೆಂಟಿನೋಪಲ್, ಮಧ್ಯಏಷ್ಯಾ ಮುಂತಾದ ಕಡೆ ಇಸ್ಲಾಂ ತನ್ನ ವಿಜಯಪತಾಕೆ ಹಾರಿಸಿ ಪ್ರೇರಕ ಶಕ್ತಿಯಾಗಿ ನಿಂತ ಕಾಲಾವಧಿಯನ್ನು ಜ್ಞಾಪಿಸಕೊಳ್ಳಲಾರಂಭಿಸಿದರು. ಭಾರತದ ಮೊಗಲ್ ಸಾಮ್ರಾಟರ ಭಾರತದ ಹೊರಗಿನ ಖಲೀಫ ಅಥವಾ ಯಾವುದೇ ಧಾರ್ಮಿಕ ಪ್ರಭುವನ್ನಾಗಲೀ ಅಂಗೀಕರಿಸಲಿಲ್ಲ. 19ನೆಯ ಶತಮಾನದ ಆರಂಭದಲ್ಲಿ ಮೊಗಲ್ ಸಾಮ್ರಾಜ್ಯವು ಸಂಪೂರ್ಣ ನಷ್ಟವಾದ ಮೇಲೆಯೇ ಭಾರತದ ಮಸೀದಿಗಳಲ್ಲಿ ತುರ್ಕಿ ಸುಲ್ತಾನನ ಪ್ರಸ್ತಾವ ಬರಲು ಆರಂಭವಾಯಿತು. 1857ರ ದಂಗೆಯ ನಂತರ ಈ ಪದ್ಧತಿ ಭದ್ರವಾಗಿ ಉಳಿಯಿತು.

ಆಲಿ ಸಹೋದರರೆಂದು ಖ್ಯಾತರಾದ ಮೊಹಮ್ಮದ್ ಆಲಿ ಮತ್ತು ಶೌಕತ್ ಆಲಿಯವರು ಖಿಲಾಫತ್ ಚಳವಳಿಯ ಪ್ರಮುಖ ನಾಯಕರಾಗಿದ್ದರು. ಆಲಿ ಸಹೋದರರಿಗೆ ಅನೇಕ ಕಾರಣಗಳಿಂದಾಗಿ ಗಾಂಧೀಜಿಯವರ ಮೇಲೆ ವೈಮನಸ್ಸು ಹೆಚ್ಚಾಗ ತೊಡಗಿತು. ಖಿಲಾಫತ್ ಚಳವಳಿಯು ದುರ್ಬಲವಾಗುತ್ತಾ ಬಂತು. ಮುಸ್ಲಿಮ್ ದೇಶವಾದ ಅಫಘಾನಿಸ್ಥಾನವು ಮುಸ್ಲಿಮೇರ ದೇಶವಾದ ಭಾರತದ ಮೇಲೆ ಸೈನ್ಯಾ ಕ್ರಮಣ ನಡೆಸಿದಲ್ಲಿ ಭಾರತದ ಮುಸಲ್ಮಾನರು ಅಫಘಾನಿಸ್ಥಾನಕ್ಕೆ

ನೆರವಾಗುವ ಸಾಧ್ಯತೆ ಸಮಜಾಯಿಸಿ ಹೇಳುವುದು ಗಾಂಧೀಜಿಯವರಿಗೆ ಅನಿವಾರ್ಯವಾಯಿತು. 1921ರ ಜುಲೈ ತಿಂಗಳಿನಲ್ಲಿ ನಡೆದ ಅಖಿಲ ಭಾರತ ಖಿಲಾಫತ್ ಅಧಿವೇಶನದಲ್ಲಿ ಮುಸ್ಲಿಮರು ಬ್ರಿಟಿಷ್ ಸೇನೆಯಲ್ಲಿ ಸೇವೆ ಸಲ್ಲಿಸುವುದು ತಪ್ಪು ಎನ್ನುವ ಒಂದು ನಿರ್ಣಯವನ್ನು ಅಂಗೀಕರಿಸಲಾಯಿತು. ಅದಕ್ಕೆ ಅಲಿ ಸಹೋದರರ ಬೆಂಬಲವಿತ್ತು. ಅವರನ್ನು 1921ರ ಸೆಪ್ಟಂಬರಿನಲ್ಲಿ ಬ್ರಿಟಿಷ್ ಸರಕಾರ ಬಂಧಿಸಿತು. ಖಿಲಾಫತ್ ಚಳವಳಿಯ ಒಂದು ಆಯುಧವಾಗಿದ್ದ ಅಸಹಕಾರ ಚಳವಳವು ಈಗ ಮುಸ್ಲಿಮೇತರ ನಿಯಂತ್ರಣಕ್ಕೆ ಬಂತು. ಇದರಿಂದ ಮುಸ್ಲಿಮರಲ್ಲಿ ಅಸಮಾಧಾನ ಬೆಳೆಯಿತು. ಇದು ಆಲಿ ಸಹೋದರರ ಅನುಪಸ್ಥಿತಿಯಲ್ಲಿ ಬಹಿರಂಗಕ್ಕೆ ಬಂತು.

ಚೌರಿಚೌರಾ ಘಟನೆಯ ಬಳಿಕ 1922ರ ಫೆಬ್ರುವರಿಯಲ್ಲಿ ಗಾಂಧೀಜಿಯವರು ಅಸಹಕಾರ ಚಳವಳವನ್ನು ನಿಲ್ಲಿಸಿ ಬಿಟ್ಟರು. (ಈ ಘಟನೆಗೂ ಖಿಲಾಫತ್ ಆಂದೋಲನಕ್ಕೂ ಯಾವ ಸಂಬಂಧವೂ ಇಲ್ಲ). ಅದೇ ವರ್ಷ ಮಾರ್ಚಿನಲ್ಲಿ ಗಾಂಧೀಜಿಯವರ ಬಂಧನವಾಯಿತು. ತುರ್ಕಿಯ ರಾಷ್ಟ್ರೀಯ ಮಹಾಸಭೆಯು ಖಲೀಫ್‌ಶಾಹಿಯ ರದ್ದಿತಿಯ ಮೊದಲ ಹೆಜ್ಜೆಯಾಗಿ 1922ರ ನವೆಂಬರಿನಲ್ಲಿ ಖಲೀಫರ ಲೌಕಿಕ ಅಧಿಕಾರವನ್ನು ಕಿತ್ತುಕೊಂಡಿತು. ಖಲೀಫ್‌ಶಾಹಿಯ ಪೂರ್ತಿ ನಿರ್ಮೂಲನ 1924ರ ಮಾರ್ಚ್ ತಿಂಗಳಲ್ಲಿ ನಡೆಯಿತು. ಅದರೊಂದಿಗೆ ಖಲೀಫ್‌ಶಾಹಿಯ ಸಮಸ್ಯೆ ಭಾರತದ ರಾಜಕೀಯದಿಂದ ಪೂರ್ತಿ ಮರೆಯಾಯಿತು.

## 13.6 ಖಿಲಾಫತ್ ಚಳವಳಿಯ ಪರಿಣಾಮಗಳು

ಖಿಲಾಫತ್ ಚಳವಳಿಯು ಭಾರತದ ಮುಸಲ್ಮಾನರಿಗೆ ಯಾವ ಪ್ರಯೋಜನವನ್ನೂ ತರಲಿಲ್ಲ. ಏಕೆಂದರೆ ಖಲೀಫರಿಗೆ ರಿಯಾಯಿತಿ ತೋರಿಸುವಂತೆ ಬ್ರಿಟಿಷರ ಮೇಲೆ ಹೇರಿದ ಒತ್ತಡವು ವಿಫಲವಾಯಿತು. ತುರ್ಕಿಯ ಮುಸ್ಲಿಮರೇ ಖಲೀಫರ ಪ್ರಭುತ್ವವನ್ನು ಕೊನೆಗೊಳಿಸಿದರು. ಅರಬರೂ ಅದನ್ನು ಅಲಕ್ಷಿಸಿದರು. ಆದ್ದರಿಂದ 1922-24ರಲ್ಲಿ ತಾವು ವಿನಾಕಾರಣ ಹೋರಾಡುತ್ತಿದ್ದೆವೆಂದು ಭಾರತದ ಮುಸ್ಲಿಮರಿಗೆ ಮನವರಿಕೆಯಾಯಿತು.

ಖಿಲಾಫತ್ ಚಳವಳಿಯ ಇತಿಹಾಸ ಹಾಗೂ ಅನಂತರದ ಅನೇಕ ಘಟನೆಗಳು, ಮುಸ್ಲಿಮರ ಮನಸ್ಥಿತಿಯನ್ನು ಗಾಂಧೀಜಿಯವರು ತಪ್ಪಾಗಿ ಅರ್ಥೈಸಿದುದನ್ನು ಸಾಬೀತು ಪಡಿಸಿದವು. ಸತ್ಯಾಗ್ರಹದ ಕುರಿತು ಅವರ ನಂಬಿಕೆಗೆ ಖಿಲಾಫತ್ ಚಳವಳಗಾರರ ಬೆಂಬಲ ದೊರಕಲಿಲ್ಲ. ಹಿಂದೂ ಸಮುದಾಯದ ಸಹಕಾರ ಪಡೆಯಲು ಗಾಂಧೀಜಿಯವರು ಅನಿವಾರ್ಯ ಎನಿಸುವ ವರೆಗೆ ಮಾತ್ರ ಸತ್ಯಾಗ್ರಹವನ್ನು ಅವರು ಅನುಮೋದಿಸಿದರು. ಗಾಂಧೀಜಿಯವರು ಗಾಢವಾಗಿ ನಂಬಿದ್ದ ಹಿಂದು - ಮುಸ್ಲಿಂ ಏಕತೆಯನ್ನು ಕೂಡ ಅವರಿಗೆ ಆಸಕ್ತಿ ಇರಲಿಲ್ಲ.

### 13.6.1 ಮಾಪಿಳ್ಳಾ ದಂಗೆ (1921)

ಖಿಲಾಫತ್ ಚಳಿವಳಿಯು 1921ರ ವೇಳೆಗೆ ಪೂರ್ಣ ವಿಫಲಗೊಂಡ ಬಳಿಕ, ಕೇರಳದಲ್ಲಿ ಅದು ಉಗ್ರರೂಪ ತಾಳಿತು. ಕೇರಳದ ಮಾಪಿಳ್ಳೆಗಳು ಬಡವರೂ ಅಶಿಕ್ಷಿತರೂ ಆಗಿದ್ದರು. ಅವರ ಜನಸಂಖ್ಯೆ ಸುಮಾರು ಒಂದು ಮಿಲಿಯದಷ್ಟಿತ್ತು. 8ನೇ ಅಥವಾ 9ನೇ ಶತಮಾನದಲ್ಲಿ ಮಲಬಾರಿನ ಕರಾವಳಿಯಲ್ಲಿ ನೆಲೆಸಿದ ಅರಬರು ಹೆಚ್ಚಾಗಿ ಭಾರತೀಯ ಸ್ತ್ರೀಯರನ್ನು ವಿವಾಹವಾಗಿದ್ದರು. ಅವರ ಸಂತತಿಯವರೇ ಈ ಮಾಪಿಳ್ಳೆಗಳು. ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಸುಮಾರು ಮೂವತ್ತೈದಕ್ಕೂ ಹೆಚ್ಚು ಚಿಕ್ಕಪುಟ್ಟ ದಂಗೆಗಳಿಗೆ ಇವರು ಕಾರಣರಾಗಿದ್ದರು. ಆಗಸ್ಟ್ 1921ರಲ್ಲಿ ಇವರು ಅತ್ಯಂತ ಭೀಕರವಾದ ದಂಗೆಯೆಬ್ಬಿಸಿದರು.

ಮಾಪಿಳ್ಳೆಗಳು ಮೊದಲು ಬ್ರಿಟಿಷರ ವಿರುದ್ಧ ತಿರುಗಿ ಬಿದ್ದರು. ಕೆಲವೆಡೆ ಬ್ರಿಟಿಷ್ ಸೈನಿಕರೊಡನೆ ಕಾದಾಟವನ್ನೂ ನಡೆಸಿ ಅಪಾರ ಸಾವು -ನೋವುಗಳನ್ನು ಅನುಭವಿಸಿದರು. ಮಾಪಿಳ್ಳೆಗಳ ರೋಷ ಕ್ರಮೇಣ ಬಡಪಾಯಿ ಹಿಂದುಗಳ ಮೇಲೆ ತಿರುಗಿತು.

ಸರ್ವಂಟ್ಸ್ ಆಫ್ ಇಂಡಿಯ ಸೊಸೈಟಿಯು ನಡೆಸಿದ ತನಿಖಾ ವರದಿಯಂತೆ, ಒಂದುವರೆ ಸಾವಿರ ಹಿಂದುಗಳ ಕೊಲೆ, ಇಪ್ಪತ್ತು ಸಾವಿಕ ಮಂದಿಯ ಬಲಾತ್ಕಾರದ ಮತಾಂತರ ಮತ್ತು ಸುಮಾರು ಮೂರು ಕೋಟಿ ರೂಪಾಯಿ ಆಸ್ತಿಯ ಲೂಟಿಯಾಯಿತು. ಡಾ.ಅನಿಬೆಸೆಂಟರು ಬರದಿರುವಂತೆ, "ಮಾಪಿಳ್ಳೆಗಳು ಕೊಲೆ -ಲೂಟಿ ಅತ್ಯಾಚಾರಗಳ ಭೀಕರ ತಾಂಡವ ನಡೆಸಿದರು. ಮತಾಂತರಕ್ಕೆ ವಿರೋಧಿಸಿದವರನ್ನು ಕೊಂದರು;ಇಲ್ಲವೇ ಹೊಡೆದೋಡಿಸಿದರು. ಸುಮಾರು ಒಂದು ಲಕ್ಷ ಮಂದಿ ಉಟ್ಟ ಬಟ್ಟೆಯಲ್ಲಿ ನಿರಾಶ್ರಿತರಾಗಿ ಬೇರೆ ಕಡೆ ಓಡಿ ಹೋಗಬೇಕಾಯಿತು." (ನೋಡಿ: ದಿ ಫ್ಯೂಚರ್ ಆಫ್ ಇಂಡಿಯನ್ ಪೊಲಿಟಿಕ್ಸ್, ಪುಟ252).

ಆಗೀನ ವೈಸ್‌ರಾಯ್ ಲಾರ್ಡ್ ರಿಡಿಂಗ್‌ರ ಪತ್ನಿಗೆ ಮಲಬಾರಿನ ಹಿಂದು ಮಹಿಳೆಯರು ಹೃದಯವಿದ್ರಾವಕ ಮನವಿಯನ್ನು ಸಲ್ಲಿಸಿದರು. ನೂರಾರು ಮಂದಿ

ಹಿಂದು ಸ್ತ್ರೀಯರು ತಮ್ಮ ಮಾನ ಸಂರಕ್ಷಣೆಗಾಗಿ ಬಾವಿಯಲ್ಲಿ ಹಾರಿ ಆತ್ಮಾರ್ಪಣೆ ಮಾಡಿಕೊಂಡರು. (ಇನ್ನೂ ಹೆಚ್ಚಿನ ಕಣ್ಣೀರ ಕಥೆಯ ವಿವರಗಳಿಗಾಗಿ ನೋಡಿ: ಶಂಕರನ್ ನಾಯರ್, ಗಾಂಧಿ ಏಂಡ್ ಎನಾರ್ಕಿ, ಪುಟ139).

ಇಂತಹ ಕ್ರೂರ ಕೃತ್ಯಗಳಿಗೆ ಕಾಂಗ್ರೆಸ್ ತೋರಿದ ಪ್ರತಿಕ್ರಿಯೆ ನಿಜವಾಗಿಯೂ ನಿರಾಶದಾಯಕವಾಗಿತ್ತು, ಕಾಂಗ್ರೆಸ್ಸಿಗೆ ಹಿಂದು ಮುಸ್ಲಿಂ ಏಕತೆಯ ಬಗ್ಗೆ ಮಾತ್ರ ಕಾಳಜಿ, ಮಾಪಿಳ್ಳೆ ದಂಗೆಯನ್ನು ಖಂಡಿಸಿದರೆ ಮುಸ್ಲಿಮರು ತಮ್ಮಿಂದ ದೂರವಾಗಬಹುದೆಂಬ ಚಿಂತೆ. ಆದ್ದರಿಂದ ಕಾಂಗ್ರೆಸ್ ತನ್ನ ವಿಷಯ ನಿಯಾಮಕ ಸಭೆಯಲ್ಲಿ ಖಂಡಿಸಿದ್ದು ಮಾಪಿಳ್ಳೆಗಳನ್ನಲ್ಲ. ಬದಲು ಮಾಪಿಳ್ಳಾ ದಂಗೆಗಳನ್ನು ನಿಗ್ರಹಿಸಲು ಬ್ರಿಟಿಷ್ ಸರಕಾರ ಕೈಗೊಂಡ ಉಗ್ರಕ್ರಮಗಳನ್ನು ಗಾಂಧೀಜಿಯವರು ಮಾಪಿಳ್ಳಾ ದಂಗೆಗಳ ಕುರಿತಾಗಿ ಹೇಳಿದ ಮಾತುಗಳಿವು. "ಮಾಪಿಳ್ಳೆಗಳು ಧೀರರು, ಧರ್ಮಬೀರುಗಳು. ಅವರು ತಾವು ಧರ್ಮ ಎಂದು ನಂಬಿದ ಸಂಗತಿಗಳಿಗಾಗಿ, ತಾವು ಧಾರ್ಮಿಕ ಎಂದು ನಂಬಿದ ರೀತಿಯಲ್ಲಿ ಹೋರಾಡಿದರು". (ನೋಡಿ: ಬಿ.ಆರ್.ಅಂಬೇಡ್ಕರ್, ಥಾಟ್ಸ್ ಆ ಪಾಕೀಸ್ಥಾನ್, ಪುಟ 148).

ಮಾಪಿಳ್ಳಾ ದಂಗೆಯ ವೇಳೆ ಹಾನಿಗೊಳಗಾದ ಮಾಪಿಳ್ಳೆಗಳಿಗೆ ಪರಿಹಾರ ನೀಡಬೇಕೆನ್ನುವ ಒಂದು ಗೊತ್ತುವಳಿಯನ್ನು ಕಾಕಿನಾಡದ ಖಿಲಾಫತ್ ಅಧಿವೇಶನದಲ್ಲಿ (1923) ಅಂಗೀಕರಿಸಲಾಯಿತು. ಸ್ವತಃ ಖಿಲಾಫತ್ ಅಧ್ಯಕ್ಷ ಶೌಕತ್ ಆಲಿಯವರು ಮಂಡಿಸಿದ ಈ ಗೊತ್ತುವಳಿಯಲ್ಲಿ, ದಂಗೆಯಲ್ಲಿ ಮಡಿದ, ಹಾನಿಗೀಡಾದ ಹಿಂದುಗಳ ಬಗ್ಗೆ ಪ್ರಸ್ತಾವವಿರಲಿಲ್ಲ.

ಗಾಂಧೀಜಿ ಮತ್ತು ಮೊಹಮ್ಮದ್ ಆಲಿಯವರು ಅವಸರವಾಗಿ ಬೆಸೆದ ಸೇತುವೆಯು 1923ರಲ್ಲಿ ಪೂರ್ತಿ ಮುರಿಯಿತು. ಖಿಲಾಫತ್ ವಿಷಯವು ತನ್ನ ರಾಜಕೀಯ ಮಹತ್ವವನ್ನು ಕಳೆದುಕೊಳ್ಳುತ್ತಲೇ ಮೊಹಮ್ಮದ್ ಆಲಿ (ತಾವು ಅಧ್ಯಕ್ಷರಾಗಿದ್ದ) ಕಾಂಗ್ರೆಸ್ಸನ್ನು ಬಿಟ್ಟರು. ಆಲಿ ಬಂಧುಗಳಿಬ್ಬರೂ ಅತ್ಯಂತ ಕಟ್ಟಾ ಇಸ್ಲಾಂ ಸಾಮ್ರಾಜ್ಯವಾದಿಗಳಾಗಿದ್ದರು. 1924ರಲ್ಲಿ ಮೊಹಮ್ಮದ್ ಆಲಿಯವರು ಗಾಂಧೀಜಿಯವರನ್ನು ವೈಯಕ್ತಿಕವಾಗಿ ಟೀಕಿಸಲು ಪ್ರಾರಂಭಿಸಿದರು. ಅಲೀಘರ ಮತ್ತು ಅಜಮೀರಗಳಲ್ಲಿ ಅವರು ನೀಡಿದ ಸಾರ್ವಜನಿಕ ಹೇಳಿಕೆಗಳಲ್ಲಿ, "ಗಾಂಧೀಜಿಯವರ ಶೀಲ ಅದೆಷ್ಟೇ ಪರಿಶುದ್ಧವಾಗಿರಲಿ, ನನ್ನ ಮತದ ದೃಷ್ಟಿಯಿಂದ ನಾನು ಅವರನ್ನು ಓರ್ವ ನೀತಿಗೆಟ್ಟ ಮುಸಲ್ಮಾನನಿಗಿಂತ ಕಡೆಯಾಗಿ ಕಾಣುವೆ". ಎಂದು ಹೇಳಿದರು. ಮುಂದೆ ಒಂದು ವರ್ಷದ ಅನಂತರ ಲಖನೌದ ಬಹಿರಂಗ ಸಭೆಯಲ್ಲಿ ಪ್ರಶ್ನೆ ಕೇಳಿದಾಗ ಇನ್ನೂ ಹೆಚ್ಚು ಉಗ್ರವಾಗಿ ಗಾಂಧೀಜಿಯವರ ಬಗ್ಗೆ."ಆಹುದು, ಆ ರೀತಿ ನಾನು ಹೇಳಿದ್ದು ನಿಜ. ನನ್ನ ಮತ ನಂಬಿಕೆಯ ಪ್ರಕಾರ ಯಾವನೇ ಪತಿತ, ವ್ಯಭಿಚಾರಿ ಮುಸಲ್ಮಾನನು ಸಹ ಗಾಂಧಿಯವರಿಗಿಂತ ಶ್ರೇಷ್ಠ". ಎಂದರು. (ನೋಡಿ: ಆರ್.ಸಿ. ಮಜುಂದಾರ್, ಹಿಸ್ಟರಿ ಆಫ್ ದಿ ಫ್ರಿಡಮ್ ಮೂವ್‌ಮೆಂಟ್, ಸಂಪುಟ XI, ಪುಟ 336). ಗಾಂಧೀಜಿ.ವರ ಅಸಹಕಾರ ಚಳವಳಿಯಿಂದ ದೂರವಿರಬೇಕೆಂದು ಮೊಹಮ್ಮದ್ ಆಲಿಯವರು ಮುಸ್ಲಿಮರಿಗೆ ಕರೆ ನೀಡಿದರು.

ಕಾಂಗ್ರೆಸ್ ಮತ್ತು ಖಿಲಾಫತ್ ನಡುವೆ ಬಿರುಕು ಅನಿವಾರ್ಯವಾಯಿತು. ಕಾರಣವೇನೆಂದರೆ ಅವುಗಳಲ್ಲಿ ಸಮಾನ ಆಸಕ್ತಿ ಅಥವಾ ದೃಷ್ಟಿಕೋನಗಳಿರಲಿಲ್ಲ. "ರಾಷ್ಟ್ರೀಯತೆ, ರಾಜಕಾರಣ, ಮತ, ಅಧ್ಯಾತ್ಮ ಹಾಗೂ ಮತಾಂಧತೆಗಳ ವಿಚಿತ್ರ ಮಿಶ್ರಣ," ಎಂದು ಖಿಲಾಫತ್ ಚಳವಳಿಯನ್ನು ಜವಾಹರಲಾಲ್ ನೆಹರು ಬಣ್ಣಿಸಿದರು. ಹಿಂದು ಮುಸ್ಲಿಮ್ ಸಮಸ್ಯೆಯನ್ನು ವಾಸ್ತವ ದೃಷ್ಟಿಕೋನದಿಂದ ಪರಿಶೀಲಿಸುವಲ್ಲಿ ಗಾಂಧೀಜಿಯವರ ವೈಫಲ್ಯವನ್ನು ಇದು ತೋರಿಸುತ್ತದೆ.

ಉಮೆಲಾಗಳನ್ನು ಖಿಲಾಫತ್ ಚಳವಳಿಯಲ್ಲಿ ತೊಡಗಿಸಿ, ಮೊಹಮ್ಮದ್ ಆಲಿಯವರು ಮುಸ್ಲಿಂ ರಾಜಕಾರಣದ ಮೇಲೆ ಮತೀಯ ಪ್ರಭಾವವನ್ನು ತೀವ್ರಗೊಳಿಸಿದರು. ಖಿಲಾಫತ್ ನಂತರದ ವರ್ಷಗಳಲ್ಲಿ ಕೋಮು ಗಲಭೆಗಳಾಗಲು ಇದೇ ಪ್ರಮುಖ ಕಾರಣ.

ಆ ಕಾಲದಲ್ಲಿ ಎಲ್ಲೆಲ್ಲೂ ಮುಸಲ್ಮಾನರು ಹಿಂದುಗಳನ್ನು ಮತಾಂತರಿಸುವ ಕಾರ್ಯದಲ್ಲಿ ತೊಡಗಿದ್ದರು. ಇದಕ್ಕೆ "ಭಾರತೀಯ ಕೇಂದ್ರ ಸಮಿತಿ"ಯ ಸದಸ್ಯ ಡಾ. ಸುಹ್ರವರ್ದಿ ತಯಾರಿಸಿದ ವರದಿಯೇ ಸಾಕ್ಷಿ. ಈ ಸಂದರ್ಭದಲ್ಲಿ ಸ್ವಾಮಿ ಶ್ರದ್ಧಾನಂದರು ಹಿಂದು ಸಮಾಜದ ರಕ್ಷಣೆಗಾಗಿ ಶುದ್ಧಿ ಆಂದೋಲನ" ಪ್ರಾರಂಭಿಸಿದರು. ಖಿಲಾಫತ್ ಆಂದೋಲನಕ್ಕೆ ಪ್ರಬಲ ಬೆಂಬಲ ನೀಡಿ, ಬಂಧನಕ್ಕೆ ಒಳಗಾಗಿದ್ದ ಪ್ರಮುಖರಲ್ಲಿ ಸ್ವಾಮಿ ಶ್ರದ್ಧಾನಂದರು ಒಬ್ಬರು. ಅವರನ್ನು ದೆಹಲಿಯ ಜುಮ್ಮಾ ಮಸೀದಿಯೊಳಕ್ಕೆ ಸ್ವಾಗತಿಸಿ ಜಯಘೋಷಗೈದಿದ್ದರು. ಆದರೆ "ಶುದ್ಧಿ ಆಂದೋಲನ" ಪ್ರಾರಂಭಿಸಿದ ಬಳಿಕ ಮುಸ್ಲಿಮರು ಅವರನ್ನು ತಮ್ಮ ಕಡು ವೈರಿಯೆಂದು ಭಾವಿಸಿದರು. ಸ್ವಾಮಿ ಶ್ರದ್ಧಾನಂದರು ಖಾಯಿಲೆಯಿಂದ ಮಲಗಿದ್ದ ವೇಳೆ, 1926 ಡಿಸೆಂಬರ್ 23ರಿಂದ ಅಬ್ದುಲ್ ರಷೀದ್ ಎಂಬ ಯುವಕ ಅವರ ಮೇಲೆ ನಾಲ್ಕು ಬಾರಿ ಗುಂಡು ಹಾರಿಸಿ ಕೊಂದುಬಿಟ್ಟ. ಇದರ ಪರಿಣಾಮವಾಗಿ ದೇಶದ ಅನೇಕ ಕಡೆ ದಂಗೆಗಳಂತೂ ಅತ್ಯಂತ ಕಾಳ್ಗಿಚ್ಚು ಹಬ್ಬಿತು. 1924ರಲ್ಲಿ ಕೋಹಟ್‌ನಲ್ಲಿ ನಡೆದ ಭೀಷಣ ದಂಗೆಗಳಂತೂ ಅತ್ಯಂತ ಹಿಂಸಾತ್ಮಕವಾಗಿದ್ದವು. ಕಾಂಗ್ರೆಸ್ ನಾಯಕ ಪಟ್ಟಾಭಿ ಸೀತಾರಾಮಯ್ಯ ಅವರು "ಕಾಂಗ್ರೆಸ್ ಚರಿತ್ರೆ" ಯಲ್ಲಿ ಅದರ ಬಗ್ಗೆ ಹೀಗೆ ಬರೆದಿದ್ದಾರೆ. "1924ರ ಸೆಪ್ಟೆಂಬರ್ 9-10ರ ಘಟನೆಗಳ ನಡೆದು ಈಗ ಒಂದು ದಶಕ ಕಳೆದಿದೆ. ಆದರೆ

ಕೋಹಟ್ ದೌರ್ಜನ್ಯಗಳ ವರದಿಯ ಮೇಲೆ ಕಣ್ಣಾಡಿಸಿದರೆ ಮೈ ಮೇಲೆ ಹಾವು ಹರಿದಂತಾಗುತ್ತದೆ." (ಪುಟ465)

ಖಿಲಾಫತ್ತಿನ ಪ್ರಥಮ ಚಳವಳಿಗಾರರಲ್ಲಿ ಮೌಲಾನಾ ಅಬ್ದುಲ್ ಕಲಂ ಆಜಾದ್ ಅವರು ಮಾತ್ರ ದೃಢವಾದ ರಾಷ್ಟ್ರೀಯವಾದಿಯಾಗಿ ನಿಂತು, ಹಲವಾರು ವರ್ಷಗಳ ಕಾಲ ಕಾಂಗ್ರೆಸ್ಸಿನಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಅದಕ್ಕಾಗಿ ಅವರು ಭಾರೀ ದಂಡವನ್ನೇ ತೆರಬೇಕಾಯಿತು. ಅವರು ತಮ್ಮ ಸಮುದಾಯದಲ್ಲಿ ರಾಜಕೀಯ ವರ್ಚಸ್ಸನ್ನು ಕಳೆದು ಕೊಂಡವರಲ್ಲದೆ, ಇಸ್ಲಾಮ್ ಬಗೆಗಿನ ಅವರ ವಿದ್ವತ್ತಿಗೂ ಮನ್ನಣೆ ದೊರಕಲಿಲ್ಲ.

## 13.7 ಘಟಕದ ಸಾರಾಂಶ

ಈ ಘಟಕವನ್ನು ಅಧ್ಯಯನ ನಡೆಸಿದ ನಂತರ ನಾವು

- ಖಿಲಾಫತ್ ಚಳುವಳಿ ಮತ್ತು ಅದರ ಉದ್ದೇಶಗಳ ಬಗ್ಗೆ ತಿಳಿದೆವು.
- ಖಿಲಾಫತ್ ಚಳುವಳಿಯ ಹಿನ್ನೆಲೆ ಮತ್ತು ಅದರ ಗತಿಯ ತೀವ್ರತೆ ತಿಳಿದೆವು.
- ಖಿಲಾಫತ್ ಚಳುವಳಿ ರಾಷ್ಟ್ರೀಯ ಕಾಂಗ್ರೆಸ್ ಮತ್ತು ಗಾಂಧೀಜಿಯವರೊಂದಿಗೆ ಹೊಂದಿದ್ದ ಸಂಬಂಧಗಳ ಬಗ್ಗೆ ತಿಳಿದುಕೊಂಡೆವು.
- ಖಿಲಾಫತ್ ಚಳುವಳಿಯ ಪರಿಣಾಮಗಳ ಬಗ್ಗೆಯೂ ಸಹ ತಿಳಿದುಕೊಳ್ಳಲಾಯಿತು.

## 13.8 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಖಿಲಾಫತ್ ಚಳುವಳಿಯ ಉಗಮ ಮತ್ತು ಅದರ ಗತಿಯನ್ನು ವಿವರಿಸಿ.
2. ಖಿಲಾಫತ್ ಚಳುವಳಿಯು ಕಾಂಗ್ರೆಸ್ ಮತ್ತು ಗಾಂಧೀಜಿಯವರೊಂದಿಗೆ ಹೊಂದಿದ್ದು ಸಂಬಂಧವನ್ನು ತಿಳಿಸಿ.
3. ಖಿಲಾಫತ್ ಚಳುವಳಿಯ ಪರಿಣಾಮಗಳನ್ನು ತಿಳಿಸಿ.

## 13.9 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


1. Hansraj : History of Modern India
2. Sumit Sarkar : Modern India
3. Prasad L.P : History of Modern India
4. ನರೇಂದ್ರಪ್ರಸಾದ್ ಮತ್ತು ಇತರರು : ಭಾರತ ಸ್ವಾತಂತ್ರ್ಯ ಚಳುವಳಿ

## ಘಟಕ : 14 ಸ್ವರಾಜ್ಯ ವಾದಿಗಳು ಮತ್ತು ಭಾರತದ ರಾಜಕೀಯ

ವಿಷಯಸೂಚಿ

## 14.0 ಉದ್ದೇಶಗಳು

ಈ ಘಟಕದ ಉದ್ದೇಶವೆಂದರೆ ಭಾರತ ಸ್ವಾತಂತ್ರ್ಯ ಚಳುವಳಿಯಲ್ಲಿ ಸ್ವರಾಜ್ಯ ಪಕ್ಷದ ಪಾತ್ರವನ್ನು ತಿಳಿಯಲಾಗುವುದು. ಸ್ವರಾಜ್ಯವನ್ನು ಪಡೆಯಲು ತೀರ್ಮಾನಿಸಿ ಸ್ವರಾಜ್ಯ ಪಕ್ಷವನ್ನು ಸ್ಥಾಪಿಸಿದ ಮೋತಿಲಾಲ್ ನೆಹರು ಮುಂತಾದವರ ಬಗ್ಗೆ ತಿಳಿಯುತ್ತೇವೆ. ಸ್ವರಾಜ್ಯ ಪಕ್ಷದ ತತ್ವಗಳು ಮತ್ತು ಚುನಾವಣೆಯಲ್ಲಿ ಭಾಗವಹಿಸಿದ್ದು ಹಾಗೂ ಇವರ ಸಾಧನೆಗಳನ್ನು ಇಲ್ಲಿ ಅಧ್ಯಯನ ಮಾಡಲಾಗುವುದು.

## 14.1 ಪೀಠಿಕೆ

ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಅನೇಕ ಪಕ್ಷಗಳಾದ ಕಾಂಗ್ರೆಸ್ ಮುಸ್ಲಿಂಲೀಗ್ ಪ್ರಮುಖ ಪಾತ್ರ ವಹಿಸಿದ್ದು ಚಳುವಳಿ ಕಾರ್ಯ ವೈಖರಿ ಬಗ್ಗೆ ಬೇಸರ ಹೊಂದಿದ್ದು, ಶೀಘ್ರದಲ್ಲಿ ಸ್ವಾತಂತ್ರ್ಯ ಪಡೆಯಬೇಕೆಂದು ಮಹದಾಶೆಯಿಂದ ಹುಟ್ಟಿಗೊಂಡ ಪಕ್ಷ ಸ್ವರಾಜ್ಯ ತತ್ವ. ಈ ಪಕ್ಷದ ಗುರಿಗಳೇನು? ಕಾರ್ಯವೈಖರಿಗಳೇನು?, ಇವರು ಕೈಗೊಂಡ ನಿರ್ಣಯಗಳೇನು ಮತ್ತು ಸ್ವತಂತ್ರ್ಯ ಚಳುವಳಿಗೆ ಇವರು ಮಾಡಿದ ತ್ಯಾಗ ಮುಂತಾದವುಗಳ ಬಗ್ಗೆ ಹೆಚ್ಚಿನ ವಿಷಯವನ್ನು ತಿಳಿಯಲು ಈ ಘಟಕದಲ್ಲಿ ಪ್ರಯತ್ನ ಮಾಡಲಾಗುವುದು.

## 14.2 ಸ್ವರಾಜ್ಯ ಪಕ್ಷ

**ಸ್ವರಾಜ್ಯ ಪಕ್ಷದ ಉದಯ ಗಯಾ ಕಾಂಗ್ರೆಸ್ (1922):**

ಅಸಹಕಾರ ಚಳವಳಿಯನ್ನು ಹಠಾತ್ತಾಗಿ ನಿಲ್ಲಿಸಲಾಯಿತು. ಗಾಂಧೀಜಿಯವರ ಬಂಧನದಿಂದ ಅವರ ಸಕ್ರಿಯ ನಾಯಕತ್ವವೂ ಇಲ್ಲವಾಯಿತು. ಈ ಕಾರಣಗಳಿಂದಾಗಿ ಬೇರಾವುದೇ ರೀತಿಯ ಕಾಯಿದೆ ಭಂಗ ಚಳುವಳಿ ಮುಂದುವರಿಯಬೇಕೇ ಅಥವಾ ಅದೇ ರೀತಿಯ ಇತರ ಯಾವುದಾದರೂ ವಿಧಾನವನ್ನು ಅನುಸರಿಸಬೇಕೇ -ಎನ್ನುವ ವಿಷಯದಲ್ಲಿ ನಿರ್ಧಾರ ಕೈಕೊಳ್ಳುವುದು ಕಾಂಗ್ರೆಸ್ಸಿಗೆ ಅನಿವಾರ್ಯವಾಯಿತು. ಒಂದು ನಿರ್ದಿಷ್ಟ ಕಾನೂನಿನ ಉಲ್ಲಂಘನೆ ಅಥವಾ ಒಂದು ತೆರಿಗೆಯನ್ನು ಪಾವತಿ ಮಾಡದೆ ಇರುವ ಸಾಮೂಹಿಕ ಕಾಯಿದೆ ಭಂಗಕ್ಕೆ ದೇಶ ಇನ್ನೂ ಪೂರ್ಣವಾಗಿ ಸಿದ್ಧಗೊಂಡಿಲ್ಲವೆಂದು ಹಲವು ಮಂದಿ ಹಿರಿಯ ನಾಯಕರನ್ನೊಳಗೊಂಡ "ಕಾಯಿದೆ ಭಂಗ ಸಮಿತಿ"ಯು 1922ರ ಅಂತ್ಯದ ಹೊತ್ತಿಗೆ ವರದಿ ಮಾಡಿತು. ಶಾಸನ ಸಭೆಗಳನ್ನು ಬಹಿಷ್ಕರಿಸುವ ವಿಷಯದಲ್ಲಿ ಈ ಸಮಿತಿಯೊಳಗೆ ಭಿನ್ನಾಭಿಪ್ರಾಯವಿತ್ತು. ಪಂಜಾಬಿಗೆ ಪರಿಹಾರ, ಖಿಲಾಫತ್ ತಪ್ಪುಗಳು, ಮತ್ತು ತಕ್ಷಣ ಸ್ವರಾಜ್ಯ -ಈ ಅಂಶಗಳನ್ನು ಮುಂದಿಟ್ಟುಕೊಂಡು ಕಾಂಗ್ರೆಸ್ಸಿಗರು ಚುನಾವಣೆಯಲ್ಲಿ ಪಾಲುಗೊಳ್ಳಬೇಕೆಂದು ಒಂದು ಗುಂಪು ಶಾಸನ ಸಭೆಗಳ ಬಹಿಷ್ಕಾರದ ವಿಷಯದಲ್ಲಿ ಕಾಂಗ್ರೆಸಿನ ಧೋರಣೆಯಲ್ಲಿ ಬದಲಾವಣೆ ಬೇಡ ಎಂದು ಸೂಚಿಸಿತು. ಈ ಗುಂಪುಗಳನ್ನು ಅನಂತರ ಅನುಕ್ರಮವಾಗಿ "ಪರಿವರ್ತನ ಪರ" ಹಾಗೂ "ಪರಿವರ್ತನ ವಿರೋಧಿ" ಎಂದು ಕರೆಯಲಾಯಿತು.

1922ರಲ್ಲಿ ಕಾಂಗ್ರೆಸ್ ಅಧಿವೇಶನವು ಚಿತ್ತರಂಜನ್ ದಾಸ್ ಅವರ ಅಧ್ಯಕ್ಷತೆಯಲ್ಲಿ ಗಯಾದಲ್ಲಿ ನಡೆಯಿತು. ಸಿ.ರಾಜಗೋಪಾಲಾಚಾರಿ ಅವರ ನೇತೃತ್ವದ "ಪರಿವರ್ತನ ವಿರೋಧಿ"ಗಳ ಗುಂಪು "ಪರಿವರ್ತನ ಪರ" ಗುಂಪನ್ನು ಸೋಲಿಸಿತು. ಚಿತ್ತರಂಜನ್ ದಾಸ್ ಮತ್ತು ಅವರ ಬೆಂಬಲಿಗರು ಬದಲಾವಣೆಯ ಪರವಾಗಿದ್ದರು. ತಮ್ಮ ಗುಂಪಿನ ಸೋಲನ್ನು ಅನುಭವಿಸಿದ ಹಿನ್ನೆಲೆಯಲ್ಲಿ ಚಿತ್ತರಂಜನ್ ದಾಸ್ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಮೋತಿಲಾಲ್ ನೆಹರ್ ಅವರ ಬೆಂಬಲದೊಂದಿಗೆ ಕಾಂಗ್ರೆಸಿನೊಳಗೇ ಒಂದು ಹೊಸ ಪಕ್ಷವನ್ನು ಸ್ಥಾಪಿಸಿದರು. ಅದರ ಹೆಸರು "ಕಾಂಗ್ರೆಸ್-ಖಿಲಾಫತ್-ಸ್ವರಾಜ್ಯ-ಪಕ್ಷ" ಎಂದಾದರೂ ಸಾಮಾನ್ಯವಾಗಿ ಅದನ್ನು "ಸ್ವರಾಜ್ಯ ಪಕ್ಷ" ಎಂದು ಕರೆಯಲಾಗುತ್ತಿತ್ತು. ಹೊಸ ಪಕ್ಷವು ಶೀಘ್ರವಾಗಿ ಬೆಳೆಯಿತು. ಪರಿಣಾಮವಾಗಿ ದೆಹಲಿಯಲ್ಲಿ 1923 ಸೆಪ್ಟೆಂಬರ್‌ನಲ್ಲಿ ನಡೆದ ಕಾಂಗ್ರೆಸಿನ ವಿಶೇಷ ಅಧಿವೇಶನದಲ್ಲಿ ಕಾಂಗ್ರೆಸಿಗರು ಚುನಾವಣೆಗಳಲ್ಲಿ ಸ್ಪರ್ಧಿಸಬಹುದೆಂದು ತೀರ್ಮಾನಿಸಲಾಯಿತು; ಹಾಗೂ ಶಾಸನ ಸಭೆಗಳಿಗೆ ಪ್ರವೇಶಿಸುವುದರ ವಿರುದ್ಧ ಪ್ರಚಾರವನ್ನು ಕೈಬಿಡಲಾಯಿತು. ಒಟ್ಟಿನಲ್ಲಿ ಪರಿವರ್ತನ ಪರರಿಗೆ ತಮ್ಮದೇ ಕಾರ್ಯಕ್ರಮ ಹಾಕಿಕೊಳ್ಳುವ ಸ್ವಾತಂತ್ರ್ಯವನ್ನು ನೀಡಲಾಯಿತು. ಬದಲಾವಣೆಯ ವಿರೋಧಿಗಳು ಗಾಂಧೀಜಿಯವರು ಹಾಕಿ ಕೊಟ್ಟ ರಚನಾತ್ಮಕ ಕಾರ್ಯ ಕ್ರಮಗಳನ್ನು ಮುಂದುವರಿಸಿದರು. ಹೀಗೆ ಕಾಂಗ್ರೆಸಿನ ಎರಡು ಗುಂಪುಗಳು ಎರಡು ವಿಭಿನ್ನ ನೀತಿಯನ್ನು ಅನುಸರಿಸಿದವು.

## 14.3 ಸ್ವರಾಜ್ಯ ಪಕ್ಷದ ಬೆಳವಣಿಗೆ

ಗಯಾ ಅಧಿವೇಶನದಲ್ಲಿ ಕಾಂಗ್ರೆಸ್ ಪಕ್ಷದ ಅಧಿಕೃತ ವಿಭಜನೆ ಏನೂ ಆಗಲಿಲ್ಲ. ಸ್ವರಾಜ್ಯ ಪಕ್ಷದ ಸದಸ್ಯರು ತಾವು ಕಾಂಗ್ರೆಸಿನ ಅವಿಭಾಜ್ಯ ಅಂಗವೆಂದು ಹೇಳಿಕೊಳ್ಳುತ್ತಿದ್ದರು. ಅವರು ಕಾಂಗ್ರೆಸ್ಸಿನ ಅಹಿಂಸಾತ್ಮಕ ಅಸಹಕಾರವನ್ನು ಬೆಂಬಲಿಸುತ್ತಲೇ ಇದ್ದರು. ಹಾಗಿದ್ದರೂ ಸ್ವರಾಜ್ಯ ಪಕ್ಷವು ಮೋತಿಲಾಲ್ ನೆಹರು ಹಾಗೂ ದೇಶಬಂಧು ಚಿತ್ತರಂಜನ ದಾಸ್ ಅವರು ಜಂಟಿಯಾಗಿ ಮುಖ್ಯಸ್ಥರಾಗಿದ್ದ ಪ್ರತ್ಯೇಕ ಸಂಘಟನೆಯನ್ನು ಸ್ಥಾಪಿಸಿದರು.

ಕೇಂದ್ರ ಅಸೆಂಬ್ಲಿ ಹಾಗೂ ಪ್ರಾಂತೀಯ ಕೌನ್ಸಿಲ್‌ಗಳ ಕಾರ್ಯನಿರ್ವಹಣೆಯು ಅಸಾಧ್ಯವಾಗುವ ರೀತಿಯಲ್ಲಿ ಅದು "ಸಮಾನ, ನಿರಂತರ ಹಾಗೂ ದೃಢವಾದ ಪ್ರತಿರೋಧ" ನಡೆಸುವ ಧೋರಣೆಗೆ ಬದ್ಧವಾಯಿತು. 1923 ನವೆಂಬರ್ ಚುನಾವಣೆಯಲ್ಲಿ ಸ್ವರಾಜ್ಯ ಪಕ್ಷಕ್ಕೆ ಸಾಕಷ್ಟು ಸ್ಥಾನಗಳು ಲಭಿಸಿದವು. ವಿವಿಧ ಪ್ರಾಂತ್ಯಗಳಲ್ಲಿ ಅದರ ರಾಜಕೀಯ ಪ್ರಭಾವ ವಿಭಿನ್ನವಾಗಿತ್ತು. 1919ರ ಸಾಂವಿಧಾನಿಕ ಸುಧಾರಣೆಗಳನ್ನು ಜಾರಿಗೆ ತರಲು ಬದ್ಧವಾದ "ಮಿತಗಾಮಿ"ಗಳ ಲಿಬರಲ್ ಪಕ್ಷವನ್ನು ಮಣ್ಣು ಮುಕ್ಕಿಸುವುದು ಸ್ವರಾಜ್ಯ ಪಕ್ಷಕ್ಕೆ ಕಷ್ಟವಾಗಲಿಲ್ಲ.

ಸ್ವರಾಜ್ಯ ಪಕ್ಷವು ಕೇಂದ್ರ ಅಸೆಂಬ್ಲಿಯಲ್ಲಿಯೂ ಮೋತಿಲಾಲ್ ನೆಹರು ಅವರ ನಾಯಕತ್ವದಲ್ಲಿ 1924-25ರ ಅವಧಿಯಲ್ಲಿ ಪ್ರತಿರೋಧ ನೀತಿಯನ್ನೇ ಅನುಸರಿಸಿತು. ಕೇಂದ್ರ ಅಸೆಂಬ್ಲಿಯಲ್ಲಿ ಅವರು ತಂದ ಗೊತ್ತುವಳಿಯಿಂದಾಗಿ "ಮುದ್ದಿಮನ್ ಸಮಿತಿ"ಯ ನೇಮಕವಾಯಿತು. ದಮನಕಾರಿ ಶಾಸನಗಳನ್ನು ವಜಾ ಮಾಡಲು ಅವರು ಅಸೆಂಬ್ಲಿಯಲ್ಲಿ ಹೋರಾಟ ನಡೆಸಿದರು. ಭಾರತೀಯ ಉಕ್ಕು ಉದ್ಯಮಕ್ಕೆ ರಕ್ಷಣೆ, ಹತ್ತಿಯ ಅಬಕಾರಿ ಸುಂಕದ ವಜಾ, ಉಪ್ಪಿನ ಮೇಲಿನ ಸುಂಕದ ಇಳಿತ, ಕಾರ್ಮಿಕರ ಸ್ಥಿತಿ-ಗತಿ ಸುಧಾರಣೆ, ಕಾರ್ಮಿಕರ ಸಂಘಗಳಿಗೆ ರಕ್ಷಣೆ, ಮುಂತಾದ ಆರ್ಥಿಕ ಸವಲತ್ತುಗಳನ್ನು ಗಿಟ್ಟಿಸಿಕೊಳ್ಳುವಲ್ಲಿ ಅವರು ಸಫಲರಾದರು. ಏನಿದ್ದರೂ ಅವರು ಒಂದು ಪರಿಣಾಮಕಾರಿ ಪ್ರತಿಪಕ್ಷವಾಗಿ ಕಾರ್ಯನಿರ್ವಹಿಸಿ ಯಶಸ್ವಿಯಾದರು. ಆದರೆ ಈ ಯಶಸ್ಸಿನ ಬಹುಪಾಲು ಅವರೊಡನೆ ಸಕ್ರಿಯವಾಗಿ ಸಹಕರಿಸಿದ ಪಕ್ಷೇತರ ಸದಸ್ಯರಿಗೆ ಸಲ್ಲುತ್ತದೆ.

ಕೆಲವು ಪ್ರಾದೇಶಿಕ ಸಭೆಗಳಲ್ಲಿ ಸ್ವರಾಜ್ಯ ಪಕ್ಷ ಅಮೂಲ್ಯ ಸೇವೆ ಸಲ್ಲಿಸಿತು. ಸ್ಪಷ್ಟ ಬಹುಮತವಿದ್ದ ಮಧ್ಯ ಪ್ರಾಂತ್ಯದಲ್ಲಿ (ಮಧ್ಯಪ್ರದೇಶ) ಸಚಿವರು ರಾಜೀನಾಮೆ ನೀಡುವಂತೆ ಸ್ವರಾಜ್ಯ ಪಕ್ಷವು ಒತ್ತಡ ಹೇರಿ, ದ್ವಿಪ್ರಭುತ್ವ (ಡಯಾರ್ಕಿ) ಸರಕಾರ ಕುಸಿಯುವಂತೆ ಮಾಡಿತು. ಬಂಗಾಳದ ಕೌನ್ಸಿಲ್‌ನಲ್ಲಿ ಸ್ವರಾಜ್ಯ ಪಕ್ಷಕ್ಕೆ ಸ್ಪಷ್ಟ ಬಹುಮತ ವಿರಲಿಲ್ಲ: ಆದರೆ ಕೌನ್ಸಿಲಿನಲ್ಲಿ ಅವರದೇ ದೊಡ್ಡ ಪಕ್ಷವಾಗಿತ್ತು. ಚಿತ್ತರಂಜನ ದಾಸ್ ಪಕ್ಷದ ನಾಯಕರು. 1925 ಜೂನ್‌ನಲ್ಲಿ ಅವರು ನಿಧನರಾದ ಬಳಿಕ ಜತೀಂದ್ರ ಮೋಹನ್ ಸೇನ್ ಗುಪ್ತ ಅವರು ನಾಯಕರಾದರು. ಸ್ವರಾಜ್ಯ ಪಕ್ಷವು ಸಚಿವ ಸಂಪುಟವನ್ನು ಕಿತ್ತೊಗೆಯುವುದರಲ್ಲಿ ಯಶಸ್ವಿಯಾಯಿತು. ಅಂತೆಯೇ ಅನೇಕ ದಮನಕಾರಿ ಶಾಸನಗಳಿಗೆ ಅದು ತಡೆಯೊಡ್ಡಿತು. ಇತರ ಪ್ರಾಂತ್ಯಗಳಲ್ಲಿ ಸ್ವರಾಜ್ಯ ಪಕ್ಷಕ್ಕೆ ಚಿಕ್ಕ ಮಟ್ಟದಲ್ಲಿ ಜಯ ಲಭಿಸಿದರೂ ಆದಕ್ಕೆ ಮಹತ್ವಪೂರ್ಣ ಯಶಸ್ಸು ಸಿದ್ಧಿಸಲಿಲ್ಲ.

## 14.4 ಗಾಂಧೀಜಿ ಮತ್ತು ಸ್ವರಾಜ್ಯ ಪಕ್ಷ

1923ರ ಕಾಂಗ್ರೆಸ್ಸಿನ ಕಾಕಿನಾಡ ಅಧಿವೇಶನದಲ್ಲಿ ಬದಲಾವಣೆಗೆ ಪರವಾಗಿದ್ದವರ ಕೈಮೇಲಾಯಿತು. ಬದಲಾವಣೆ ವಿರೋಧಿಗಳು ಗಾಂಧೀಜಿಯವರ ಆಗಮನಕ್ಕಾಗಿ ಕಾಯುತ್ತಿದ್ದರು. ಅವರು ಮರಳಿದರೆ ಕಾಂಗ್ರೆಸ್ಸಿನ ಧೋರಣೆಯ ದಿಕ್ಕು ಬದಲಾಗಿ ಕಾಯದೆ ಭಂಗ ಚಳವಳಿ ಪುನರಾಂಭಗೊಳ್ಳಬಹುದೆಂದು ಅವರ ಆಶಯವಾಗಿತ್ತು. 1924 ಫೆಬ್ರವರಿಯಲ್ಲಿ ಗಾಂಧೀಜಿಯವರು ಅನಿರೀಕ್ಷಿತವಾಗಿ ಬಿಡುಗಡೆಗೊಂಡಾಗ ಕಾಂಗ್ರೆಸ್ಸಿನ ಎರಡು ಬಣಗಳ ನಡುವೆ ಪರಸ್ಪರ ಮಾತುಕತೆಗೆ ಸ್ವಲ್ಪಮಟ್ಟಿನ ಅವಕಾಶ ದೊರಕಿದಂತಾಯಿತು. ಚಿತ್ತರಂಜನ್ ದಾಸ್ ಮತ್ತು ಮೋತಿಲಾಲ್ ನೆಹರು, ಗಾಂಧೀಜಿಯವರೊಂದಿಗೆ ವಿಚಾರ ವಿನಿಮಯ ನಡೆಸಿದರು. ಆ ಬಳಿಕ 1924 ಮೇ ತಿಂಗಳಿನಲ್ಲಿ ಗಾಂಧೀಜಿಯವರು ಒಂದು ಹೇಳಿಕೆ ನೀಡುತ್ತ ಪರಿವರ್ತನವಾದಿಗಳ ಪ್ರತಿರೋಧದ ನೀತಿಯಲ್ಲಿ ತನಗೆ ನಂಬಿಕೆ ಇರದಿದ್ದರೂ ಆ ನಿಟ್ಟಿನಲ್ಲಿ ಪ್ರತಿರೋಧಿಸುವ ಅವರ ಹಕ್ಕನ್ನು ತಾನು ಸಮ್ಮತಿಸುತ್ತೇನೆಂದರು. ಅದಲ್ಲದೆ ಬದಲಾವಣೆ ವಿರೋಧಿಗಳು ರಚನಾತ್ಮಕ ಕಾರ್ಯಕ್ರಮ ಹಾಕಿಕೊಳ್ಳುವ ಮೂಲಕ ತಮ್ಮ ಆದರ್ಶಗಳನ್ನು ರುಜುವಾತು ಪಡಿಸಲಿ ಎಂದು ಗಾಂಧೀಜಿಯವರು ಅವರಿಗೆ ಸಲಹೆ ನೀಡಿದರು.

ಈ ರಾಜಿ ಸೂತ್ರ ಕಾಂಗ್ರೆಸ್ಸಿನ ಉಭಯ ಬಣಗಳನ್ನು ತೃಪ್ತಿ ಪಡಿಸಲಿಲ್ಲ. ಕೆಲವು ತಿಂಗಳೊಳಗೆ ಗಾಂಧೀವಾದದ ವಿರುದ್ಧ ಬಂಡಾಯವು ಬಹುತೇಕ ಪೂರ್ಣ ರೂಪವನ್ನು ತಳೆಯಿತು. ಕಾಂಗ್ರೆಸ್ ವಿಭಜನೆಯಾಗುವ ಹಂತಕ್ಕೂ ತಲುಪಿತು. ಇದನ್ನು ತಪ್ಪಿಸುವುದಕ್ಕಾಗಿ ಬೆಳಗಾವಿ ಅಧಿವೇಶನದ ಅಧ್ಯಕ್ಷರಾಗಿದ್ದ ಗಾಂಧೀಜಿಯವರು ಸ್ವರಾಜ್ಯ ಬಣದವರೊಂದಿಗೆ ಒಂದು ಒಪ್ಪಂದವನ್ನು ಮಾಡಿಕೊಂಡರು. ಅದರಂತೆ ಕಾಂಗ್ರೆಸ್ಸಿನ ಪರವಾಗಿ ಸ್ವರಾಜ್ಯ ಪಕ್ಷವು ಶಾಸನ ಸಭೆಗಳಲ್ಲಿ

ಕಾರ್ಯನಿರ್ವಹಿಸಬೇಕು. ಅದಕ್ಕಾಗಿ ನಿಯಮಾವಳಿ ರೂಪಿಸಿಕೊಳ್ಳುವುದೂ ರೂಪಿಸಿದ ರಚನಾತ್ಮಕ ಕಾರ್ಯಕ್ರಮಗಳಿಗೆ ಮಾತ್ರ ಸೀಮಿತವಾಗಿರುತ್ತದೆ.

ಈ ಒಪ್ಪಂದ ಸ್ವರಾಜ್ಯ ಪಕ್ಷದವರಿಗೆ ಗಾಂಧೀಜಿಯವರ "ಶರಣಾಗತಿ" ಅಲ್ಲದೆ ಬೇರೇನೂ ಅಲ್ಲ. ಈ ನಿಟ್ಟಿನಲ್ಲಿ ಕಾನ್ಪುರ ಅಧಿವೇಶನದಲ್ಲಿ ಇನ್ನೂ ಒಂದು ಹೆಜ್ಜೆ ಮುಂದಿಡಲಾಯಿತು. ದೇಶದ ಹಿತಾಸಕ್ತಿಗೆ ಅವಶ್ಯವೆನಿಸುವ ಎಲ್ಲಾ ರಾಜಕೀಯ ಚಟುವಟಿಕೆಗಳನ್ನು ಕೈಗೊಳ್ಳಲು ಕಾಂಗ್ರೆಸ್ ತೀರ್ಮಾನಿಸಿತು.

1926 ನವೆಂಬರ್ ಚುನಾವಣೆಯಲ್ಲಿ ಕಾಂಗ್ರೆಸ್ ಅಭ್ಯರ್ಥಿಗಳನ್ನು ಸ್ವರಾಜ್ಯ ಪಕ್ಷದ ಹೆಸರಿನಲ್ಲಿ ನಿಲ್ಲಿಸಲಿಲ್ಲ. ಅಂತೂ ಕಾಂಗ್ರೆಸನ್ನು ಪರಿವರ್ತಿಸುವುದರಲ್ಲಿ ಸ್ವರಾಜ್ಯ ಪಕ್ಷವು ಯಶಸ್ವಿಯಾಯಿತು. ಆದರೆ ಅದು ಆರಂಭದಲ್ಲಿ ಹಾಕಿಕೊಂಡ ಕಾರ್ಯಕ್ರಮಗಳಲ್ಲಿ ಬಹಳಷ್ಟು ಬದಲಾವಣೆಗಳಾದವು. ಸರಕಾರಕ್ಕೆ ತಡೆ ಒಡ್ಡುವ ಅವರ ಆರಂಭದ ಯೋಜನೆಯಲ್ಲಿ ಎಷ್ಟೊಂದು ಬದಲಾವಣೆ ಆಯಿತೆಂದರೆ ಅವರು ಸರಕಾರಕ್ಕೆ ಸಹಕಾರ ನೀಡುವ ಅಂಚಿನ ವರೆಗೂ ಮುಟ್ಟಿದರು.

ಕೆಲ ಸಮಯದ ಬಳಿಕ ಸ್ವರಾಜ್ಯ ಪಕ್ಷದೊಳಗೆ ಭಿನ್ನಾಭಿಪ್ರಾಯಗಳು ತಲೆದೋರಿ, ಪಕ್ಷವು ಗುಂಪುಗಳಾಗಿ ಒಡೆಯಿತು. ಒಂದು ಪ್ರತಿಕ್ರಿಯಾತ್ಮಕ ಸಹಕಾರದ ಮಾರ್ಗಕ್ಕೆ ಆತುಕೊಂಡಿತು. ಹೀಗೆ ಒಡೆದು ಕ್ಷೀಣವಾದ ಸ್ವರಾಜ್ಯ ಪಕ್ಷಕ್ಕೆ ಶಾಸನ ಸಭೆಗಳಲ್ಲಿ ಯಾವುದೇ ಪರಿಣಾಮಕಾರಿ ಪಾತ್ರ ನಿರ್ವಹಿಸಲು ಸಾಧ್ಯವಾಗಲಿಲ್ಲ.

## 14.5 ಘಟಕದ ಸಾರಾಂಶ

ಈ ಘಟಕದ ಅಧ್ಯಯನದ ನಂತರ ನಾವು

- ಸ್ವರಾಜ್ಯ ಪಕ್ಷದ ಉಗಮ ಮತ್ತು ಗುರಿಗಳು ಮತ್ತು ಇದರ ನಾಯಕರ ಬಗ್ಗೆ ತಿಳಿದೆವು.
- ಸ್ವರಾಜ್ಯ ಪಕ್ಷದ ಹೋರಾಟ, ಚಳುವಳಿಯಲ್ಲಿ ಭಾಗವಹಿಸಿದ್ದು, ಚುನಾವಣೆಯಲ್ಲಿ ಸ್ಪರ್ಧಿಸಿದ್ದು ಮುಂತಾದುವನ್ನು ತಿಳಿದುಕೊಂಡೆವು.
- ಸ್ವರಾಜ್ಯ ಪಕ್ಷದಲ್ಲಿ ಒಡಕುಂಟಾಗಿ ಮತ್ತೆ ಕಾಂಗ್ರೆಸ್‌ನಲ್ಲಿ ವಿಲೀನರಾಗಿದ್ದು ಹಾಗೂ ಇದರ ಕೆಲವು ತತ್ವಗಳನ್ನು ಕಾಂಗ್ರೆಸ್‌ನಲ್ಲಿ ಅನುಮೋದಿಸಿಕೊಂಡಿದ್ದು ಮುಂತಾದವುಗಳ್ಳನು ಈಅಧ್ಯಾಯನದಲ್ಲಿ ಅರ್ಥ ಮಾಡಿಕೊಂಡೆವು.

## 14.6 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಸ್ವರಾಜ್ಯ ಪಕ್ಷಗಳ ಗುರಿಗಳು ಮತ್ತು ಸಾಧನೆಗಳಾವುವು? ವಿವರಿಸಿ
2. ಸ್ವರಾಜ್ಯ ಪಕ್ಷದ ನಾಯಕರು ಮತ್ತು ಅವರ ಪಾತ್ರವನ್ನು ವಿವರಿಸಿ.
3. ಸ್ವರಾಜ್ಯ ಪಕ್ಷ ಕಾಂಗ್ರೆಸ್‌ನಲ್ಲಿ ವಿಲೀನವಾಗಲು ಕಾರಣಗಳನ್ನು ತಿಳಿಸಿ.

## 14.7 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


1. Sumit Larkhs : Modern India

3. Prasad L.P : History of Modern India

4. ನರೇಂದ್ರಪ್ರಸಾದ್ ಮತ್ತು ಇತರರು : ಭಾರತ ಸ್ವಾತಂತ್ರ್ಯ ಚಳುವಳಿ

# ಘಟಕ : 15 ಸಮಾಜವಾದಿ ಚಳವಳಿ

ವಿಷಯಸೂಚಿ

## 15.0 ಉದ್ದೇಶಗಳು

ಈ ಘಟಕದ ಅಧ್ಯಯನದಲ್ಲಿ ನಾವು

- ರಷ್ಯಾಕ್ರಾಂತಿ ಮತ್ತು ಕಾರ್ಲ್‌ಮಾರ್ಕ್ಸ್‌ರವರ ಪ್ರಭಾವದಿಂದ ಭಾರತದಲ್ಲಿ ಸಮಾಜವಾದದ ಬೆಳವಣಿಗೆಯನ್ನು ತಿಳಿಯುತ್ತೇವೆ.
- ಕಮೂನಿಷ್ಟ್ ತತ್ವಗಳು ಮತ್ತು ಅವುಗಳ ಅನುಷ್ಠಾನವನ್ನು ಭಾರತದಲ್ಲಿ ತರಲು ಪ್ರಯತ್ನ ಪಟ್ಟಿದು.
- ಭಾರತದಲ್ಲಿ ಎಂ.ಎಸ್. ರಾಯ್, ಎಸ್.ಎ. ಡಾಂಗೆ, ಜಯಪ್ರಕಾಶ್ ನಾರಾಯಣ್ ಉದುಮನೇ ಹರ್ ಲೋ ಹಿಯಾ ಮುಂತಾದವರು ಸಮಾಜವಾದ ಮತ್ತು ಕಮ್ಯೂನಿಷ್ಟ್ ತತ್ವಗಳಿಗೆ ತೀಕ್ಷಾಯಕವಾಗಿ ಕಾರ್ಯನಿರ್ವಹಿಸಿದ್ದು.
- ಕಾಂಗ್ರೆಸ್ ಸೋಷಿಯಲಿಸ್ಟ್ ಪಕ್ಷವಾಗಿ ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದು.
- 10 ಅನೇಕ ಕಾರ್ಮಿಕ, ಕೃಷಿ ಚಳುವಳಿಗಳಲ್ಲಿ ಭಾಗವಹಿಸಿದ್ದ 1942ರ ಹಿಟ್ ಇಂಡಿಯಾ ಚಳುವಳಿಯನ್ನು ಮುನ್ನಡೆದಿದ್ದು ಮುಂತಾದ ವಿಷಯಗಳನ್ನು ಇಲ್ಲಿ ಅಧ್ಯಯನ ಮಾಡಲಿದ್ದೇವೆ.

## 15.1 ಪೀಠಿಕೆ

ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಜನರ ವೈಯಕ್ತಿಕ ಸಮಸ್ಯೆಗಳನ್ನೇ ದೇಶ, ವಿದೇಶೀಯ ನಾಯಕರು ಧಾರ್ಮಿಕ ಮತ್ತು ಸಮಾಜ ಸುಧಾರಕರು ಮರೆತಿದ್ದಾರೆ. ಅದೃಷ್ಟವಶಾತ್, ಕಾರ್ಲ್‌ಮಾರ್ಕ್ಸ್‌ನ ತತ್ವಗಳು, 1917ರ ರಷ್ಯಾ ಕ್ರಾಂತಿ ಮುಂತಾದವು ಭಾರತದಲ್ಲಿ ಕಮ್ಯೂನಿಸಂ ಸಮಾಜವಾದ, ಮುಂತಾದವುಗಳ ಬೆಳವಣಿಗೆ ಕಾರಣವಾಗಿ ಇಲ್ಲಿಯ ನಾಯಕರಾದ ಎಂ.ಎನ್.ರಾಯ್, ಎಸ್.ಎ. ಡಾಂಗೆ, ಜಯಪ್ರಕಾಶ್ ನಾರಾಯಣ್, ಲೋಹಿಯಾ ಮುಂತಾದವರ ಕಾರಣದಿಂದಾಗಿ, ಸಮಾಜವಾದೆದ ಪ್ರಚಾರ ಮತ್ತು ಬೆಳವಣಿಗೆಯಾಗಿ ಮುಂದೆ ಕಮ್ಯೂನಿಷ್ಟ್ ಪಕ್ಷದ ಸ್ಥಾಪನೆ, ಕಾಂಗ್ರೆಸ್ ಸೋಷಿಯಲಿಸ್ಟ್ ಪಕ್ಷಗಳ ಸ್ಥಾಪನೆ ಅಲ್ಲದೇ ಅನೇಕ ಚಳುವಳಿಗಳಲ್ಲಿ ಇವರು ಭಾಗವಹಿಸಿದ್ದು ಮತ್ತು ಪ್ರಭಾವ ಮುಂತಾದ ವಿಷಯಗಳನ್ನು ನಾವು ತಿಳಿಯಲು ಈ ಘಟಕದ ಅಧ್ಯಯನವನ್ನು ಮಾಡಲಿದ್ದೇವೆ.

## 15.2 ಸಮಾಜವಾದಿ ಮತ್ತು ವಾಮವಾದಿ ಚಿಂತನೆಗಳು

ಈ ಅಧ್ಯಾಯನದಲ್ಲಿ ನಾವು ಭಾರತದ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಕಂಡುಬಂದ ಸಮಾಜವಾದಿ ಮತ್ತು ವಾಮವಾದಿ ಚಿಂತನೆಗಳ ಏಳಿಗೆಯನ್ನು ವಿಶ್ಲೇಷಿಸೋಣ. ಪ್ರಸ್ತುತ ಈ ಅಧ್ಯಾಯನದಲ್ಲಿ ಸಮಾಜವಾದಿ ಮತ್ತು ವಾಮವಾದಿ ಚಿಂತನೆಗಳನ್ನು ಎಡಪಂಥೀಯ ಚಿಂತನೆಗಳು ಎಂದು ಕರೆಯಬಹುದಾಗಿದೆ. ಫ್ರಾನ್ಸ್ ದೇಶದ 1789ರ ಕ್ರಾಂತಿಯ ಕಾಲದಲ್ಲಿ ಮೊಟ್ಟ ಮೊದಲ ಬಾರಿಗೆ ಎಡ ಮತ್ತು ಬಲ ಪಂಗಡಗಳು ಕಂಡುಬಂದವು. ಮೂಲಭೂತವಾಗಿ ಸೈದ್ಧಾಂತಿಕವಾಗಿ ಭಿನ್ನವಾಗಿದ್ದ ಈ ಗುಂಪುಗಳನ್ನು ಕ್ರಮವಾಗಿ ಕ್ರಾಂತಿಕಾರಿಗಳು (ಎಡ) ಮತ್ತು ಕ್ರಾಂತಿ ವಿರೋಧಿಗಳು (ಬಲ) ಎಂದು ಫ್ರಾನ್ಸ್‌ನಲ್ಲಿ ಗುರುತಿಸಲಾಯಿತು. ಕಾಲಕ್ರಮೇಣ ಗ್ರೇಟ್ ಬ್ರಿಟನ್ನಿನ ಸಂಸತ್ತಿನಲ್ಲಿಯೂ ಸೈದ್ಧಾಂತಿಕ ಹಿನ್ನೆಲೆಯ ಆಧಾರದ ಮೇಲೆ ರಾಜಕೀಯ ಪಕ್ಷಗಳು ಎಡ ಮತ್ತು ಬಲ ಪಕ್ಷಗಳೆಂದು ಗುರುತಿಸುವ ಪದ್ಧತಿಯು ರೂಢಿಗೆ ಬಂದಿತು. ಒಂದು ವ್ಯವಸ್ಥೆಯ ವಿರುದ್ಧ ಯಾರು ದನಿಯನ್ನು ತೆಗೆಯುತ್ತಾರೂ ಅವರು ಎಡ ಪಂಥೀಯರೆಂದೂ ಮತ್ತು ಯಾರು ಒಂದು ವ್ಯವಸ್ಥೆಯ ಜೊತೆಯಲ್ಲಿ ಹೊಂದಾಣಿಕೆಯನ್ನು ಮಾಡಿಕೊಳ್ಳುತ್ತಾರೆ ಅವರನ್ನು ಬಲಪಂಥೀಯರೆಂದು ಸಾಮಾನ್ಯವಾಗಿ ಅತ್ಯಂತ ಮೇಲ್ಮಟ್ಟದಲ್ಲಿ ಗುರುತಿಸಬಹುದಾಗಿದೆ. ಪ್ರಸ್ತುತ ಈ ಅಧ್ಯಾಯದಲ್ಲಿ ಎಡ ಮತ್ತು ಬಲ ಪಂಥೀಯರ ನಡುವಿನ ವ್ಯತ್ಯಾಸಗಳು ಮತ್ತು ಸ್ಪಷ್ಟವಾದ ಆ ಗುಂಪುಗಳ ಅರ್ಥ ವಿವರಣೆಯ ಗೋಜಿಗೆ ಹೋಗದೆ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಸಮಾಜವಾದಿ ಮತ್ತು ವಾಮವಾದಿ ಚಿಂತನೆಗಳ ಹಿನ್ನೆಲೆಯಲ್ಲಿ ಕಂಡು ಬಂದ ಬೆಳವಣಿಗೆಗಳನ್ನು ಅವಲೋಕಿಸುವುದು ಈ ಅಧ್ಯಾಯದ ಪ್ರಮುಖ ವಸ್ತುವಾಗಿದೆ.

ಭಾರತದ ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಅದರಲ್ಲೂ ಮುಖ್ಯವಾಗಿ 20ನೇ ಶತಮಾನದ ಮೊದಲ ಎರಡು ದಶಕಗಳಲ್ಲಿ ಅನೇಕ ಆಂತರಿಕ ರಾಜಕೀಯ ಸಮಸ್ಯೆಗಳು ಮತ್ತು ವೈರುಧ್ಯಗಳನ್ನು ಚಳುವಳಿಯು ಎದುರಿಸಬೇಕಾಯಿತು. ಬಂಗಾಳ ವಿಭಜನೆ ತನ್ಮೂಲಕ ಅದರ ವಿರುದ್ಧ ಭಾರತದಲ್ಲಿ ಕಂಡು ಬಂದ ರಾಜಕೀಯ ಪ್ರತಿಕ್ರಿಯೆಗಳು ಮತ್ತು ಸೂರತ್‌ನಲ್ಲಿ ಸ್ಫೋಟಗೊಂಡ ಕಾಂಗ್ರೆಸ್ಸಿನ ವಿಭಜನೆ ರಾಷ್ಟ್ರೀಯ ಚಳುವಳಿಯಲ್ಲಿ ಮಂದಗಾಮಿ ಮತ್ತು ತೀವ್ರಗಾಮಿಗಳ ನಡುವಿನ ಸಂಘರ್ಷಕ್ಕೆ ಕಾರಣವಾಯಿತು. ಈ ಅವಧಿಯಲ್ಲಿ ಭಾರತದ ಸಮಕಾಲೀನ ರಾಜಕೀಯ ವ್ಯವಸ್ಥೆಯ ಮೇಲೆ ಅನೇಕ ಪರಿಣಾಮಗಳು ತಮ್ಮ ಪ್ರಭಾವಗಳನ್ನು

ಬೀರಿದವು. ಅವುಗಳಲ್ಲಿ ಪ್ರಮುಖವಾದವು ಯಾವುವೆಂದರೆ,

1. ಮೊದಲನೆ ಮಹಾಯುದ್ಧ ಮತ್ತು ಯುದ್ಧಾನಂತರದ ಭಾರತದಲ್ಲಿ ಅನೇಕ ಆರ್ಥಿಕ ಸಮಸ್ಯೆಗಳು ಉದ್ಭವಿಸಿದವು. ಇವುಗಳ ಹಿನ್ನೆಲೆಯಲ್ಲಿ ರಾಜಕೀಯ ಜಂಜಾಟಗಳು ಕಂಡುಬರುತ್ತಿವು ಏರುತ್ತಿದ್ದ ಹಣಕಾಸಿನ ಒತ್ತಡ, ಬೆಲೆ ಏರಿಕೆ ಪರಿಸ್ಥಿತಿ, ಕ್ಷಾಮ ಮತ್ತು ಬರಗಾಲ ಪರಿಸ್ಥಿತಿಗಳು ಜನತೆಯ ಮೇಲೆ ಒಂದು ರೀತಿಯ ಮಾನಸಿಕ ಒತ್ತಡಗಳನ್ನು ನಿರ್ಮಿಸಿದವು.

2. ಜಗತ್ತಿನ ಬಹುದೊಡ್ಡ ಸಾಮ್ರಾಜ್ಯವಾಗಿದ್ದ ರಷ್ಯಾದಲ್ಲಿ ಸಮಾಜವಾದಿ ಕ್ರಾಂತಿಯಿಂದಾಗಿ 1917ರ ಅಕ್ಟೋಬರ್ ತಿಂಗಳಿನಲ್ಲಿ ಒಂದು ಸಮಾಜವಾದಿ ರಾಷ್ಟ್ರವು ಅಸ್ತಿತ್ವಕ್ಕೆ ಬಂದಿತು. 19ನೇ ಶತಮಾನದ ಜರ್ಮನಿಯ ದಾರ್ಶನಿಕನಾಗಿದ್ದ ಕಾರ್ಲ್‌ಮಾರ್ಕ್ಸ್‌ನ ಬರವಣಿಗೆಗಳು ಇದಕ್ಕೆ ಸ್ಫೂರ್ತಿ ನೀಡಿತು.

## 15.3 ಭಾರತದಲ್ಲಿ ಸಮಾಜವಾದ ಮತ್ತು ಚಳುವಳಿ

ಕಾರ್ಮಿಕರ ಶೋಷಣೆಯನ್ನು ಹೊರಪಡಿಸಲು ಪ್ರಾರಂಭವಾದ ಒಂದು ತತ್ವವೆಂದರೆ ಸಮಾಜವಾದ. ಬ್ರಿಟಿಷರು ಮತ್ತು ಸರ್ಕಾರ ಯಾವುದೇ ರೀತಿಯಲ್ಲಿ ಕಾರ್ಮಿಕರ ಸಮಸ್ಯೆಗಳನ್ನು ಹೋಗಲಾಡಿಸುವಲ್ಲಿ ಯಾವುದೇ ಪ್ರಯತ್ನ ಮಾಡದೇ ಇದ್ದು ಈ ತತ್ವದ ಉಗಮಕ್ಕೆ ಕಾರಣ. 1917ರ ರಷ್ಯಾಕಾಂತ್ರಿಯ ನಂತರ ಭಾರತದ ಬುದ್ಧಿ ಜೀವಿಗಳು ಕಾರ್ಮಿಕರು ಮತ್ತು ರಾಷ್ಟ್ರೀಯ ನಾಯಕರು ಕಾರ್ಮಿಕರ ಬಗ್ಗೆ ಯೋಚಿಸಲು ಪ್ರಾರಂಭಿಸಿದರು. ಗಾಂಧೀಜಿಯವರು ತಮ್ಮ ಹಲವು ಪರಿತ್ಯಾಗಗಳು ಮತ್ತು ಅಸಹಕಾರ ಚಳುವಳಿಯ ಮೂಲಕ ಸ್ವಾತಂತ್ರ್ಯ ಚಳುವಳಿಗೆ ಕಾರ್ಮಿಕರು ಮತ್ತು ಕೃಷಿ ಕಾರ್ಮಿಕರನ್ನು ಕರೆತಂದರು. ಭಾರತೀಯರಲ್ಲಿದ್ದ ನಿರುದ್ಯೋಗ ಸಮಸ್ಯೆಯು ಇವರ ಬಗ್ಗೆ ತೀವ್ರ ಯೋಚನೆ ಮಾಡುವಂತೆ ಮೂಡಿತು. ಲಾಲಾಹರದಯಾಳರವರು ಕಾರ್ಲ್‌ಮಾರ್ಕ್ಸ್‌ರವರ ಜೀವನ ಚರಿತ್ರೆ ಬರೆದರು. ತಿಲಕ್‌ರ ಕೇಸರಿ, ಹಾರ್ನಿಮದರ್ ಬಾಂಬೆಕ್ರಾನಿಕಲ್, ಮಾಡರ್ನರಿವ್ಯೂ ಮುಂತಾದವುಗಳ ರಷ್ಯಾಕ್ರಾಂತಿ, ಲೆನಿನ್ ಮತ್ತು ಸಮಾಜವಾದದ ಬಗ್ಗೆ ಭಾರತೀಯರಲ್ಲಿ ಆಸಕ್ತಿ ಹುಟ್ಟಿಸಿದವು.

ಎಂ.ಎನ್.ರಾಯ್‌ರವರು ಭಾರತದಲ್ಲಿ ಕಮ್ಯೂನಿಷ್ಟ್ ಪಕ್ಷವು ಭಾರತದಲ್ಲಿ ಕೆಲಸಮಾಡಲು ಇವರು ರಷ್ಯಾಕ್ಕೆ ಬೇಟಿ ನೀಡಿದ್ದು ಕಾರಣವಾಯಿತು. (1920) 1923 ರಲ್ಲಿ ಎಸ್.ಎ ಡಾಂಗೆ ಸೋಷಿಯಲಿಷ್ಟ್ ವಾರಪತ್ರಿಕೆ ಪ್ರಾರಂಭವಾಯಿತು.

ಸಮಾಜವಾದದ ತತ್ವದ ಮೇಲೆ 1918ರಲ್ಲಿ ಕವಾನ್ ಸಭಾ ರೈತ ನಡೆಯಿತು. ಲಾಲಾ ಲಜಪತ್ ರಾಯರು ಟ್ರೇಡ್‌ಯೋನಿಯ್ ಚಳುವಳಿಯಲ್ಲಿ ಭಾಗವಹಿಸಿದರು. ಇದಲ್ಲದೇ ಜವಾಹರ್‌ಲಾಲ್ ನೆಹರು ಸಹ ಸಮಾಜವಾದದಲ್ಲಿ ಪೂರ್ಣ ನಂಬಿಕೆಯಿಟ್ಟು ಕೊಂಡಿದ್ದಾರೆ. ಮೋತಿಲಾಲ್ ನೆಹರೂ ಮತ್ತೇ ಜವಾಹರ್‌ಲಾಲ್ ನೆಹರು ರವರು ರಷ್ಯಾಕ್ಕೆ ಭೇಟಿ ನೀಡಿ, ಸೋವಿಯತ್ ರಷ್ಯಾ ಎಂಬ ಪುಸ್ತಕ ಬರೆದರು 1929ರ ಲಾಹೋರ್ ಅಧಿವೇಶನದಲ್ಲಿ ತಾವು ಸಮಾಜವಾದಿ ಎಂದು ಜವಾಹರ್‌ಲಾಲ್ ನೆಹರು ಘೋಷಿಸಿಕೊಂಡರು. ಜಯಪ್ರಕಾಶ್ ನಾರಾಯಣ್, ನರೇಂದ್ರರೆಟ್ ಅಚ್ಯುತ ಪಾವತರ್ಸನ್‌ರವರು ಸಮಾಜವಾದಿ ನಾಯಕರು.

1924ರ ನಂತರ ಸಮಾಜವಾದರು ಭಾರತ ಕಮ್ಯೂನಿಷ್ಟ್ ಪಕ್ಷದ ಮೂಲಕ ಬೆಳೆಯಿತು. ಈ ಕಾರ್ಯಗಳಲ್ಲಿ ಪಾಮೆದತ್ ಪ್ರಮುಖ ಪಾತ್ರ ವಹಿಸಿದರು. ಬೊಂಬಾಯಿ, ಕಲ್ಕತ್ತಾ ಕಾರ್ಮಿಕ ಚಳುವಳಿ ನಡೆದು ಅನೇಕರು ಬಂಧಿಸಲ್ಪಟ್ಟು ಸೆರೆವಾಸಿಗಳಾದರು. ಸ್ಥಾಪನೆಯವನು ಕಾರ್ಮಿಕರು ಮತ್ತು ಕೃಷಿಕರ ಒಕ್ಕೂಟ ಪ್ರಾರಂಭಿಸಿದನು. ಅನೇಕರನ್ನು ರಷ್ಯಾಕ್ಕೆ ನಿಯೋಗ ಸದಸ್ಯರಾಗಿ ಕಳುಹಿಸಿದರು.

ಇವಲ್ಲದೇ ಸಮಾಜವಾದಿಗಳು ಅನೇಕ ಕಾರ್ಯಗಳಲ್ಲಿ ಭಾಗವಹಿಸಿದ್ದರು, ಅವುಗಳೆಂದರೆ ಕಾನ್ಪುರ ಪಿತೂರಿ ನಡೆಸಿರಬೇಕೆಂಬ ನೆಪಹೊಡ್ಡಿ ಸರ್ಕಾರ ಮೊಕದ್ದಮೆ ಹೂಡಿದ್ದು, ಪ್ರಮುಖ ಆಚಾರಿತಲ್ಲದ ಡಾಂಗೆ, ಮಖ್ಬಾತರ್ ಅಹ್ಮದ್ ಉಸ್ಮಾನಿ ಮತ್ತು ನಳಿನಿ ಗುಪ್ತರಿಗೆ ನಾಲ್ಕು ವರ್ಷ ಸಜೆ ಆಯಿತು. ಮೀರತ್ ಪಿತೂರಿ ಹಿನ್ನೆಲೆಯಲ್ಲಿ ಡಾಂಗೆ, ಹಬಿನಸ್‌ಕೊಳಗೊಂಡು 31 ಜನರನ್ನು 1929ರಲ್ಲಿ ಸರ್ಕಾರ ಸೆರೆಹಿಡಿಯಿತು. 1933 ರಲ್ಲಿ ಬಿಡುಗಡೆ ಮಾಡಿತು. 1930 ರಿಂದ 1935 ರವರೆಗೆ ಕಮ್ಯೂನಿಷ್ಟ್ ಚಟುವಟಿಕೆಗಳು ಸ್ಥಾಪಿತವಾಗಿದ್ದವು.

1934 ರಲ್ಲಿ ಕಾಂಗ್ರೆಸ್ ಸೋಷಿಯಲಿಷ್ಟ್ ಪಕ್ಷ ಸ್ಥಾಪನೆಯಾಯಿತು. ಬಿಹಾರ ಬೊಂಬಾಯಿ, ಪಾಟ್ನಾದಲ್ಲಿ ಪ್ರಾರಂಭಗೊಂಡು, ಜಯಪ್ರಕಾಶ್ ನಾರಾಯಣ್, ರಾಮ್‌ಮನ್ನೋಹರ್‌ಲೋಡಿಯಾ ಕಮಲಾ ದೇವಿ ಚಟ್ಟೋಪಾಧ್ಯಾಯ, ಮೀಮಾಮಪಾನಿ, ಎಸ್.ಎಂ. ಜೋಷಿ ಮುಂತಾದವರು ಇದನ್ನು ನಡೆಸಿಕೊಂಡು ಹೋದರು ಸಮಾಜವಾದದ ಮೇಲೆ ಜನರ ಸಂಘಟಿಸುವುದು, ಕಾಂಗ್ರೆಸ್ ಗುರಿಗೆ ಜನರನ್ನು ಒಟ್ಟುಗೂಡಿಸುವ ಕೆಲಸಮಾಡಿದರು, ಬೊಂಬಾಯಿಯಲ್ಲಿ ಈ ಪಕ್ಷ ಸಭೆಸೇರಿ ಭಾರತದ ವಿದೇಶೀ ಸಾಲಕಡಿತ, ಕಾರ್ಮಿಕರಿಗೆ ಅಧಿಕಾರ ಹಸ್ತಾಂತರ, ರಾಜ್ಯ ನಿರ್ದೇಶಿತ ಅಭಿವೃದ್ಧಿ ಯೋಜನೆಗಳು. ವಿದೇಶೀ ವ್ಯಾಪಾರದ ಮೇಲೆ ರಾಜ್ಯ ನಿಯಂತ್ರಣ, ಸಹಕಾರಿ ಮತ್ತು ಸಮುದಾಯ ಕೃಷಿ, ಕೈಗಾರಿಕೆಗಳ ಸಮಾಜೀಕರಣ, ಜಮೀನ್ದಾರು, ರಾಜರಿಗೆ ಯುವುದರಲ್ಲಿ ವ್ಯವಸಾನ ನೀಡದಿರುವುದು ಮುಂತಾದುವನ್ನು ತೀರ್ಮಾನಿಸಿದರು.

ಸಾಹತು ನೀತಿಯ ವಿರುದ್ಧ, ತಾರ್ಮಿಕರು ಮತ್ತು ಕೃಷಿ ಕಾರ್ಮಿಕರನ್ನು ಸಂಘಟಿಸುವುದು ಇದರ ಗುರಿಯಾಗಿತ್ತು. ಕಾಂಗ್ರೆಸ್ ಮತ್ತು ,ಓಷಿಯಲಿಸ್ಟ್‌ರಲ್ಲಿ 1935 ರಲ್ಲಿ ಕಮ್ಯೂನಿಸ್ಟ್ ಪಕ್ಷವನ್ನು ಬ್ರಿಟಿಷ್ ಪಕ್ಷವನ್ನು ಸೇರಿದರು. ಇವರು ಕಮ್ಯೂನಿಷ್ಟ್ ಪಕ್ಷದ ಆಹಾರದ ಮೇಲೆ ಚುನಾವಣೆ ನಿಂತರು. ಹಲವು ಸ್ಥಾನಗಳನ್ನು ಗೆದ್ದರು. 1943 ಪಟ್ ಇಂಡಿಯಾ ಚಳುವಳಿಯಲ್ಲೂ ಭಾಗವಹಿಸಿದ. ಜಯಪ್ರಕಾಶ್ ನಾರಾಯಣ್ ರವರ ಜೈಲಿನಿಂದ ತಪ್ಪಿಸಿಕೊಂಡು ಬ್ರೂಗತಕ್ಕಾಗಿ ಚಳುವಳಿ ನಡೆಸಿದ್ದು ಒಂದು ಸಾಧನೆಯೇ ಆಗಿದೆ. 1940 ರಿಂದ ಕಾಂಗ್ರೆಸ್ ಸೋಷಿಯಲಿಷ್ಟ್ ಪಕ್ಷವು ತನ್ನ ಪ್ರಾಬಲ್ಯವನ್ನು ಕಳೆದುಕೊಂಡಿತು. 1948 ರಲ್ಲಿ ನಾಸಿಕ್‌ನಲ್ಲಿ ಕಾಂಗ್ರೆಸ್ ಪಕ್ಷವನ್ನು ತ್ಯಜಿಸಿ ಸೋಷಿಯಲಿಷ್ಟ್ ಪಾರ್ಟಿ ಆಫ್ ಇಂಡಿಯಾ ಸ್ಥಾಪಿಸಿದರು. 1977 ರಲ್ಲಿ ಸೋಷಿಯಲಿಷ್ಟ್ ಪಾರ್ಟಿಯ ಜನತಾ ಪಕ್ಷದೊಂದಿಗೆ ವಿಲೀನವಾಯಿತು.

ಆದರೂ 1935 ರ ನಂತರ ಕಮ್ಯೂನಿಷ್ಟ್ ಪಕ್ಷವು ಹಲವು ಕಾರ್ಮಿಕ ಆಂದೋಲನಗಳನ್ನು ನಡೆಸಿತು. ಕಾರ್ಮಿಕ ಸಂಘಗಳ ಸ್ಥಾಪನೆ, ಕಾರ್ಮಿಕರಿಗೆ ಹಲವು ಸೌಲಭ್ಯಗಳು ಅಂದರೆ ಸಂಬಳ, ಕೆಲಸದ ಕಾಲ, ಇನ್ಸೂರೆನ್ಸ್ ಸೌಲಭ್ಯವೆಲ್ಲವನ್ನು ಕೊಡುವಂತೆ ಹೋರಾಡಿದರು. ಬಹಳಷ್ಟು ರಾಜ್ಯಗಳಲ್ಲಿ ಟ್ರೇಡ್ ಕಾರ್ಮಿಕರಿಗಾಗಿ ಹಲವಾರು ಸೌಲಭ್ಯಗಳು ದೊರೆತವಲ್ಲದೇ ಹಲವು ಸಮಸ್ಯೆಗಳು ನಿವಾರಣೆಯಾದವೆಂದು ಹೇಳಬಹುದು.

## 15.4 ಘಟಕದ ಸಾರಾಂಶ

ಈ ಘಟಕದ ಅಧ್ಯಯನದಿಂದ ನಾವು ಭಾರತದಲ್ಲಿ ಸಮಾಜವಾದದ ಪ್ರಚಾರ ಮತ್ತು ಬೆಳವಣಿಗೆ ಈ ವಾದಕ್ಕೆ ಪ್ರೇರೇಪಿತರಾಗಿ ಅನೇಕ ನಾಯಕರ ಉದಯ ಮತ್ತು ಅವರ ಕಾರ್ಯ ಚಟುವಟಿಕೆಗಳು ಈ ವಾದದ ಮೂಲಕ ಪ್ರಾರಂಭವಾದ ಅನೇಕ ಚಳುವಳಿಗಳು, ಅಲ್ಲದೇ ಕಾರ್ಮಿಕರು, ಕೃಷಿ ಕಾರ್ಮಿಕರನ್ನು ಒಂದೂ ಗೂಡಿಸಿದ್ದು, ಗಾಂಧೀಜಿಯವರು ಪ್ರಾರಂಭಿಸಿದ ಅನೇಕ ಚಳುವಳಿಗಳಲ್ಲಿ ಭಾಗವಹಿಸಿದುದ್ದು 1942ರ ಹಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿದ್ದುದು ಮುಂತಾದವುಗಳನ್ನು ಈ ಅಧ್ಯಾಯನದಲ್ಲಿ ನಾವು ತಿಳಿದುಕೊಂಡೆವು.

## 15.5 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಭಾರತದಲ್ಲಿ ಸಮಾಜವಾದದ ಬೆಳವಣಿಗೆ ಮತ್ತು ಅದರ ಕಾರ್ಯಗಳನ್ನು ವಿವರಿಸಿ.
2. ಸಮಾಜವಾದಿಘಲು ಸ್ವಾತಂತ್ರ್ಯ ಚಳುವಳಿಯಲ್ಲಿ ನಿರ್ವಹಿಸಿದ ಪಾತ್ರವನ್ನು ಚರ್ಚಿಸಿ.

## 15. ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


1. Sumit Sarkhu : Modern India
2. Hansraj : History of Modern India

## ಘಟಕ : 16 1919ರ ಭಾರತ ಸರ್ಕಾರ ಕಾಯ್ದೆ ಮತ್ತು ಸ್ವಾತಂತ್ರ್ಯ ಚಳುವಳಿ

ವಿಷಯಸೂಚಿ

## 16.0 ಉದ್ದೇಶಗಳು

ಈ ಘಟಕದ ಉದ್ದೇಶ ಭಾರತದ ಸ್ವತಂತ್ರ್ಯ ಚಳುವಳಿಯ ನಾಯಕರು ನಡೆಸಿದ್ದ ಹೋರಾಟದಿಂದ ಬ್ರಿಟಿಷರು ಭಾರತೀಯ ಕೆಲವಾರು ಸವಲತ್ತುಗಳನ್ನು ಕೊಡಬೇಕೆಂದು ತೀರ್ಮಾನಿಸಿ 1919ರಲ್ಲಿ ಭಾರತೀಯ ಕಾಯ್ದೆ ಅಥವಾ ಮಾಂಟೆಗ್ಯೂ ಚೆಲ್ಮ್ಸ್‌ಫೋರ್ಡ್ ಸುಧಾರಣೆಯನ್ನು ಜಾರಿಗೆ ತಂದರು. ಈ ಕಾಯ್ದೆಯ ಸ್ವರೂಪ ಭಾರತೀಯರಿಗೆ ನೀಡಿದ ಭರವಸೆ ಈ ಕಾಯ್ದೆಯ ಪರಿಣಾಮ ಮುಂತಾದವುಗಳನ್ನು ಈ ಕಾಯ್ದೆಯ ಬಗ್ಗೆ ವಿದ್ವಾಂಸರ ಟೀಕೆಗಳನ್ನು ಸಹ ಈ ಅಧ್ಯಾಯನದಲ್ಲಿ ಮಾಡಲು ಉದ್ದೇಶಿಸಿದೆ.

## 16.1 ಪೀಠಿಕೆ

1909ರ ಮಿಂಟೋ ಮಾರ್ಲೆ ಸುಧಾರಣೆಯು ಭಾರತೀಯರನ್ನು ತೃಪ್ತಿ ಪಡಿಸಲು ಭಾರತೀಯರು ಸ್ವಾತಂತ್ರ್ಯವನ್ನು ಬಯಸುತ್ತಿದ್ದರು ಮತ್ತು ಸರ್ಕಾರದಲ್ಲಿ ತಮ್ಮ ಬಾವಣೆಸುವಿಕೆಯನ್ನು ಇಚ್ಚಿಸಿದ್ದರು. ಇದರಿಂದ ಅವರು ಬ್ರಿಟಿಷರ ಭರವಸೆಯ ಮೇಲೆ ಪ್ರಥಮ ಮಹಾಯುದ್ಧವನ್ನು ಭಾಗವಹಿಸಿದರು. ಇದರಿಂದ ಭಾರತೀಯರಿಗೆ ಸರಕಾರ ಸ್ಥಾಪನೆಯ ಭರವಸೆಯನ್ನು ಈಡೇರಿಸಲು 1919ರಲ್ಲಿ ಭಾರತ ಸರ್ಕಾರ ಕಾಯ್ದೆ 1919 ಅಥವಾ ಮಾಂಟೆಗ್ಯೂ ಚೆಲ್ಮ್ಸ್ ಫೋರ್ಡ್ ಸುಧಾರಣೆಯನ್ನು ಜಾರಿಗೆ ತಂದು ಭಾರತದಲ್ಲಿ ದ್ವಿ ಸರ್ಕಾರ ನೀತಿಯನ್ನು ಜಾರಿಗೆ ತಂದು ಇಲ್ಲಿ ಅದ್ಯಾಯನ ಮಾಡುತ್ತೇವೆ.

## 16.2 ಭಾರತ ಸರ್ಕಾರ ಕಾಯ್ದೆ 1919 ಅಥವಾ ಮಾಂಟೆಗ್ಯೂ ಚೆಲ್ಮ್ಸ್ ಫೋರ್ಡ್ ಸುಧಾರಣೆಗಳು

ಈ ನಡುವೆ ಪಾರ್ಲಿಮೆಂಟ್ ಭಾರತ ಸರಕಾರ ಕಾಯದೆ (1919)ಯನ್ನು ಜಾರಿ ಮಾಡಿತು. ಅದರಂತೆ 1920ರ ನವೆಂಬರಿನಲ್ಲಿ ಮೊದಲ ಚುನಾವಣೆ ನಡೆಯಿತು. 1921ರ ಜನವರಿ ಒಂದರಿಂದ ಆ ಕಾಯದೆ ಅನುಷ್ಠಾನಕ್ಕೆ ಬಂತು. ಹಂತ ಹಂತವಾಗಿ ಜವಾಬ್ದಾರಿ ಸರಕಾರ ಸ್ಥಾಪನೆಯ ಭರವಸೆಯನ್ನು ಅದು ನೀಡಿತು. ಹಂತ ಹಂತವಾಗಿ ಮಾತ್ರ ಪ್ರಗತಿ ಸಾಧ್ಯ ಹಾಗೂ ಮುಂದಿನ ಪ್ರತಿಯೊಂದು ಹಂತದ ಕಾಲ ಮತ್ತು ಸ್ವರೂಪವನ್ನು ಪಾರ್ಲಿಮೆಂಟೇ ನಿರ್ಧರಿಸಬೇಕು ಎಂದು ಆ ಕಾಯದೆ ವಿವರಣೆ ನೀಡಿತು.

## 16.3 1919ರ ಕಾಯ್ದೆಯ ಪ್ರಕಾರ ಪ್ರಾಂತೀಯ ಸರ್ಕಾರದ ಸ್ವರೂಪ

1919ರ ಕಾಯ್ದೆಯಂತೆ ತರಲಾದ ಮುಖ್ಯ ಬದಲಾವಣೆಗಳು ಪ್ರಾಂತೀಯ ಸರಕಾರಗಳಿಗೆ ಸಂಬಂಧಪಟ್ಟವುಗಳಾಗಿದ್ದವು.

ಅದರಲ್ಲಿ ಸ್ಥಳೀಯ ಸರಕಾರ ಮತ್ತು ಸ್ಥಳೀಯ ಶಾಸಕ ಸಭೆಗಳ ಕಾರ್ಯವ್ಯಾಪ್ತಿಯನ್ನು ಗವರ್ನರ್ ಜನರಲ್‌ನ ಮಂಡಳಿ ಮತ್ತು ಭಾರತೀಯ (ಕೇಂದ್ರ) ಶಾಸನ ಸಭೆಗಳ ಕಾರ್ಯವ್ಯಾಪ್ತಿಯಿಂದ ಪ್ರತ್ಯೇಕಿಸುವ ಬಗ್ಗೆ ಅವಕಾಶ ಕಲ್ಪಿಸಲಾಗಿತ್ತು. ಅದಕ್ಕಾಗಿ "ಕೇಂದ್ರೀಯ ವಿಷಯಗಳು" ಮತ್ತು "ಪ್ರಾಂತೀಯ ವಿಷಯಗಳು" ಎಂದು, ಕಾರ್ಯ ವ್ಯಾಪ್ತಿಯನ್ನು ವರ್ಗೀಕರಿಸಲಾಗಿತ್ತು. ಅದರಂತೆ ರೂಪಿಸಿದ ನಿಯಮಗಳ ಪ್ರಕಾರ 45 ಕೇಂದ್ರೀಯ ವಿಷಯಗಳನ್ನು (ರಕ್ಷಣೆ, ವಿದೇಶಾಂಗ ವ್ಯವಹಾರ, ದೇಶೀಯ ರಾಜ್ಯಗಳೊಂದಿಗೆ ಸಂಬಂಧ, ರೈಲ್ವೆ, ಅಂಚೆ-ತಂತಿ, ಬೃಹತ್ ಬಂದರು, ಕರೆನ್ಸಿ, ಜನಗಣತಿ, ಅಪರಾಧ ಸಂಹಿತೆ ಇತ್ಯಾದಿ) 50 ಪ್ರಾಂತೀಯ ವಿಷಯಗಳನ್ನೂ ಎರಡು ಗುಂಪುಗಳಾಗಿ ವಿಭಜಿಸಲಾಗಿತ್ತು: (i) "ಮೀಸಲು" (ಉದಾಹರಣೆಗೆ, ಪೋಲಿಸ್, ಬಂದೀಖಾನೆ, ಪ್ರಾಂತೀಯ ಆದಾಯ ಮೂಲಗಳು, ನೀರಾವರಿ, ಭೂ ಕಂದಾಯ ವಸೂಲಿ, ನ್ಯಾಯದಾನ, ಕೈಗಾರಿಕಾ ಸಂಬಂಧ ಇತ್ಯಾದಿ) ಮತ್ತು (ii) "ವರ್ಗಾಯಿತ" (ಉದಾಹರಣೆಗೆ, ಸ್ಥಳೀಯ ಸ್ವಯಂ ಆಡಳಿತ, ವೈದ್ಯಕೀಯ, ಶಿಕ್ಷಣ, ಲೋಕೋಪಯೋಗಿ, ಕೃಷಿ ಇತ್ಯಾದಿ). ಪ್ರಾಂತೀಯ ವಿಷಯಗಳಲ್ಲಿ ಸೇರದಿದ್ದ ಎಲ್ಲವನ್ನು ಕೇಂದ್ರೀಯ ವಿಷಯಗಳೆಂದು ಪರಿಗಣಿಸಲಾಗುತ್ತಿತ್ತು.

## 16.4 ದ್ವಿಮುಖ ಆಡಳಿತ

ಪ್ರಾಂತೀಯ ಆಡಳಿತದಲ್ಲಿ 'ದ್ವಿಮುಖತೆ' ಇತ್ತು. "ಮೀಸಲು ವಿಷಯ" ಗಳ ನಿರ್ವಹಣೆಯಲ್ಲಿ ಕಾರ್ಯಕಾರಿ ಮಂಡಳಿಯ ಸದಸ್ಯರು ಗವರ್ನರರಿಗೆ ನೆರವಾಗುತ್ತಿದ್ದರು. ಆದರೆ ಈ ಸದಸ್ಯರು ಶಾಸನ ಸಭೆಗೆ ಜವಾಬ್ದಾರರಾಗಿರಲಿಲ್ಲ. "ವರ್ಗಾಯಿತ ವಿಷಯ" ಗಳಲ್ಲಿ ಸಚಿವರು ಗವರ್ನರರಿಗೆ ನೆರವಾಗುತ್ತಿದ್ದರು. ಈ ಮಂತ್ರಿಗಳು ಶಾಸನ ಸಭೆಯ ಚುನಾಯಿತ ಸದಸ್ಯರಾಗಿದ್ದರು. ಅವರನ್ನು ಮಂತ್ರಿಗಳನ್ನಾಗಿ ಆಯ್ಕೆ ಮಾಡುವ ಅಧಿಕಾರ ಗವರ್ನರರಿಗೆ ಸೇರಿದ್ದಾಗಿತ್ತು. ಆ

ಮಂತ್ರಿಗಳು ಶಾಸನ ಸಭೆಗೆ ಬದ್ಧರಾಗಿದ್ದರು. ಮಂತ್ರಿಗಳ ಸಲಹೆಗೆ ಗವರ್ನರ್ ಸಾಮಾನ್ಯವಾಗಿ ಬದ್ಧನಾಗಿರಬೇಕಿತ್ತು. ಆದರೆ ಅವರ ಅಭಿಪ್ರಾಯದೊಂದಿಗೆ ಭಿನ್ನಮತ ಹೊಂದಲು ಸಾಕಷ್ಟು ಕಾರಣವಿದ್ದಾಗ ಆತ ಮಂತ್ರಿಗಳ ಸಲಹೆಯನ್ನು ಮೀರಬಹುದಿತ್ತು. ಈ ಪದ್ಧತಿಯನ್ನು "ದ್ವಿತಂತ್ರ" ಅಥವಾ "ದ್ವಿಸರ್ಕಾರ" ಎಂದು ಕರೆಯಲಾಗಿತ್ತು. ಗರ್ವನರನು ಕಾರ್ಯಕಾರಿ ಮಂಡಳಿಯ ಸದಸ್ಯರನ್ನು ಹಾಗೂ ಸಚಿವರನ್ನು ಒಂದುಗೂಡಿಸುವ ಶಕ್ತಿಯಾಗಿ ಕಾರ್ಯ ನಿರ್ವಹಿಸಬೇಕಿತ್ತು.

ಪ್ರಾಂತೀಯ ಶಾಸನ ಸಭೆಗಳ ಗಾತ್ರವನ್ನು ಗಮನಾರ್ಹವಾಗಿ ಹಿಗ್ಗಿಸಲಾಯಿತು. ಮುಸ್ಲಿಮರ ಪ್ರತ್ಯೇಕ ಮತದಾರ ಕ್ಷೇತ್ರಗಳನ್ನು ಮುಂದುವರಿಸಲಾಯಿತು. ಹಾಗೂ ಸಿಖ್ಖರು, ಭಾರತೀಯ ಕ್ರೈಸ್ತರು, ಯೂರೋಪಿಯನರು ಮತ್ತು ಆಂಗ್ಲೋ-ಇಂಡಿಯನರಿಗೆ ಹೊಸತಾಗಿ ಪ್ರತ್ಯೇಕ ಮತದಾರ ಕ್ಷೇತ್ರಗಳನ್ನು ರಚಿಸಲಾಯಿತು. ನಾಮಕರಣದ ಮೂಲಕ ಇರುವ ಪ್ರಾತಿನಿಧ್ಯವನ್ನು ಉಳಿಸಿಕೊಳ್ಳಲಾಯಿತು. ಆದರೆ ಪ್ರತಿಯೊಂದು ಶಾಸನ ಸಭೆಯಲ್ಲೂ ಚುನಾಯಿತ ಸದಸ್ಯರದ್ದೇ ಬಹುಮತ ಇರುತ್ತಿತ್ತು.

ಪ್ರಾಂತ್ಯದಲ್ಲಿ, ಶಾಂತಿಯುತ ಹಾಗೂ ಒಳ್ಳೆಯ ಸರಕಾರ ಸ್ಥಾಪನೆಗಾಗಿ ಕಾನೂನನ್ನು ಸಿದ್ಧಪಡಿಸುವ ಅಧಿಕಾರ ಶಾಸನ ಸಭೆಗಿತ್ತು. ಆದರೆ ಅದರ ಮೇಲೆ ಹಲವು ಬಗೆಯ ನಿರ್ಬಂಧಗಳಿದ್ದವು. ಹಲವಾರು ವಿಶೇಷ ಅಧಿಕಾರಿಗಳು ಗವರ್ನರ್ ಹಾಗೂ ಗವರ್ನರ್ ಜನರಲ್ ಅವರಲ್ಲಿ ಕೇಂದ್ರೀಕೃತವಾಗಿದ್ದು, ಹಣಕಾಸಿನ ವಿಷಯ ಹಾಗೂ ಕಾಯದೆ ಸಿದ್ಧಪಡಿಸುವಲ್ಲಿ ಪ್ರಾಂತೀಯ ಶಾಸನ ಸಭೆಗಳ ಅಧಿಕಾರ ಅತ್ಯಂತ ಸೀಮಿತವಾಗಿತ್ತು.

## 16.5 ಘಟಕದ ಸಾರಾಂಶ

1919ರ ಕಾಯಿದೆಯ ಮೂಲಕ ತರಲಾದ ಬದಲಾವಣೆಗಳು ಸ್ವಯಂ ಆಡಳಿತದ ದಿಸೆಯಲ್ಲಿ ಮಗತ್ವದ ಹೆಜ್ಜೆಗಳಾಗಿರಲಿಲ್ಲ; ಆದರೆ ಅವು ತಾತ್ವಿಕವಾಗಿ ಮಹತ್ವ ಪಡೆದಿವೆ, ಏಕೆಂದರೆ ಜವಾಬ್ದಾರಿ ಸರಕಾರವು ಸಾಧಿಸಲಾಗದ ಕನಸಲ್ಲ -ಎಂಬುದನ್ನು ಅವು ಸಾಬೀತು ಪಡಿಸಿದವು. "ಸಾಂಸದಿಕ ಪದ್ಧತಿಯು ಭಾರತದ ರಾಜಕೀಯ ಗುರಿ ಆಗಬಾರದು" ಎನ್ನುವ ಲಾರ್ಡ್. ಮಾರ್ಲೆಯ ಅಭಿಪ್ರಾಯದಿಂದ ಅವು ಪೂರ್ತಿ ಭಿನ್ನವಾಗಿದ್ದವು. ಸಂಸದೀಯ ಸರ್ಕಾರ ಬೇಡ- ಎಂಬುದಕ್ಕೆ ಈ ಕಾಯದೆ ತಿಲಾಂಜಲಿ ನೀಡಿತು. ಭಾರತೀಯರು ತಮ್ಮ ಅಂತಿಮ ರಾಜಕೀಯ ಗುರಿಯತ್ತ ನಿಧಾನವಾಗಿ ಸಾಗಲು ಅನುಕೂಲವಾಗುವಂತೆ ಪರಿಮಿತವಾದ ಪ್ರಾಂತೀಯ ಸ್ವಯಂ ಆಡಳಿತದ ಅನುಭವವನ್ನು ಅವರಿಗೆ ನೀಡುವುದು ಈ ಕಾಯದೆಯನ್ನು ರೂಪಿಸಿದವರ ಉದ್ದೇಶವೆಂದು ಹೇಳಲಾಗುತ್ತದೆ.

## 16.6 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. 1919 ರ ಭಾರತ ಕಾಯ್ದೆಯ ಗುಣಾತಗುಣಗಳನ್ನು ಪರಿಶೀಲಿಸಿ.
2. 1919 ರ ಕಾಯ್ದೆಯು ಸ್ವಾತಂತ್ರ್ಯ ಚಳುವಳಿಯ ಒಂದು ಬಳುವಳಿಯಾಗಿತ್ತು ಚರ್ಚಿಸಿ.

## 16.7 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು

1. Hansraj — History of Modern India
2. Prasad L.P — History of Modern India

## ಘಟಕ 17 ಅಸಹಕಾರ ಚಳುವಳಿ (1920-22)

***ವಿಷಯ ಸೂಚಿ***

## 17.0 ಉದ್ದೇಶಗಳು

*ಘಟಕ 17ರಲ್ಲಿ ನಾವು:*

* ಗಾಂಧೀಜಿಯವರು ಪ್ರಾರಂಭಿಸಿದ ಸಹಕಾರ ಚಳುವಳಿಯನ್ನು ಅಧ್ಯಯನಮಾಡುವೆವು

* ರಾಷ್ಟ್ರೀಯ ಕಾಂಗ್ರೆಸ್ ಕಲ್ಕತ್ತಾ ಸಮ್ಮೇಳನದಲ್ಲಿ 1920ರ ಡಿಸೆಂಬರ್‌ನಲ್ಲಿ ಚುಳವಳಿ ಪ್ರಾರಂಭಿಸಲು ತೀರ್ಮಾನಿಸಲಾಯಿತು.

* ಈ ಚಳುವಳಿಯಲ್ಲಿ ಗಾಂಧೀಜಿಯವರು ಸಂಪೂರ್ಣ ಸ್ವಾತಂತ್ರ್ಯ ಅಥವಾ ಸ್ವರಾಜ್ಯವನ್ನು ಒತ್ತಾಯಿಸಿದ್ದನ್ನು ತಿಳಿಸಲಾಗುವುದು.

* ಈ ಚಳುವಳಿಯಲ್ಲಿ ಬಹುಜನರ ಸಹಕಾರವನ್ನು ಪಡೆಯಲು ತೀರ್ಮಾನಿಸಲಾಯ್ತು

* ಇಲ್ಲಿಯ ಹಲವು ಘಟನೆಗಳನ್ನು ಕಂಡು ಗಾಂಧೀಜಿಯವರು ಅಸಹಕಾರ ಚಳುವಳಿಯನ್ನು ಹಿಂತೆಗೆದುಕೊಂಡ ಬಗ್ಗೆ ತಿಳಿಯಲಾಗುವುದು.

## 17.1 ಪೀಠಿಕೆ

1919ನೇ ಡಿಸೆಂಬರ್‌ನಲ್ಲಿ ಅಮೃತಸರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಮಾಂಟೆಗ್ಯು ಚೇಮ್ಸ್‌ಫರ್ಡ್ ಸುಧಾರಣೆಗಳನ್ನು ಅಂಗೀಕರಿಸುವ ಪ್ರಶ್ನೆಯನ್ನು ವಿಶೇಷವಾಗಿ ಚರ್ಚಿಸಲಾಯಿತು. ಮೋತಿಲಾಲ್ ನೆಹರೂ ಈ ಅಧಿವೇಶನದ ಅಧ್ಯಕ್ಷರಾಗಿದ್ದರು. ಚಿತ್ತರಂಜನದಾಸ್ ಅವರು ಒಂದು ಪ್ರಮುಖ ಗೊತ್ತುವಳಿಯನ್ನು ಮಂಡಿಸಿ, 1919ರ ಸುಧಾರಣೆಗಳನ್ನು ಸಾರಾಸಗಟಾಗಿ ತಿರಸ್ಕರಿಸಬೇಕೆಂದು ಅಭಿಪ್ರಾಯಪಟ್ಟರು. ಆದರೆ ಗಾಂಧೀಜಿಯವರು ಆ ಗೊತ್ತುವಳಿಗೆ ಬದಲಾವಣೆಯನ್ನು ಸೂಚಿಸದರು. ಅದರಂತೆ ಶೀಘ್ರವೇ ಪೂರ್ಣ ಜವಾಬ್ದಾರಿಯುತ ಸರ್ಕಾರ ಸ್ಥಾಪನೆಗೆ ಅನುಕೂಲವಾಗುವಂತೆ ಮಾಂಟೆಗ್ಯು ಚೇಮ್ಸ್‌ಫರ್ಡ್ ಸುಧಾರಣೆಗಳನ್ನು ಕಾಂಗ್ರೆಸ್ ಅಂಗೀಕರಿಸಿತು.

ಗಾಂಧೀಜಿಯವರೇ ಮಂಡಿಸಿದ ಒಂದು ಗೊತ್ತುವಳಿಯ ಪ್ರಕಾರ ಕಾಂಗ್ರೆಸ್ ಹಂತ ಹಂತವಾಗಿ ಅಸಹಕಾರ ಚಳುವಳಿ ನಡೆಸುವ ಕಾರ್ಯಕ್ರಮವನ್ನು ಅಂಗೀಕರಿಸಿತು. ಮೊಹಮ್ಮದ್ ಅಲಿ ಅವರ ನೇತೃತ್ವದ ಖಿಲಾಫತ್ ಚಳವಳಿಗಾರರು ಗಾಂಧೀಜಿಯವರ ಗೊತ್ತುವಳಿಯನ್ನು ಬೆಂಬಲಿಸಿದರು. ದನ್ನು ಬೆಂಬಲಿಸಿದ ಪ್ರಮುಖ ಹಿಂದೂ ನಾಯಕರೆಂದರೆ ಮೋತಿಲಾಲ್ ನೆಹರೂ ಮಾತ್ರ.

ಗಾಂಧೀಜಿಯವರು ಅಧಿವೇಶನದ ಮುಂದಿಟ್ಟ ಪ್ರಸ್ತಾವಗಳೇನೆಂದರೆ ಬ್ರಿಟೀಷರು ಮಾಡಿದ ಎರಡು ಅನ್ಯಾಯಗಳಿಗೆ ಯೋಗ್ಯ ಪರಿಹಾರ ಹುಡುಕುವುದು. ಆ ಅನ್ಯಾಯಗಳಾವುವೆಂದರೆ:

1) ಖಿಲಾಫತ್ ಸಮಸ್ಯೆಯ ಕುರಿತಂತೆ 'ಭಾರತದ ಮುಸಲ್ಮಾನರ ಪರವಾಗಿ ತನ್ನ ಕರ್ತವ್ಯ' ನಿರ್ವಹಿಸುವಲ್ಲಿ ಬ್ರಿಟಿಷ್ ಸರಕಾರದ ವೈಫಲ್ಯ.

2) ಪಂಜಾಬಿನ ಮುಗ್ಧ ಜನರೊಡನೆ ಕ್ರೌರ್ಯದಿಂದ ವರ್ತಿಸಿದ ಸೈನ್ಯಾಧಿಕಾರಿಗಳನ್ನು ಸೂಕ್ತವಾಗಿ ಶಿಕ್ಷಿಸುವಲ್ಲಿ ಸರಕಾರದ ವೈಫಲ್ಯ. ಈ ಎರಡು ವಿಷಯಗಳ ಪೈಕಿ ಸಮಸ್ಯೆಗೆ ಗಾಂಧೀಜಿಯವರು ಆದ್ಯತೆ ನೀಡಿದರು.

ಅಸಹಕಾರ ಚಳವಳಿಯ ವಿವರವಾದ ಕಾರ್ಯಕ್ರಮವನ್ನೂ ಗಾಂಧೀಜಿಯವರು ಅಧಿವೇಶನದ ಮುಂದಿಟ್ಟರು. ಅವು ಯಾವುವೆಂದರೆ:

1) ಬಿರುದುಗಳನ್ನು ಗೌರವ ಪದವಿಗಳನ್ನು ಸರಕಾರಕ್ಕೆ ಮರಳಿಸುವುದು, ಹಾಗೂ ಸ್ಥಳೀಯ ಆಡಳಿತ ಸಂಸ್ಥೆಗಳ. ನಾಮಕರಣ ಮಾಡಿದ ಸ್ಥಾನಗಳಿಗೆ ರಾಜೀನಾಮೆ ನೀಡುವುದು.

2) ಸರಕಾರಿ ಸಮಾರಂಭಗಳಲ್ಲಿ ಭಾಗವಹಿಸದಿರುವುದು.

3) ಸರಕಾರಿ ನಿಯಂತ್ರಣದ ಶಾಲೆ ಮತ್ತು ಕಾಲೇಜುಗಳಿಂದ ಮಕ್ಕಳನ್ನು ಹಂತ ಹಂತವಾಗಿ ಬಿಡಿಸುವುದು.

4) ನ್ಯಾಯವಾದಿಗಳು ಮತ್ತು ಕಕ್ಷಿಗಾರರ ಬ್ರಿಟಿಷ್ ನ್ಯಾಯಾಲಯಗಳನ್ನು ಕ್ರಮೇಣ ಬಹಿಷ್ಕರಿಸುವುದು.

5) ಸೇನೆ, ಗುಮಾಸ್ತ ಹಾಗೂ ಕಾರ್ಮಿಕ ವರ್ಗದವರು ಮೆಸಪಟೋಮಿಯದಲ್ಲಿ ಸೇವೆ ಸಲ್ಲಿಸಲು ನಿರಾಕರಿಸುವುದು.

6) ಅಭ್ಯರ್ಥಿಗಳು ಹಾಗೂ ಮತದಾರರು ಶಾಸನ ಸಭಾ ಚುನಾವಣೆಗಳನ್ನು ಬಹಿಷ್ಕರಿಸುವುದು.

7) ವಿದೇಶಿ ವಸ್ತುಗಳ ಬಹಿಷ್ಕಾರ

8) ರಾಷ್ಟ್ರೀಯ ಶಾಲೆ, ಕಾಲೇಜುಗಳ ಸ್ಥಾಪನೆ

9) ಖಾಸಗಿ ವ್ಯಾಜ್ಯಗಳನ್ನು ಇತ್ಯರ್ಥಗೊಳಿಸಲು ಖಾಸಗಿ ಸಂಧಾನ ನ್ಯಾಯಾಲಯಗಳನ್ನು ತೆರೆಯುವುದು.

ನಾಗಪುರ ಕಾಂಗ್ರೆಸ್, 1920: ಕಲ್ಕತ್ತ ಅಧಿವೇಶನದ ಗೊತ್ತುವಳಿಯನ್ನು ನಾಲ್ಕು ತಿಂಗಳುಗಳ ಬಳಿಕ ಕಾಂಗ್ರೆಸ್ಸಿನ ನಾಗಪುರ ಅಧಿವೇಶನದಲ್ಲಿ ಅಂಗೀಕರಿಸಲಾಯಿತು. ಚಿತ್ತರಂಜನದಾಸ್ ಅವರು ತನ್ನ ಪೂರ್ವಾಭಿಪ್ರಾಯವನ್ನು ಬದಲಿಸಿ ಗಾಂಧೀಜಿಯವರು ಜತೆ ಸೇರಿ ಅಸಹಕಾರ ಚಳವಳಿಯನ್ನು ಬೆಂಬಲಿಸಿದರು. ಆದರೆ ಅದನ್ನು ಟೀಕಿಸಿದ ಬಿಪಿನ್ ಚಂದ್ರಪಾಲ್, ಆನಿ ಬೆಸೆಂಟ್, ಮದನಮೋಹನ ಮಾಲವೀಯ, ಮಹಮದ್ ಆಲಿ ಜಿನ್ನಾ ಇವರುಗಳು ತಮ್ಮ ವಿರೋಧವನ್ನು ಮುಂದುವರಿಸಿದರು.

***ಕಾಂಗ್ರೆಸ್ಸಿನ ಸಂವಿಧಾನದಲ್ಲಿ ಎರಡು ಬದಲಾವಣೆಗಳನ್ನು ಮಾಡಲಾಯಿತು.***

1. ಆವರಿಗೆ 'ಬ್ರಿಟಿಷ್ ಸಾಮ್ರಾಜ್ಯದೊಳಗೆ ಸ್ವಯಂ ಆಡಳಿತ' ಎಂಬುದು ಕಾಂಗ್ರೆಸ್ಸಿನ ಗುರಿಯಾಗಿತ್ತು. ಅದನ್ನು ತೆಗೆದು 'ಸ್ವರಾಜ್ಯ'ವು ಕಾಂಗ್ರೆಸಿನ ಗುರಿಯೆಂದು ಬದಲಾವಣೆ ಮಾಡಲಾಯಿತು. ಗಾಂಧೀಜಿಯವರು 'ಸ್ವರಾಜ್ಯ'ಶಬ್ದಕ್ಕೆ ನೀಡಿದ ವ್ಯಾಖ್ಯೆ ಹೀಗಿತ್ತು. ಸಾಧ್ಯವಾದರೆ ಸಾಮ್ರಾಜ್ಯದೊಳಗೆ ಸ್ವಯಂ ಆಡಳಿತ, ಅಲ್ಲವಾದರೆ ಸಾಮ್ರಾಜ್ಯದ ಹೊರಗೆ ಆದರೆ ಅವರು 'ಸ್ವಯಂ ಆಡಳಿತ' ದ ಸ್ವರೂಪವನ್ನು ಸೂಚಿಸಲಿಲ್ಲ.

2. ತನ್ನ ಗುರಿ ಸಾಧನೆಗೆ 'ಸಾಂವಿಧಾನಿಕ ಮಾರ್ಗ' ವನ್ನು ಅನುಸರಿಸಬೇಕೆನ್ನುವುದು ಕಾಂಗ್ರೆಸ್ಸಿನ ಆವರೆಗಿನ ನಿಬಂಧೆಯಾಗಿತ್ತು. ಅದರ ಬದಲಿಗೆ 'ಎಲ್ಲ ಶಾಂತಿಯುತ ಹಾಗೂ ನ್ಯಾಯ ಸಮ್ಮತ ವಿಧಾನ' ಎನ್ನುವ ಪದಗನ್ನು ಬಳಸಲಾಯಿತು. ಈ ಬದಲಾವಣೆಯು ಕಾನೂನು ಭಂಗಕ್ಕೆ ಅವಕಾಶ ಕಲ್ಪಿಸಿಕೊಟ್ಟಿತು. (ಕಾನೂನು ಭಂಗ ಮಾಡುವುದು 'ಅಸಂವಿಧಾನಿಕ' ವೆಂದು ಪರಿಗಣಿಸಲಾಗುವುದಿಲ್ಲ) ಈ ಬದಲಾವಣೆ ರಾಜಕೀಯವಾಗಿಯೂ, ನೈತಿಕವಾಗಿಯೂ, 'ನ್ಯಾಯ ಸಮ್ಮತ' ಮತ್ತು 'ಶಾಂತಿಯುತ' ಪ್ರತಿಭಟನೆಗಳಿಗೆ ಹಾದಿ ಮಾಡಿಕೊಟ್ಟಿತು.

ಕಲ್ಕತ್ತದಲ್ಲಿ ಅಂಗೀಕರಿಸಿದ ಗೊತ್ತುವಳಿಗೆ ಮೂರು ಪ್ರಮುಖ ಅಂಶಗಳ ರಚನಾತ್ಮಕ ಕಾರ್ಯಕ್ರಮವೊಂದನ್ನು ಸೇರಿಸಲಾಯಿತು. ಅವುಗಳೆಂದರೆ:

1) ಸ್ವದೇಶಿ: ವಿಶೇಷವಾಗಿ ನೂಲುವುದು ಮತ್ತು ನೇಯುವುದಕ್ಕೆ ಪ್ರೋತ್ಸಾಹ.

2) ಅಸ್ಪೃಶ್ಯತೆಯ ನಿವಾರಣೆ

3) ಹಿಂದು-ಮುಸ್ಲಿಮ್ ಏಕತೆ.

## 17.2 ಅಸಹಕಾರ ಚಳುವಳಿ (1920-1922)

ಅಸಹಕಾರ ಚಳುವಳಿ ಅತ್ಯಲ್ಪ ಕಾಲ ನಡೆಯಿತು. ಅದರ ಯಶಸ್ಸು ಕೂಡ ಅತ್ಯಂತ ಸೀಮಿತವಾಗಿತ್ತು. ಕಲ್ಕತ್ತ ಕಾಂಗ್ರೆಸ್ ಅಧಿವೇಶನದಲ್ಲಿ ಮಂಡಿಸುವುದಕ್ಕಿಂತ ಒಂದು ತಿಂಗಳು ಮೊದಲೇ 1920 ಆಗಸ್ಟ್ ಒಂದರಂದು ಗಾಂಧೀಜಿಯವರು ಅದನ್ನು ತಾವೇ ಸ್ವತಃ ಆರಂಭಿಸಿದರು. ಅವರಿಗೆ ಅಸಹಕಾರವು ಅಖಂಡ ನಂಬಿಕೆಯ ವಿಷಯವಾಗಿತ್ತು. ಕಲ್ಕತ್ತ ಮತ್ತು ನಾಗಪುರ ಅಧಿವೇಶನಗಳಲ್ಲಿ ಗಾಂಧೀಜಿಯವರು ಮಂಡಿಸಿದ ಕಾಂಗ್ರೆಸ್ ಸಂಸ್ಥೆಯು ಸಂಪೂರ್ಣವಾಗಿ ಅವರ ನಿಯಂತ್ರಣದಲ್ಲಿತ್ತು. ಅಹ್ಮದಾಬಾದ್ ಅಧಿವೇಶನದಲ್ಲಿ (ಡಿಸೆಂಬರ್ 1921) ಅಹಿಂಸಾತ್ಮಕ ಅಸಹಕಾರ ಚಳವಳಿಯನ್ನು ಇನ್ನಷ್ಟು ತೀವ್ರವಾಗಿ ಮುಂದುವರಿಸುವ ತನ್ನ ದೃಢ ನಿರ್ಧಾರವನ್ನು ಕಾಂಗ್ರೆಸ್ ಪ್ರಕಟಿಸಿತು.

1922 ರ ಆರಂಭದಲ್ಲಿ ಗಾಂಧೀಜಿ ಗುಜರಾತಿನ ಬಾರ್ಡೋಲಿಯಲ್ಲಿ ಕರ ನಿರಾಕರಣೆ ಚಳುವಳಿಯನ್ನು ನಡೆಸಲು ನಿರ್ಧರಿಸಿದರು. ಅದೇ ವೇಳೆ ವೈಸರಾಯ್‌ಗೆ ಬರೆದ ಒಂದು ಪತ್ರದಲ್ಲಿ, ಸರಕಾರವು ಭಾರತದ ಜನತೆಗೆ ಮಣಿಯದಿದ್ದಲ್ಲಿ 'ಉಗ್ರವಾದ ಕಾಯ್ದೆ ಭಂಗ' ಚಳುವಳಿಯನ್ನು ಕೈಗೊಳ್ಳುವುದಾಗಿ ಘೋಷಿಸಿದರು. ಆದರೆ ಸಂಯುಕ್ತ ಪ್ರಾಂತ್ಯಗಳ (ಉತ್ತರ ಪ್ರದೇಶ) ಚೌರಿಚೌರಾ ಎಂಬ ಹಳ್ಳಿಯಲ್ಲಿ ಪೋಲೀಸರ ಮೇಳ ಜನತೆ ನಡೆಸಿದ ಸಾಮೂಹಿಕ ಹಿಂಸಾಚಾರದಿಂದ ನೊಂದ ಗಾಂಧೀಜಿಯವರು ಅಸಹಕಾರ ಚಳವಳಿಯನ್ನು ತಕ್ಷಣ ನಿಲ್ಲಿಸಿ ಬಿಟ್ಟರು. (ಫೆಬ್ರವರಿ 1922) ದೇಶದ ಜನರ ಮೇಲೆ ಅವರ ಪ್ರಭಾವ ದುರ್ಬಲವಾಗಿದೆಯೆಂದು ಮನಗಂಡ ಸರಕಾರ ಅವರನ್ನು 1922 ಮಾರ್ಚ್‌ನಲ್ಲಿ ಬಂಧಿಸಿ ಆರು ವರ್ಷಗಳ ಕಾಲ ಸೆರೆಮನೆ ವಾಸವನ್ನು ವಿಧಿಸಿತು.

ಅಸಹಕಾರ ಚಳವಳಿಯ ವೇಳೆ ಬ್ರಿಟಿಷ್ ಸರಕಾರದ ವಿರುದ್ಧ ಬಳಸಿದ ಪ್ರಮುಖ ಆಯುಧವೆಂದರೆ ಶಾಸನ ಸಭೆ, ನ್ಯಾಯಾಲಯ ಹಾಗೂ ಶಿಕ್ಷಣ ಸಂಸ್ಥೆಗಳ ಬಹಿಷ್ಕಾರ, ಕಾಂಗ್ರೆಸ್ ಅಭ್ಯರ್ಥಿಗಳು ಚುನಾವಣೆಗಳಲ್ಲಿ ಸ್ಪರ್ಧಿಸದ ಕಾರಣ 1919 ರ ಭಾರತ ಸರ್ಕಾರ ಕಾಯಿದೆಯನ್ವಯ ರಚನೆಯಾದ ಹೊಸ ಶಾಸನ ಸಭೆಗಳಿಗೆ ಕಾಂಗ್ರೆಸ್ಸೇತರ ಅಭ್ಯರ್ಥಿಗಳೇ ಆಯ್ಕೆಯಾದರು. ಮತದಾರರು ಮತ ಚಲಾಯಿಸುವಂತೆ ತಡೆಯುವಷ್ಟು ಕಾಂಗ್ರೆಸ್ ಬಲಶಾಲಿಯಾಗಿರಲಿಲ್ಲ. ಏನಿದ್ದರೂ ಶಾಸನ ಸಭೆಗಳು ತಮ್ಮ ಕಾರ್ಯ ನಿರ್ವಹಿಸುದವುಃ ಯಾವ ರೀತಿಯ ಸಾಂವಿಧಾನಿಕ ಬಿಕ್ಕಟ್ಟು ತಲೆದೋರಲಿಲ್ಲ. ಆದರೆ ಈ ಹೊಸ ಶಾಸನ ಸಭೆಗಳು ಎಲ್ಲಾ ಮತದಾರರ ನೈಜ ಪ್ರಾತಿನಿಧಿಕ ಸಭೆಗಳೆಂದು ಹೇಳುವುದು ಸರಿಯಲ್ಲ. ಎಲ್ಲ ನ್ಯಾಯವಾದಿಗಳೂ ಎಲ್ಲಾ ಕಕ್ಷಿಗಾರರೂ ಸಾಮೂಹಿಕವಾಗಿ ನ್ಯಾಯಾಲಯಗಳನ್ನು ಬಹಿಷ್ಕರಿಸಲಿಲ್ಲ. ಬಿರುದುಗಳನ್ನು ಸರಕಾರಕ್ಕೆ ಮರಳಿಸಿದವರು ಹಾಗೂ ಸರಕಾರಿ ಸೇವೆಗೆ ರಾಜೀನಾಮೆ ನೀಡಿದವರ ಸಂಖ್ಯೆ ಗಣನೀಯವಾಗಿರಲಿಲ್ಲ. ಹೊಸ ಶಾನ ಸಭೇಗಳನ್ನು ಉದ್ಘಾಟಿಸಲು ವೇಲ್ಸ್‌ನ ಯುವರಾಜ ಅಧಿಕೃತ ಭೇಟಿ ನೀಡಿದಾಗ (ನವೆಂಬರ್ 1920) ಅದನ್ನು ಯಶಸ್ವಿಯಾಗಿ ಬಹಿಷ್ಕರಿಸಲಾಯಿತು. ಆದರೆ ಅದರಿಂದ ರಾಜಕೀಯವಾದ ಪ್ರಯೋಜನವೇನೂ ಲಭಿಸಲಿಲ್ಲ. ಶಾಲೆ, ಕಾಲೇಜುಗಳ ಬಹಿಷ್ಕಾರ ಕೂಡ ಪರಿಣಾಮಕಾರಿಯಾಗಿರಲಿಲ್ಲ. ದೇಶದ ಹಲವು ಭಾಗಗಳಲ್ಲಿ ಜನತೆ ಅಹಿಂಸಾ ಮಾರ್ಗವನ್ನು ಉಲ್ಲಂಘಿಸಿದರೆನ್ನುವುದು ಗಾಂಧೀಜಿಯವರನ್ನು ಬೇಸರಕ್ಕೀಡು ಮಾಡಿತು. ಸರಕಾರವು ಅಸಹಕಾರ ಚಳವಳಿಯನ್ನು ಹತ್ತಿಕ್ಕಲು ಹಲವಾರು ದಮನಕಾರಿ ಕ್ರಮಗಳನ್ನು ಕೈಗೊಂಡಿತು.

ಆದರೆ ಸಹಕಾರ ಚಳುವಳಿಯು ದೇಶದಾದ್ಯಂತ ವಿಶೇಷವಾಗಿ ಪಶ್ಚಿಮ ಭಾರತ, ಬಂಗಾಳ ಮತ್ತು ಉತ್ತರ ಭಾರತಗಳಲ್ಲಿ ಅಭೂತಪೂರ್ವವಾದ ಉತ್ಸಾಹವನ್ನು ಕೆರಳಿಸಿತು. ಜನತೆಯ ಸ್ವಾತಂತ್ರ್ಯ ಪ್ರೇಮಕ್ಕೆ ಹೊಸ ಕಳೆಯನ್ನು ನೀಡಿತು. ಭಾರತದ ಇತಿಹಾಸದಲ್ಲಿ ಹೊಸತೊಂದು ಆಯಾಮ ಮೂಡಿತು. ಗಾಂಧೀಜಿಯವರು ಜನ ಸಮೂಹದ ಕಣ್ಮಣಿಯಾದರು. 'ಜನತೆಯನ್ನು ಬಡಿದೆಬ್ಬಿಸಿದ ಅತ್ಯುತ್ತಮ ಸಂಯೋಜಕ ಹಾಗೂ ರಾಜಕೀಯ ಚಟುವಟಿಕೆಯ ವಿವಿಧ ಸ್ತರಗಳ ನಡುವಣ ಕೊಂಡಿ'ಯಾಗಿ ಅವರು ರಾಜಕೀಯ ರಂಗಸ್ಥಳದಲ್ಲಿ ಮೆರೆದರು. ಆದರೆ ಉಕ್ಕಿ ಬಂದಿದ್ದ ಜನರ ಎಲ್ಲಾ ನಿರೀಕ್ಷೆಗಳನ್ನು ನನಸಾಗಿಸುವಲ್ಲಿ ಅವು ವಿಫಲರಾದರು. ಅವರು ಹಠಾತ್ತನೆ ಚಳುವಳಿಯನ್ನು ನಿಲ್ಲಿಸಿದ್ದರಿಂದ ಜನಸಾಗರಲ್ಲಿ ಹತಾಶೆಯ ಅಲೆಗಲು ಎದ್ದುವು. ಅವರ ಬಂಧನದ ಬಳಿಕ ಜನತೆಯಲ್ಲಿ ರಾಜಕೀಯ ತಾಟಸ್ಥ್ಯ ತಲೆದೋರಲು ಈ ಹತಾಶೆಯೇ ಕಾರಣವಾಯಿತು. ಇಡೀ ಚಳುವಳಿಯು ಒಬ್ಬ ವ್ಯಕ್ತಿಯ ಮೇಲೆ ಆಧಿರಿತವಾಗಿದ್ದ

ಕಾರಣ ಗಾಂಧೀಜಿಯವರ ಸಕ್ರಿಯ ನಾಯಕತ್ವ ಇಲ್ಲವಾದಾಗ ತಾತ್ಕಾಲಿಕವಾಗಿ ಚಳುವಳಿಯು ಕ್ಷೀಣಿಸಿತು. ಏಕ ವ್ಯತಿಯ ಮೇಲೆ ಆಧಾರಿತವಾದ ರಾಜಕೀಯ ಆಂದೋಲನ. ಆತ ಎಷ್ಟೇ ಸಮರ್ಥನಿದ್ದರೂ, ಗುರಿ ಮುಟ್ಟಲಾರದು ಎಂಬುವುದಕ್ಕೆ ಇದೊಂದು ನಿದರ್ಶನ.

## 17.3 ಚಳುವಳಿಯ ಪರಿಣಾಮಗಳು

* ಅಸಹಕಾರ ಚಳುವಳ್ಳಿಯು ಭಾರತದಲ್ಲಿ ರಾಷ್ಟ್ರೀಯ ಹೋರಾಟವನ್ನು ಬಲಪಡಿಸಿತು.
* ರಾಷ್ಟ್ರದಲ್ಲಿ ಬ್ರಿಟೀಷ್ ವಿರೋಧಿ ಪರಿಸರವನ್ನು ಸುಟು ಹಾಕಿತು.
* ಈ ಚಳುವಳಿಯು ಜನತೆಯ ಅನ್ಯಾಯದ ಬಗ್ಗೆ ಹೋರಾಡಲು ಉತ್ತೇಜಿಸಿತು.
* ಈ ಚಳುವಳಿಯಲ್ಲಿದ ಖಾದಿ ಉಪಯೋಗ ಮತ್ತು ಸ್ವದೇಶಿ ಮುಂದಿನ ಚಳುವಳಿಗೆ ನಾಂದಿಯಾಯಿತು.
* ಜನರಲ್ಲಿ ಜೈಲಿಗೆ ಹೋಗುವ ಬಗ್ಗೆ ಇದ್ದ ಭಯ ಹೊರಟು ಹೋಯಿತು.
* ಭಾರತದಲ್ಲಿ ರಾಷ್ಟ್ರೀಯ ಶಿಕ್ಷಣಕ್ಕೋಸ್ಕರ ಸಂಸ್ಥೆಗಳನ್ನು ಸ್ಥಾಪಿಸುವ ಕಾರ್ಯನಡೆದವು.
* ಕಾಂಗ್ರೆಸ್ಸಿನ ಕಾರ್ಯಕ್ರಮಗಳಲ್ಲಿ ಹಲವು ಬದಲಾವಣೆಗಳು ಹುಟ್ಟಿಕೊಂಡಿತು.
* ಗ್ರಾಮೀಣ ಜನರಲ್ಲೂ ಈ ಚಳುವಳಿಯ ರಾಷ್ಟ್ರೀಯತೆ ಹುಟ್ಟಿಸಿ ಹೋರಾಡುವಂತೆ ಮಾಡಿತು.
* ಹಿಂದಿ ಭಾಷೆಗೆ ಇಂಗ್ಲೀಷ್ ಭಾಷೆಗಿಂತ ಉತ್ತಮ ಸ್ಥಾನವನ್ನು ನೀಡಲಾಯಿತು.

### *17.3.1 ಕೋಮು ಗಲಭೆಗಳು*

ಒಂದು ವರ್ಷದೊಳಗೆ ದೇಶಕ್ಕೆ ಸ್ವಾತಂತ್ರ್ಯ ತಂದುಕೊಡುವ ಗಾಂಧೀಜಿಯವರ ಭರವಸೆ ಫಲಕಾರಿಯಾಗಲಿಲ್ಲ: ಖಿಲಾಫತ್ ಮತ್ತು ಅಸಹಕಾರ ಚಳುವಳಿಗಳ ಮೂಲಕ, ಉಭಯ ಸಮುದಾಯಗಳ ಹೃತ್ಪೂರ್ವಕ ಸರಕಾರದ ಮೂಲಕ ಹಿಂದೂ-ಮುಸ್ಲಿಮ್ ಏಕತೆಯನ್ನು ಸಾಧಿಸಲಾಗುವುದು ಎನ್ನುವ ಮಾತನ್ನು ಕೂಡ ಉಳಿಸಿಕೊಳ್ಳಲು ಅವರಿಗೆ ಸಾಧ್ಯವಾಗಲಿಲ್ಲ. ನಿಜ ಸಂಗತಿಯೆಂದರೆ 1921-27ರ ಅವಧಿಯಲ್ಲಿ ಕೋಮು ಸಂಬಂಧಗಳು ಮೊದಲಿನದಕ್ಕಿಂತ ಬಹಳಷ್ಟು ಶಿಥಿಲವಾಗಿದ್ದುವು. ಮಲಬಾರಿನಲ್ಲಿ 1921ರಲ್ಲಿ ನಡೆದ ಮಾಪಿಳ್ಳೆ ದಂಗೆಯು ಅಸಹಕಾರ ಚಳುವಳಿಯ ವಿಷ ಫಲವಾಗಿತ್ತು. ಮುಲ್ತಾನಿನಲ್ಲಿ 1922ಮತ್ತು 1923ರಲ್ಲಿ ದೆಹಲಿ ಮತ್ತು ವಾಯುವ್ಯ ಗಡಿ ಪ್ರಾಂತದ ಕೋಹಟ್‌ನಲ್ಲಿ 1924ರಲ್ಲಿ ತೀವ್ರವಾದ ಕೋಮು ಗಲಭೆಗಳು ಸಂಭವಿಸಿದವು.

ಶಿಕ್ಷೆಯ ಅವಧಿ ಮುಗಿಯುವ ಮುನ್ನವೇ 1924ಫೆಬ್ರವರಿಯಲ್ಲಿ ಗಾಂಧೀಜಿಯವರ ಬಿಡುಗಡೆಯಾಯಿತು. ಹಿಂದೂ ಮುಸ್ಲಿಮರ ಪರಸ್ಪರ ಸಂಬಂಧವು ಬಿಗಡಾಯಿಸುತ್ತಿದ್ದು, ಉಭಯ ಸಮುದಾಯಗಳ ಹೃದಯಗಳನ್ನು ಬೆಸೆಯಲು ಗಾಂಧೀಜಿಯವರು ಮೂರು ವಾರಗಳ ಉಪವಾಸ ಸತ್ಯಾಗ್ರಹ ಕೈಗೊಂಡರು. ಆದರೂ 1925ರಲ್ಲಿ ಹದಿನಾರು ಕೋಮು ಗಲಭೆಗಳು ಸಂಭವಿಸಿದವು. 1926ರಲ್ಲಿ ಕಲ್ಕತ್ತದಲ್ಲೊಂದು ಭೀಕರ ಗಲಭೇ ನಡೆಯಿತು. ಇಸ್ಲಾಮ್ ಮತ್ತು ಇತರ ಮತಗಳಿಗೆ ಪರಿವರ್ತಿತರಾದ ಹಿಂದುಗಳನ್ನು ಮರಳಿ ಮಾತೃಧರ್ಮಕ್ಕೆ ಸ್ವೀಕರಿಸುವ ಶುದ್ಧಿಯ ಅಭಿಯಾನ ನಡೆಸಿದ ಸ್ವಾಮಿ ಶ್ರದ್ಧಾನಂದರನ್ನು ಅವರ ರಂಗಶಯ್ಯೆಯಲ್ಲೇ ಹತ್ಯೆ ಮಾಡಲಾಯಿತು. ಸೈಮನ್ ಆಯೋಗವು 1923ಮತ್ತು 1927ರ ನಡುವೆ ಸಂಭವಿಸಿದ 112ಗಲಭೇಗಳ ಹಾದಿಯನ್ನು ಸಿದ್ಧಪಡಿಸಿತು. ಅವು ನಿರ್ಧಿಷ್ಟ ಪ್ರದೇಶಕ್ಕೆ ಸೀಮಿತವಾಗಿರಲಿಲ್ಲ. ಬಹುತೇಕ ಎಲ್ಲ ಪ್ರಾಂತಗಳಲ್ಲಿ ಕೋಮು ಗಲಭೆಗಳು ಸಂಭವಿಸಿದವು.

## *17.4 ಘಟಕದ ಸಾರಾಂಶ*

ಈ ಘಟಕದ ಅಧ್ಯಯನದಿಂದ ಅಸಹಕಾರ ಚಳುವಳಿಯಲ್ಲಿಯ ಹಲವು ಪ್ರಮುಖ ನಿಬಂದನೆಗಳಿಂದ ಸರ್ಕಾರದೊಂದಿಗೆ ಸಹಕರಿಸದಿರುವುದು ಅಂದರೆ, ತೆರಿಗೆ ನೀಡದಿರುವುದು ಕಛೇರಿ ಕೆಲಸದಲ್ಲಿ ಸಹಕಾರ, ಸ್ವದೇಶಿ ವಸ್ತುಗಳನ್ನು ಉಪಯೋಗಿಸುವುದು ವಿದೇಶಿ ವಸ್ತುಗಳನ್ನು ಉಪಯೋಗಿಸದಿರುವುದು. ಶಾಲಾ ಕಾಲೇಜುಗಳಿಗೆ ಹೋಗದಿರುವುದು ಸರ್ಕಾರಿ ಪದವಿಗಳನ್ನು ಬಿಟ್ಟು ಬಿಡುವುದು

ಕೋರ್ಟ್‌ಗಳಿಗೆ ಭಹಿಷ್ಕಾರ ಹಾಕುವುದು, ಹಿಂದೂ ಮುಸ್ಲಿಂ ಏಕತೆ ಅಸ್ಪೃಷ್ಯತೆ ಆಚರಿಸದಿರುವುದು ಮುಂತಾದುವುಗಳನ್ನು ................ ಇದಲ್ಲದೇ ಗಾಂಧೀಜಿಯವರು ಚಳುವಳಿಯನ್ನು ಹಿಂತೆಗೆದುಕೊಂಡುದನ್ನು ನೋಡಿದ ಹಲವು ನಾಯಕರು ಕಾಂಗ್ರೆಸ್ಸಿನಿಂದ ಹೊರಬಂದು ಸ್ವರಾಜ್ಯ ಪಕ್ಷ ಸ್ಥಾಪಿಸಿದ್ದು, ಹಿಂದೂ-ಮುಸ್ಲಿಂ ಸ್ನೇಹದ ಬಿಕ್ಕಟ್ಟು, ಇದರ ಪರಿಣಾಮ ಸೈರುನ್ ................. ನೇಮಕ ಮುಂತಾದವುಗಳ ವಿಷಯಗಳನ್ನು ಸಹ ಈ ಚಳುವಳಿಯಿಂದ ಅರ್ಥ ಮಾಡಿಕೊಂಡೆವು.

## 17.5 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಅಸಹಕಾರ ಚಳುವಳಿಯ ಕಾರಣಗಳು ಮತ್ತು ಪರಿಣಾಮಗಳನ್ನು ತಿಳಿಸಿ.
2. ಅಸಹಕಾರ ಚಳುವಳಿಯಲ್ಲಿ ಗಾಂಧಿಜೀಯವರ ಪಾತ್ರವನ್ನು ಅಂದಾಜು ಮಾಡಿ.

## 17.6 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


1. Sumit Sarkar : History of Modern India
2. ಡಾ||ನರೇಂದ್ರ ಪ್ರಸಾದ್ : ಭಾರತ ಸ್ವತಂತ್ರ್ಯ ಚಳುವಳಿ ಮತ್ತು ಇತರರು
3. HansRaj : History of Modern India.


ಡಾ. ಎ. ಸೋಮಶೇಖರ್

## ಘಟಕ 18 ಕಾಯ್ದೆ ಭಂಗ ಚಳುವಳಿ (1930-34)

*ವಿಷಯ ಸೂಚಿ*

## 18.0 ಉದ್ದೇಶಗಳು

ಈ ಘಟಕದ ಉದ್ದೇಶವು, ಕಾಂಗ್ರೆಸ್ ಜವಾಹರ್‌ಲಾಲ್ ನೆಹರೂರವರ ಅಧ್ಯಕ್ಷತೆಯಲ್ಲಿ 1929ರ ಅಧಿವೇಶನದಲ್ಲಿ ಪೂರ್ಣ ಸ್ವರಾಜ್ ಅಥವಾ ಪೂರ್ಣ ಸ್ವಾತಂತ್ರ್ಯಪಡೆಯಲು ................ ಇದರ ಅಡಿಯಲ್ಲಿ ಗಾಂಧೀಡಿಯವರು 1930ರಲ್ಲಿ ಕಾಯ್ದೆ ಭಂಗ ಚಳುವಳಿಯನ್ನು ಉಪ್ಪಿನ ಸತ್ಯಾಗ್ರಹ ಮುಂತಾದವುಗಳ ಮೂಲಕ ಪ್ರಾರಂಭ ಮಾಡಿದರು. ತೆರಿಗೆ ನೀಡದಿರುವುದು ಸರ್ಕಾರದ ಪದವಿಗಳಿಂದ ಹೊರಬಂದಿದ್ದು ಸು.60000 ಜನರು ಅರೆಸ್ಟ್ ಆದುದು ಪ್ರಥಮ ದುಂಡುರೋಜಿನ ಪರಿಷತ್‌ನ್ನು ಗಾಂಧೀಜಿ ಮತ್ತು ಕಾಂಗ್ರೆಸ್ ಬಹಿಷ್ಕರಿಸಿದ್ದು ಮುಂತಾದುವನ್ನು ಅಧ್ಯಯನ ಮಾಡುವ ಉದ್ದೇಶದಲ್ಲಿದೇ

## 18.1 ಪೀಠಿಕೆ

ಬ್ರಿಟೀಷರ ಹಿಡಿತದಿಂದ ಭಾರತವನ್ನು ಸ್ವತಂತ್ರ್ಯಗೊಳಿಸಲು ಮತ್ತು ತನ್ನದೇ ಆದ ಸ್ವಂತ ಸರ್ಕಾರವನ್ನು ಸ್ಥಾಪನೆ ಮಾಡಿಕೊಳ್ಳಲು ನಿರ್ಧರಿಸದ ಹಿನ್ನೆಲೆಯಲ್ಲಿ ಕಾಂಗ್ರೆಸಂ ಮತ್ತು ಗಾಂಧೀಜಿಯವರು ................ ಭಂಗ ಚಳುವಳಿಯನ್ನು ಪ್ರಾರಂಭಮಾಡಿ ಎಲ್ಲಾ ವರ್ಗದ ಜನರು ಎಲ್ಲಾ................ ಜನರು ಎಲ್ಲಾ ನಾಯಕರ ಸಹಕಾರದಿಂದ ಪ್ರಾರಂಭಮಾಡಿದರು. ಇದರ ಪರಿಣಾಮದಂತೆ ಬ್ರಿಟೀಷ್ ಸರ್ಕಾರ ಪ್ರಥಮ ದುಂಡುಮೇಡಿನ ಪರಿಷತ್ತನ್ನು ಕರೆದರು ಗಾಂಧೀ ಇರ್ವಿನ್ ಒಪ್ಪಂದ ಮುಂತಾದವುಗಳ ಈ ಚಳುವಳಿಯ ಪರಿಣಾಮಗಳೆಂದು ಹೇಳಬಹುದು. ಇದಕ್ಕಾಗಿ ಅವರು ಹಲವರ ನಿಂದನೆಗೆ ಒಳಗಾಗಬೇಕಾಯಿತು.

## 18.2 ಕಾಯ್ದೆ ಭಂಗ ಚಳವಳಿ(1930-1934)

***ಗಾಂಧಿಯವರು ಪಾತ್ರ 1924-28:***

ಗಾಂಧಿಯವರು 1924ಫೆಬ್ರವರಿಯಲ್ಲಿ ಸೆರೆಮನೆಯಿಂದ ಬಿಡುಗಡೆಯಾದರು, ಸಾರ್ವಜನಿಕ ಜೀವನಕ್ಕೆ ಮರಳಿದ ಗಾಂಧೀಜಿಯವರು ಕಾಂಗ್ರೆಸ್ಸಿನ ವಿಶಾಲ ಚೌಕಟ್ಟಿನೊಳಗೆ ಸ್ವರಾಜ್ಯ ಪಕ್ಷಕ್ಕೂ ಅವಕಾಶ ಕಲ್ಪಿಸುವ ಮೂಲಕ ಪಕ್ಷದೊಳಗೆ ಬಹಿರಂಗ ಹಣಾಹಣಿಯನ್ನು ತಪ್ಪಿಸಿದರು. ಆದರೆ ತಮ್ಮ ನೀತಿಯಲ್ಲಿನ ಅವರ ನಂಬಿಕೆ ಅಚಲವಾಗಿತ್ತು. ಖಾದಿಯ ಮೂಲಕ ಜನಸಂಪರ್ಕಕ್ಕೆ ಅವರು ವಿಶೇಷ ಗಮನ ನೀಡಿದರು. ಹಿಂದೂ ಮುಸ್ಲಿಂ ಏಕತೆಯ ಅವರ ಕನಸ್ಸನ್ನು ನುಚ್ಚುನೂರಾಗಿಸಿದ ಕೋಮು ಗಲಭೆಗಳು ಅವರಿಗೆ ನೋವನ್ನುಂಟು ಮಾಡಿದ್ದುವು. ಅವರ ಮತ್ತು ಆಲಿ ಸಹೋದರ ನಡುವಣ ಕೊಂಡಿ ಕಳಚಿಹೋಗಿತ್ತು. ಗಾಂಧೀಜಿಯವರ ಮೂಲಕ ತಮ್ಮ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳಬಹುದೆಂಬ ನಂಬಿಕೆಯನ್ನು ಮುಸ್ಲಿಮರು ಕಳೆದುಕೊಂಡರು.

1928ರ ಸರ್ದಾರ್ ವಲ್ಲಭ ಭಾಯಿ ಪಟೇಲರ ನೇತೃತ್ವದಲ್ಲಿ ನಡೆದ ಬಾರ್ದೋಲಿ (ಗುಜರಾತ್) ಸತ್ಯಾಗ್ರಹವು ಗಾಂಧೀಜಿಯವರನ್ನು ರಾಜಕೀಯ ಹೋರಾಟದ ಕಣದಲ್ಲಿ ಮತ್ತೊಮ್ಮೆ ತಂದು ನಿಲ್ಲಿಸಿತು. ಪಾಟೀದಾರರು ಗೇಣಿ ಏರಿಸಿದುದನ್ನು ರೈತರು ಪ್ರತಿಭಟಿಸಿದಾಗ ಬಾರ್ದೋಲಿ ಸತ್ಯಾಗ್ರಹ ನಡೆಯಿತು. ಆ ಸತ್ಯಾಗ್ರಹ ಪರಿಣಾಮವಾಗಿ ಗೇಣಿ ಏರಿಕೆಯ ಬಗ್ಗೆ ಮುಂಬಯಿ ಸರಕಾರ ತನಿಖೆ ನಡೆಸಿತು. ಗಾಂಧೀಜಿಯವರು ಈ ಸತ್ಯಾಗ್ರಹದಲ್ಲಿ ಕೇವಲ ಸಲಹೆಗಾರರಾಗಿ ಪಾತ್ರ ನಿರ್ವಹಿಸಿದರಾದರೂ ಅದರಿಂದ ಅವರಿಗೂ ಅವರ ವಿಶಿಷ್ಟ ವಿಧಾನಗಳಿಗೂ ದೇಶಾದ್ಯಂತ ಪ್ರಚಾರ ದೊರೆಯಿತು.

## 18.3 ಕಲ್ಕತ್ತ ಕಾಂಗ್ರೆಸ್ ಅಧಿವೇಶನ (1928)

1925ರ ಬಳಿಕ ಗಾಂಧೀಜಿಯವರು ಕಾಂಗ್ರೆಸ್ಸಿನ ಚಟುವಟಿಕೆಗಳಿಂದ ದೂರವಿದ್ದರೂ ಕುರಿತು ಸಹಾನುಭೂತಿ ತೋರಿದರು. 1927ರಲ್ಲಿ ಸೈಮನ್ ಆಯೋಗವನ್ನು ನೇಮಿಸಿದಾಗ ದು 'ಸಕಲ ಜನತೆಗೆ ವ್ಯವಸ್ಥಿತವಾಗಿ ಎಸಗಿದ ಅವಮಾನ' ಎಂದು ಅವರು ಖಂಡಿಸಿದರು. ಆದರೆ ಮತ ಪ್ರದರ್ಶನದಲ್ಲಾಗಲಿ ಹರತಾಳ ನಡೆಸುವುದುರಲ್ಲಾಗಲಿ ಅವರು ಪಾಲ್ಗೋಳ್ಳಲಿಲ್ಲ. 'ಸರ್ವ ಪಕ್ಷಖ ಸಮ್ಮೇಳನ'ದಲ್ಲೂ ಹಾಗೂ 'ನೆಹರೂ ವರದಿ'(1928) ಸಿದ್ಧಪಡಿಸುವುದರಲ್ಲಿ ಅವರು ಭಾಗವಹಿಸಲಿಲ್ಲ. ಆದರೆ ಸಮ್ಮೇಳನದ

ಅಧ್ಯಕ್ಷರಾಗಿ ಆಯ್ಕೆಯಾದ ಮೋತಿಲಾಲ್ ನೆಹರು ಅವರ ಕೋರಿಕೆಯನಂತೆ ಕಲ್ಕತ್ತ ಕಾಂಗ್ರೆಸ್ ಅಧಿವೇಶನದಲ್ಲಿ (1928) ಭಾಗವಹಿಸಿದರು. 'ಸ್ವಯಂ ಆಡಳಿತ ಸ್ಥಾನಮಾನ' ವನ್ನು ಶಿಫಾರಸ್ಸು ಮಾಡಿದ ನೆಹರೂ ವರದಿಗೆ ಮೋತಿಲಾಲರು ಗಾಂಧೀಜಿಯವರ ಬೆಂಬಲವನ್ನು ಬಯಸಿದ್ದರು. ಕಾರಣವೇನೆಂದರೆ ಸುಭಾಷ್‌ಚಂದ್ರ ಬೋಸರ ನೇತೃತ್ವದ ಶಕ್ತಿಶಾಲಿ ಬಣವು ಆ ವರದಿಯನ್ನು ವಿರೋಧಿಸಿ ಭಾರತಕ್ಕೆ 'ಪೂರ್ಣ ಸ್ವಾತಂತ್ರ್ಯದ ಬೇಡಿಕೆಯನ್ನು ಮುಂದಿಟ್ಟಿತು.

ಬಹಿರಂಗ ಅಧಿವೇಶನದಲ್ಲಿ ನೆಹರು ವರದಿಗೆ ಪರವಾದ ಗಾಂಧೀಜಿಯವರ ಗೊತ್ತುವಳಿಗೆ 1,350ಹಾಗೂ ಸುಭಾಶ್ ಚಂದ್ರ ಬೋಸರ ತಿದ್ದುಪಡಿಗೆ 973ಮತಗಳು ದೊರೆತವು. 48ಮಂದಿ ತಟಸ್ಥರಾಗಿದ್ದರು. ಆದರೆ ಬಹುಮತ ಪಡೆಯುವ ಸಲುವಾಗಿ ಗಾಂಧೀಜಿಯವರು ಕಾಂಗ್ರೆಸ್ಸಿಗೆ ತನ್ನ ಬೆಂಬಲ ಹಿಂತೆಗೆದುಕೊಳ್ಳುವ ಬೆದರಿಕೆ ಒಡ್ಡ ಬೇಕಾಯಿತು. ಸ್ವಾತಂತ್ರ್ಯ ಹೋರಾಟದಲ್ಲಿ ಅವರ ನಾಯಕತ್ವ ಅನಿವಾರ್ಯವೆನ್ನುವುದು ಎಲ್ಲರಿಗೆ ಮನವರಿಕೆಯಾಗಿತ್ತು. 1928ರ ಈ ವಿಜಯದಿಂದ ಕಾಂಗ್ರೆಸ್ಸಿನಲ್ಲಿ ಹಾಗೂ ದೇಶದ ರಚನಾತ್ಮಕ ಕಾರ್ಯಕ್ಷೇತ್ರದಲ್ಲಿ ಅವರು ಅಖಿಲ ಭಾರತ ಮಟ್ಟದ ನಾಯಕರೆನಿಸಿದರು.

## 18.4 ಲಾಹೋರ್ ಕಾಂಗ್ರೆಸ್ ಅಧಿವೇಶನ (1929) ಪೂರ್ಣ ಸ್ವರಾಜ್ಯದ ಘೋಷಣೆ

1928ರ ಕಲ್ಕತ್ತ ಅಧಿವೇಶನದಲ್ಲಿ ಸ್ವೀಕೃತವಾದ ಗಾಂಧೀಜಿಯವರ ಗೊತ್ತುವಳಿ' ಸ್ವಯಂ ಆಡಳಿತ ಸ್ಥಾನಮಾನ' ವನ್ನು ಭಾರತೀಯರಿಗೆ ನೀಡಲು ಲಾರ್ಡ್ಸ್ ಇರ್ವಿನ್ ಸಮ್ಮಿತಿಸಲಿ. ಈ ಕುರಿತು 1929ನೇ ಅಕ್ಟೋಬರ್‌ನಲ್ಲಿ ಅಧಿಕೃತ ಘೋಷಣೆಯೂ ಆಯಿತು. ಅನಂತರ ಜವಾಹರಲಾಲ್ ನೆಹರು ಅವರ ಅಧ್ಯಕ್ಷತೆಯಲ್ಲಿ ಲಾಹೋರ್ ಕಾಂಗ್ರೆಸ್ ಅಧಿವೇಶನ ಜರುಗಿತು (1929). ಈ ಅಧಿವೇಶನದಲ್ಲಿ ಗಾಂಧೀಜಿಯವರು ಸೂಚಿಸಿದ ನಾಲ್ಕು ಅಂಶಗಳಿಗೆ ಒತ್ತು ನೀಡುವ ಒಂದು ಗೊತ್ತುವಳಿಯನ್ನು ಅಂಗೀಕರಿಸಲಾಯಿತು. ಆ ನಾಲ್ಕು ಅಂಶಗಳು ಯಾವುವೆಂದರೆ 1) ನೆಹರು ಸಮಿತಿಯ ವರದಿ ಬಿದ್ದು ಹೋಗಿದೆ. (ಅಂದರೆ ಸ್ವ. ಆಡಳಿತ ಸ್ಥಾನಮಾನವು ಇನ್ನು ನಮಗೆ ಸ್ವೀಕಾರಾರ್ಹ ಅಲ್ಲ). 2) ಕಾಂಗ್ರೆಸಂ ಸಂವಿಧಾನದಲ್ಲಿ ಇನ್ನು 'ಸ್ವರಾಜ್ಯ' ಶಬದ್ದದ ಅರ್ಥ 'ಪೂರ್ಣ ಸ್ವಾತಂತ್ರ್ಯ' 3) ಸೂಕ್ತ ಕಾಲದಲ್ಲಿ ಕಾಯದೆ ಭಂಗ ಚಳುವಳಿಯನ್ನು ನಡೆಸಲಾಗುವುದು. 4) ಲಂಡನ್ನಿನಲ್ಲಿ ನಡೆಯಲಿರುವ ದುಂಡು ಮೇಜಿನ ಪರಿಷತ್ತಿನಲ್ಲಿ ಕಾಂಗ್ರೆಸ್ ಭಾಗವಹಿಸದು.

ಅಧಿವೇಶನದ ಕಲಾಪಗಳಲ್ಲಿ ಗಾಂಧೀಜಿಯವರ ಮಹತ್ವ ಎದ್ದು ಕಾಣುತ್ತಿತ್ತು. ಗಾಂಧೀಜಿಯವರು ಅಖಿಲ ಭಾರತ ಮಟ್ಟದ ಮಹಾ ನಾಯಕ ಎನ್ನುವ ನೆಲೆಯಲ್ಲಿ ಅವರ ಗೊತ್ತುವಳಿ ಸ್ವೀಕೃತವಾಯಿತು. ದು ಅವರ ಗೌರವದ ಮತ್ತು ಗೆಲುವಿನ ಸಂಕೇತವೂ ಆಗಿತ್ತು.

1930ಜನವರಿ 26ರಂದು ದೇಶಾದ್ಯಂತ ಪೂರ್ಣ ಸ್ವಾತಂತ್ರ್ಯದ ದಿನವನ್ನಾಗಿ ಆಚರಿಸಬೇಕೆಂದು ಲಾಹೋರ್ ಅಧಿವೇಶನದಲ್ಲಿ ನಿರ್ಣಯಿಸಲಾಯಿತು. ಸ್ವಾತಂತ್ರ್ಯವು ಭಾರತದ ಅನುಲ್ಲಂಘನೀಯ ಹಕ್ಕು ಎಂದು ಸಾರುವ ಹಾಗೂ ಭಾರತದಲ್ಲಿ ಬ್ರಿಟಿಷ್ ಆಡಳಿತದ ದುಷ್ಪರಿಣಾಮಗಳನ್ನು ತಿಳಿಸುವ ಒಂದು ಘೋಷಣೆಯನ್ನು ಆ ದಿನ ಜನತೆಯ ಮುಂದಿಡಬೇಕೆಂದು ಕೂಡ ಅಧಿವೇಶನದಲ್ಲಿ ತೀರ್ಮಾನಿಸಲಾಯಿತು. ಈ ಘೋಷಣೆಯನ್ನು ಗಾಂಧೀಜಿಯವರೇ ಸ್ವತಃ ಸಿದ್ಧಪಡಿಸಿದ್ದರು.

1929ಡಿಸೆಂಬರ್ 31ರ ಮಧ್ಯರಾತ್ರಿ ಹನ್ನೆರಡು ಗಂಟೆ ಹೊಡೆಯುತ್ತಿದ್ದಂತೆಯೇ ಕಾಂಗ್ರೆಸ್ಸಿನ ಅಧ್ಯಕ್ಷ ಜವಾಹರಲಾಲ ನೆಹರು ಭಾರತದ ರಾಷಟ್ರ ಧ್ವಜವನ್ನು ಹಾರಿಸಿದರು. ಜನವರಿ 26,1930ರಂದು ದೇಶದ ಎಲ್ಲೆಡೆಗಳಲ್ಲಿ ಸ್ವಾತಂತ್ರ್ಯ ದಿವಸ್ನು ಆಚರಿಸಲಾಯಿತು. ಭಾರತದ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಈ ದಿನವು ಪವಿತ್ರವೂ ಮಹತ್ವಪೂರ್ಣವೂ ಆಗಿದೆ. ಈ ಘಟನೆಯು ನಮ್ಮ ಹೋರಾಟದ ಇತಿಹಾಸದಲ್ಲಿ ಒಂದು ಪ್ರಮುಖ ಘಟ್ಟವೂ ಆಗಿದೆ.

## 18.5 ದಂಡೀಯಾತ್ರೆ -ಉಪ್ಪಿನ ಸತ್ಯಾಗ್ರಹ (1930)

ಉಪ್ಪಿನ ಕಾನೂನು ನಿಬಂಧನೆಯನ್ನು ಉಲ್ಲಂಘಿಸಲು ಗಾಂಧೀಜಿಯವರು ತಮ್ಮ ಪ್ರಸಿದ್ಧ ದಂಡೀಯಾತ್ರೆಯನ್ನು ಪ್ರಾರಂಭಿಸಿದರು. 1930ಮಾರ್ಚ್ 12ರಂದು ಸಬರ್ಮತಿ ಆಶ್ರಮದಿಂದ ಅವರು ಕಾಲ್ನಡಿಗೆಯಲ್ಲೇ ಹೊರಟರು. ಅವರೊಂದಿಗೆ 79ಮಂದಿ ಅನುಯಾಯಿಗಳಿದ್ದರು. 24ದಿನಗಳಲ್ಲಿ 241ಮೈಲು ನಡೆದು, ಏಪ್ರಿಲ್ 5ರಂದು ಸಮುದ್ರ ತೀರದ ದಂಡಿಯನ್ನು ತಲುಪಿದರು. ಇದೊಂದು ವಿಜಯಾಯತ್ರೆಯಂತಿತ್ತು. ಈ ಸುಧೀರ್ಘ ಯಾತ್ರೆಯುದ್ದಕ್ಕೂ ಎಲ್ಲ ಕಡೆಗಳಿಂದಲೂ ಗ್ರಾಮಸ್ಥರು ಬಂದು ಯಾತ್ರೆಯ ದಾರಿಯನ್ನು ಶುದ್ಧಗೊಳಿಸಿ ಅಲ್ಲಿ ತಳಿರು ತೋರಣ ಕಟ್ಟಿದರು. ಮಂಡಿಯೂರಿ ನಮಿಸಿದರು. ಸಾಮ್ರಾಟನೂ ಕೂಡ ಅಸೂಯೆ ಪಡುವಂಥ ಗೌರವ ಅತಿಥ್ಯಗಳು ಗಾಂಧೀಜಿಯವರಿಗೆ ಲಭಿಸಿದುವು. ಮೂನ್ನೂರಕ್ಕೂ ಹೆಚ್ಚಿನ ಗ್ರಾಮಗಳ ಮುಖ್ಯಸ್ಥರು ತಮ್ಮ ಹುದ್ದೆಗಳಿಗೆ ರಾಜೀನಾಮೆ ನೀಡಿದರು.

ಏಪ್ರಿಲ್ 6ರ ಬೆಳಗಿನ ಸುಮೂಹೂರ್ತದಲ್ಲಿ ಗಾಂಧೀಜಿ ಮತ್ತು ಅವರ ಅನುಯಾಯಿಗಳು ಕಡಲಲ್ಲಿ ಮಿಂದು ದಡಕ್ಕೆ ಬಂದರು. ಕಡಲಿನ ಅಲೆಗಳು ತಂದು ಹಾಕಿದ್ದ ಕೆಲವು ಉಪ್ಪಿನ ಹರಳುಗಳನ್ನು ಹೆಕ್ಕಿ, ತಾಂತ್ರಿಕವಾಗಿ (ನೆಪ ಮಾತ್ರಕ್ಕೆ) ಕಾನೂನು ಭಂಗ ಮಾಡಿದರು. ಉಪ್ಪಿನ ಸತ್ಯಾಗ್ರಹವು ಒಂದು ಸಾಂಕೇತಿಕವಾದ ವಿಶಿಷ್ಟ ಕಲ್ಪನೆಯಾಗಿತ್ತು. ಯಾತ್ರೆಯ ವಿವರಗಳು ಪತ್ರಿಕೆಗಳಲ್ಲಿ ಪ್ರಕಟವಾಗಿ ಭಾರೀ ಪ್ರಚಾರ ದೊರೆಯಿತು. ಗ್ರಾಮೀಣ ಪ್ರದೇಶದ ಜನರಲ್ಲಿ ಸ್ವಾತಂತ್ರ್ಯದ ಬಗ್ಗೆ ಹೊಸ ಅರಿವು ಮೂಡಿತು. ಏಪ್ರಿಲ್ 6ರಂದು ಗಾಂಧೀಜಿಯವರು ನಡೆಸಿದ ಉಪ್ಪಿನ ಸತ್ಯಾಗ್ರಹ ದೇಶಾದ್ಯಂತ ಪ್ರತಿಧ್ವನಿಸಿತು. ನೂರಾರು ಕಡೆಗಳಲ್ಲಿ ಜನರು ಕಡಲಿನ ದಡಕ್ಕೆ ಹೋಗಿ ಉಪ್ಪಿನ ಕಾನೂನನ್ನು ಭಂಗಗೊಳಿಸಿದರು. ಉಪ್ಪು ತಯಾರಿಸಲು ಸಾಧ್ಯವಿಲ್ಲದ ದೇಶದ ಇತರ ಭಾಗಗಳಲ್ಲಿ ಬೇರೆ ಕಾಯಿದೆಗಳನ್ನು ಉಲ್ಲಂಘಿಸಲಾಯಿತು. ವಾಯುವ್ಯ ಗಡಿ ಪ್ರಾಂತ್ಯದಲ್ಲಿ ಕೆಂಪು ಅಂಗಿ ಧರಿಸಿದ ಸ್ವಯಂಸೇವಕರು ತೆರಿಗೆ ಪಾವತಿಯನ್ನು ನಿಲ್ಲಿಸಿದರು. 'ದೇವರು ಸೇವಕರು' ಎಂದು ಕರೆಯಲಾಗುವ ಈ ಕೆಂಪು ಅಂಗಿ ಸ್ವಯಂಸೇವಕರನ್ನು ಸಂಘಟಿಸಿದವರು ಖಾನ್ ಅಬ್ದುಲ್ ಗಫಾರ್ ಖಾನ್ 'ಗಡಿನಾಡ ಗಾಂಧಿ'. ಅಹಿಂಸೆ ಇವರ ಧ್ಯೇಯಗಳಲ್ಲೊಂದಾಗಿತ್ತು. ಗಫಾರ್ ಖಾನ್ ಅವರನ್ನು ಬಂಧಿಸಿದಾಗ ಪೇಶಾವರದಲ್ಲಿ ಹಿಂಸೆ ಸ್ಫೋಟಗೊಂಡು ನಾಗರಿಕ ಆಡಳಿತವು ಕುಸಿಯಿತು.

ಮೇ ತಿಂಗಳ ಆರಂಭದಲ್ಲಿ ಸರಕಾರವು ಗಾಂಧೀಜಿಯವರನ್ನು ಬಂಧಿಸಿ, ಪುಣೆಯ ಯರವಾಡ ಕಾರಾಗೃಹದಲ್ಲಿರಿಸಿತು. ಕಾಂಗ್ರೆಸ್ ಅಧ್ಯಕ್ಷ ಜವಾಹರಲಾಲ್ ನೆಹರು ಅವರನ್ನು ಇದಕ್ಕಿಂತ ಮೂರು ವಾರಗಳ ಮೊದಲೇ ಬಂಧಿಸಲಾಗಿತ್ತು.

## 18.6 ಕಾಯ್ದೆ ಭಂಗ ಚಳುವಳಿ : ಪ್ರಥಮ ಹಂತ (1930-31)

ಗಾಂಧೀಜಿಯವರ ಬಂಧನದಿಂದಾಗಿ ಅವರ ನೇರ ನಾಯಕತ್ವವು ತಪ್ಪಿದರೂ ಕಾಯ್ದೆ ಭಂಗ ಚಳುವಳಿಯು ದೇಶದ ಎಲ್ಲಾ ಪ್ರಾಂತ್ಯಗಳಲ್ಲಿ ವಿವಿಧ ಸ್ವರೂಪಗಳಲ್ಲಿ ಮುಂದುವರಿಯಿತು. ವಿದೇಶಿ ವಸ್ತುಗಳ ಅದರಲ್ಲೂ ಬಟ್ಟೆಗಳ ಬಹಿಷ್ಕಾರಕ್ಕೆ, ವಿಶೇಷ ಒತ್ತು ನೀಡಲಾಯಿತು. ಸರಕಾರವು ಈ ಕುರಿತು ಅತ್ಯಂತ ದಮನಕಾರಿ ಕ್ರಮಗಳನ್ನು ಕೈಗೊಂಡಿತು. ಚಳವಳಿಯ ಅವಧಿಯಲ್ಲಿ ಸುಮಾರು 60,000ಮಂದಿ ಜೈಲುವಾಸ ಅನುಭವಿಸಿದರು. 1931j ಫೆಬ್ರವರಿಯಲ್ಲಿಯ ವೇಳೆಗೆ ಸೆರೆಮನೆಯಲ್ಲಿದ್ದ ಒಟ್ಟು ಚಳುವಳಿ ಕೈದಿಗಳ ಸಂಖ್ಯೆ ಸುಮಾರು 24,000ವಾಗಿತ್ತು.

ಕಾಯ್ದೆ ಭಂಗ ಚಳುವಳಿಯು ಜನಸಾಮಾನ್ಯರಲ್ಲೂ ರಾಜಕೀಯ ಜಾಗೃತಿಯನ್ನುಂಟುಮಾಡಿತು. ಯುವಕರು ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿದ್ದರು. ವ್ಯಾಪಾರಿಗಳ ಸಮುದಾಯವು ಕಾಂಗ್ರೆಸ್ ನಿಧಿಗೆ ಉದಾರವಾಗಿ ದಾನ ಮಾಡಿತು. ಆದರೆ ಮುಸ್ಲಿಂ ಸಮುದಾಯವು (ಬಂಧನಕ್ಕೊಳಗಾದ ಕೆಲವು ರಾಷ್ಟ್ರೀಯವಾದಿ ನಾಯಕರನ್ನು ಹೊರತುಪಡಿಸಿ) ಚಳುವಳಿಯಿಂದ ಹೊರಗುಳಿಯಿತು. ಅಬ್ದುಲ್ ಕಲಾಂ ಆಜಾದ್ ಅವರು ಆ ಕಾಲದ ಒರ್ವ ನಿಷ್ಠಾವಂತ ಕಾಂಗ್ರೆಸ್ಸಿಗರಾಗಿದ್ದರು.

## 18.7 ಗಾಂಧಿ ಇರ್ವಿನ್ ಒಪ್ಪಂದ (1931)

ಲಂಡನ್‌ನಲ್ಲಿ ನಡೆದ ಮೊದಲ ದುಂಡು ಮೇಜಿನ ಸಮ್ಮೇಳನದಲ್ಲಿ (ನವೆಂಬರ್ 1930ರಿಂದ ಜನವರಿ 1931) ಕಾಂಗ್ರೆಸ್ ಭಾಗವಹಿಸಲಿಲ್ಲ. ಆಗ ಗಾಂಧೀಜಿಯವರು ಸೆರೆಮನೆಯಲ್ಲಿದ್ದರು. ಭಾರತೀಯರ ಯಾವುದೇ ವರ್ಗದವರು ತಮ್ಮ ಪ್ರತಿನಿಧಿಗಳೆಂದು ಆರಿಸದ ಮಂದಿ ಭಾಗವಹಿಸಿದ ದುಂಡು ಮೇಜಿನ ಸಮ್ಮೇಳನದ ಕಾರ್ಯಕಲಾಪಗಳಿಗೆ ಮಾನ್ಯತೆ ನೀಡಲು ತಾನು ಸಿದ್ಧನಿಲ್ಲ ಎಂದು ಕಾಂಗ್ರೆಸ್ಸಿನ ಕಾರ್ಯ ಸಮಿತಿ 1931ಜನವರಿಯಲ್ಲಿ ಘೋಷಿಸಿತು. ಈ ನಡುವೆ ಕಾನೂನು ಭಂಗ ಚಳುವಳಿಯು ಸರಕಾರಕ್ಕೆ ಗಂಭೀರವಾದ ಆರ್ಥಿಕ ಹಾಗೂ ಆಡಳಿತದ ಸಮಸ್ಯೆಗಳನ್ನೊಡ್ಡುತ್ತಿತ್ತು. ಕಾಂಗ್ರೆಸ್‌ನ ಕುರಿತು ಸರ್ಕಾರಿ ಧೋರಣೆಯಲ್ಲಿ ಸ್ವಲ್ಪ ಮಟ್ಟಿನ ಮರು ಹೊಂದಾಣಿಕೆ ಆವಶ್ಯವೆಂದು ವೈಸರಾಯ್ ಇರ್ವಿನ್ ಹಾಗೂ ರಾಜ್ಯಾಂಗ ಕಾರ್ಯದರ್ಶಿಗಳು ಅಭಿಪ್ರಾಯಪಟ್ಟರು. 1931ಜನರವರಿ ಅಂತ್ಯಭಾಗದಲ್ಲಿ ಗಾಂಧೀಜಿ ಮತ್ತು ಕಾಂಗ್ರೆಸ್ಸಿನ ಇತರ ಹಿರಿಯ ನಾಯಕರು ಬಿಡುಗಡೆಯಾದರು. ಗಾಂಧೀಜಿಯವರು ಮತ್ತು ವೈಸ್‌ರಾಯ್ ನಡುವೆ ನಡೆದ ನೇರ ಮಾತುಕತೆಯ ಪರಿಣಾಮವಾಗಿ ಒಂದು ಒಪ್ಪಂದಕ್ಕೆ (1931ಮಾರ್ಚ್ 5) ಬರಲಾಯಿತು.

ಒಪ್ಪಂದದ ಹೆಚ್ಚಿನ ಶರತ್ತುಗಳು ಕಾಯ್ದೆ ಭಂಗ ಚಳುವಳಿಯಿಂದ ಉದ್ಭವಿಸಿದ ಸಮಸ್ಯೆಗಳಿಗೆ ಸಂಬಂಧಿಸಿದ್ದುವು. ಚಳುವಳಿಯನ್ನು ನಿಲ್ಲಿಸಬೇಕೆಂದು ತೀರ್ಮಾನಿಸಲಾಯಿತು. ಬ್ರಿಟಿಷ್ ವಸ್ತುಗಳ ಬಹಿಷ್ಕಾರವನ್ನು ಒಂದು ರಾಜಕೀಯ ಅಸ್ತ್ರವಾಗಿ ಬಳಸಬಾರದು. ಆದರೆ ಸಾಮಾನ್ಯ ಕಾನೂನನ್ನು ಉಲ್ಲಂಘಿಸದಿರುವ ಶಾಂತಿಯುತ ತಡೆ ಮುಷ್ಕರವನ್ನು (ಪಿಕೆಟಿಂಗ್) ಮುಂದುವರಿಸಬಹುದು: ಉಪ್ಪಿನ ಕಾಯ್ದೆಯ ಉಲ್ಲಂಘನೆಯನ್ನು ಕ್ಷಮಿಸಲಾಗುವುದಿಲ್ಲ. ಪೋಲೀಸ್ ಅತಿರೇಕದ ಅಪಾದನೆಗಳ ಬಗ್ಗೆ ತನಿಖೆ ನಡೆಸಲಾಗುವುದು. ದುಂಡು ಮೇಜಿನ ಸಮ್ಮೇಳನದ ಮುಂದಿನ ಚರ್ಚೆಯಲ್ಲಿ ಕಾಂಗ್ರೆಸ್ ಭಾಗವಹಿಸುವುದು: ಆದರೆ ಚರ್ಚೆಯು ಕಳೆದ ಸಮ್ಮೇಳನದಲ್ಲಿ ರೂಪಿಸಿದ ಯೋಜನೆಗೆ ಅನುಗುಣವಾಗಿರಬೇಕು. ಈ ಎಲ್ಲಾ ಪ್ರಸ್ತಾವಗಳಿಗೆ ಒಪ್ಪುವ ಮೂಲಕ ಗಾಂಧೀಜಿಯವರು ಲಾಹೋರ್ ಅಧಿವೇಶನದಲ್ಲಿ (1929) ಕಾಂಗ್ರೆಸ್ ಘೋಷಿಸಿದ ಪೂರ್ಣ ಸ್ವಾತಂತ್ರ್ಯ ಹಾಗೂ ಕಲ್ಕತ್ತ ಅಧಿವೇಶನದಲ್ಲಿ (1928) ಶರತ್ತು ಬದ್ಧವಾಗಿ ಅಂಗೀಕರಿಸಿದ ಸ್ವಯಂ ಆಡಳಿತ ಸ್ಥಾನಮಾನ ಈ ಎರಡು ತತ್ವಗಳಿಗೆ ತಿಲಾಂಜಲಿ ಇತ್ತಂತಾಯಿತು. ಜವಾಹರಲಾಲ್ ನೆಹರು ಮತ್ತು ಸುಭಾಷ್ ಚಂದ್ರ ಬೋಸರಂತಹ ಯು ಕಾಂಗ್ರೆಸ್ ನಾಯಕರು ಈ ಬೆಳವಣಿಗೆಯಿಂದ ತೀವ್ರ ಆತಂಕಗೊಂಡರು, ಆದರೆ ಗಾಂಧೀಜಿಯವರ ಅಭಿಪ್ರಾಯವನ್ನು ಬೆಂಬಲಿಸುವುದರ ಹೊರತು ಅನ್ಯ ಮಾರ್ಗ ಅವರಿಗೆ ಕಾಣಿಸಲಿಲ್ಲ.

ಸ್ವಲ್ಪ ಸಮಯದ ಬಳಿಕ ನಡೆದ ಕರಾಚಿ ಕಾಂಗ್ರೆಸ್ ಅಧಿವೇಶನವು (ಮಾರ್ಚ್ 1931) ಗಾಂಧಿ -ಇರ್ವಿನ್ ಇವರೊಳಗಿನ ಒಪ್ಪಂದವನ್ನು ಅನುಮೋದಿಸುವ ನಿರ್ಣಯವನ್ನು ಅಂಗೀಕರಿಸುತ್ತ, ಪೂರ್ಣ ಸ್ವಾತಂತ್ರ್ಯದ ಗುರಿ ಮುಂದುವರಿಯುವುದು ಎಂದು ಪ್ರಕಟಿಸಿತು. ದುಂಡು ಮೇಡಿನ ಸಮ್ಮೇಳನಕ್ಕೆ ಹೋಗುವ ಕಾಂಗ್ರೆಸ್ ಪ್ರತಿನಿಧಿಗಳಿಗೆ ಮಾರ್ಗದರ್ಶಕ ಸೂತ್ರಗಳನ್ನು ನೀಡಲಾಯಿತು. ಅಧಿವೇಶನದಲ್ಲಿ ಮಂಡಿಸಲಾದ ನಿರ್ಣಯವು ಗಾಂಧೀಜಿಯವರ ಹೆಮ್ಮೆಯ ಸಾಧನೆಯಾಗಿತ್ತು. ಅವರು ಜನಪ್ರಿಯತೆ ಹಾಗೂ ಪ್ರತಿಷ್ಠೆಯ ಉತ್ತುಂಗದಲಿ ದ್ದುದಕ್ಕೆ ಅದು ಸಂಕೇತವಾಗಿತ್ತು. ಒಟ್ಟಿನಲ್ಲಿ ದುಂಡು ಮೇಡಿನ ಸಮ್ಮೇಲನದಲ್ಲಿ ರೂಪಿಸಿದ ಚೌಕಟ್ಟು ಪೂರ್ಣ ಸ್ವಾತಂತ್ರ್ಯಕ್ಕೆ ಹಾದಿಯಾಗಲಾರದು ಎನ್ನುವ ಸತ್ಯ ಕರಾಚಿ ಅಧಿವೇಶನದಲ್ಲಿ ನಿರ್ಣಯ ರೂಪಿಸಿದವರಿಗೆ ಸರಿಯಾಗಿ ಅರ್ಥವಾದಂತಿಲ್ಲ. ಈ ದುಂಡು ಮೇಜಿನ ಸಮ್ಮೇಳನದ ಪ್ರಸ್ತಾವಗಳಲ್ಲಿ ಅಡಗಿರುವ ಅಡ್ಡಿ ಆತಂಕಗಳನ್ನು ಸೂಕ್ಷ್ಮವಾಗಿ ಗಮನಿಸದೆ ಪೂರ್ಣ ಸ್ವರಾಜ್ಯದತ್ತ ಸಾಂಗವಾಗಿ ಮುನ್ನಡೆಯಬಹುದೆಂದು ಅವರು ನಂಬಿದ್ದರು ಎಂದು ತೋರುತ್ತದೆ.

ಕರಾಚಿ ಅಧಿವೇಶನದ ಬಳಿಕ ಕೆಲವು ತಿಂಗಳು ವಿವಿಧ ಪ್ರಾಂತಗಳಲ್ಲಿ ಕಾಂಗ್ರೆಸ್ಸಿನ ಮುಂದಾಳುತನದಲ್ಲಿ 'ಒಪ್ಪಂದ'ದ ನಿರ್ವಹಣೆಗಾಗಿ ಗಾಂಧೀಜಿಯವರು ಶ್ರಮಿಸಿದರು ಕಾಂಗ್ರೆಸ್ಸನ್ನು ಸರಕಾರ ಹಾಗೂ ಜನರ ನಡುವಿನ ಸೇತುವೆಯಾಗಿ ಪರಿಗಣಿಸಬೇಕೆಂದು ಸರಕಾರವನ್ನು ಅವರು ಒತ್ತಾಯಿಸಿದರು; ಆದರೆ ಸರಕಾರ ಅದಕ್ಕೆ ಕಿವಿಗೊಡಲಿಲ್ಲ.

ವೈಸರಾಯ್ ಲಾರ್ಡ್ ಇರ್ವಿನ್‌ರ ಸ್ಥಾನಕ್ಕೆ ಲಾಡ್ ವಿಲ್ಲಿಂಟನ್ (1931-1936) ಬಂದಾಗ ಸರಕಾರದ ಧೋರಣೆಯಲ್ಲಿ ಕೆಲವು ಬದಲಾವಣೆಗಳು ಕಂಡವು. ಭಾರತದ ರಾಜಕೀಯ ಸಮಸ್ಯೆಗಳ ವಿಷಯದಲ್ಲಿ ವಿಲ್ಲಿಂಗ್ಟನ್‌ರ ಧೋರಣೆ ಇರ್ವನ್‌ರಷ್ಟು

ಉದಾರವಾಗಿರಲಿಲ್ಲ. ಬ್ರಿಟನ್‌ನ ರಾಜಕೀಯದಲ್ಲೂ ಬದಲಾವಣೆಯಾಯಿತು. ಲೇಬರ್ ಸರಕಾರಕ್ಕೆ ಬದಲಾಗಿ ನ್ಯಾಷನಲ್ ಸರಕಾರ ಅಧಿಕಾರಕ್ಕೆ ಬಂತು (ಅಕ್ಟೋಬರ್ 1931)ಲೇಬರ್ ಪಕ್ಷದ ಪ್ರಧಾನಮಂತ್ರಿ ರ್‍ಯಾಮ್ಸೇ ಮೆಕ್‌ಡೊನಾಲ್ಡ್ ಪ್ರಧಾನಿಯಾದರು. ಆದರೆ ಕನ್ಸರ್ವೇಟಿವ್ ಪಕ್ಷದ ಬೆಂಬಲವನ್ನು ಅವರು ಆಶ್ರಯಿಸಬೇಕಾಯಿತು.

### *18.8.1 ದುಂಡು ಮೇಜಿನ ಪರಿಷತ್ತು(1931)*

ಲಂಡನ್ನಿನಲ್ಲಿ ನಡೆದ ಎರಡನೇ ದುಂಡು ಮೇಜಿನ ಪರಿಷತ್ತಿನಲ್ಲುಲಿ (ಸೆಪ್ಟೆಂಬರ್-ಡಿಸೆಂಬರ್ 1931) ಗಾಂಧೀಜಿಯವರು ಕಾಂಗ್ರೆಸ್ಸಿನ ಏಕೈಕ ಪ್ರತಿನಿಧಿಯಾಗಿ ಭಾಗವಹಿಸಿದರು. ಕೋಟ್ಯಂತರ ಭಾರತೀಯರಲ್ಲಿ ಶೇಕಡಾ 85ಕ್ಕೂ ಹೆಚ್ಚು ಮಂದಿ ಬಡವರನ್ನು ಕಾಂಗ್ರೆಸ್ ಪ್ರತಿನಿಧಿಸುತ್ತದೆ ಎಂದು ಸಮ್ಮೇಳನದಲ್ಲಿ ಗಾಂಧೀಜಿಯವರು ಹೇಳಿದರು. ರಾಜ ಮಹಾರಾಜರನ್ನು, ಜಮೀನ್ದಾರರನ್ನು, ವಿದ್ಯಾವಂತರನ್ನು, ಅಲ್ಪಸಂಖ್ಯಾತರನ್ನು ಕೂಡ ಕಾಂಗ್ರೆಸ್ ಪ್ರತಿನಿಧಿಸುತ್ತದೆ. ಇಂಗ್ಲೆಂಡ್-ಭಾರತಗಳ ಬಾಂಧವ್ಯ ಮುರಿಯುವುದು ತಮಗೆ ಬೇಕಿಲ್ಲ ಎಂದ ಗಾಂಧೀಜಿಯವರು ಆ ಬಾಂಧವ್ಯವನ್ನು ಹೀನವಾದ ಗುಲಾಮಗಿರಿಯಿಂದ ಪೂರ್ಣ ಸ್ವಾತಂತ್ರ್ಯಕ್ಕೆ ಪರಿವರ್ತಿಸುವುದೇ ತಮ್ಮ ಆಗ್ರಹ ಎಂದು ಸ್ಪಷ್ಟಪಡಿಸಿದರು.

ಸಮ್ಮೇಳನದಲ್ಲಿ ಅವರದು ಒಂಟಿ ಧ್ವನಿಯಾಗಿತ್ತು. ಎಲ್ಲರೂ ದನ್ನು ಆಲಿಸಿದರು. ಆದರೆ ಯಾರೂ ಬೆಂಬಲಿಸಲಿಲ್ಲ. ಇಡೀ ದೇಶ ಹಾಗೂ ಎಲ್ಲರ ಹಿತಾಸಕ್ತಿಗಳನ್ನು ಕಾಂಗ್ರೆಸ್ ಪ್ರತಿನಿಧಿಸುತ್ತದೆ ಎನ್ನುವ ಹೇಳಿಕೆ ಬ್ರಿಟಿಷ್ ಪ್ರತಿನಿಧಿಗಳಾಗಲಿ, ಮುಸ್ಲಿಮರಿಗಾಗಲಿ, ರಾಜರುಗಳಾಗಲಿ ಅಥವಾ ಇನ್ನಿತರರಿಗಾಗಲಿ ಸ್ವೀಕಾರಾರ್ಹವೆನಿಸಲಿಲ್ಲ.

ಹಾಗಾಗಿ ಗಾಂಧೀಜಿಯವರು ಬರಿಗೈಯಲ್ಲಿ ತಾಯ್ನಾಡಿಗೆ ಮರಳಿದರು. ಬ್ರಿಟನ್-ಭಾರತ ಸಂಬಂಧದಲ್ಲಿ ಯಾವುದೇ ರೀತಿಯ ಸುಧಾರಣೆಯಾಗಲಿಲ್ಲ. ಸಮ್ಮೇಳನದಲ್ಲಿ ಭಾಗವಹಿಸಿದ ಹತ್ತಾರು ಪಕ್ಷಗಳಲ್ಲಿ ಉಳಿದ ಪಕ್ಷಗಳಂತೆ ಕಾಂಗ್ರೆಸ್ ಕೂಡ ಒಂದು ಪಕ್ಷವೆಂದು ಪರಿಗಣಿಸಲಾಯಿತಲ್ಲದೆ, ಅದರ ಕಾರ್ಯಸಿದ್ಧಿಗೆ, ಹಿನ್ನೆಲೆಗೆ ಸರಿಯಾದ ಸ್ಥಾನಮಾನ ಸಿಗಲಿಲ್ಲ.

## 18.8 ಕಾಯ್ದೆ ಭಂಗ ಚಳುವಳಿ : ಕೊನೆಯ ಹಂತ

ಲಂಡನ್ನಿನಲ್ಲಿ ಗಾಂಧೀಜಿಯವರ ಪ್ರಯತ್ನವು ಪೂರ್ಣ ವಿಫಲವಾದುದರಿಂದ ಕಾಯ್ದೆ ಭಂಗ ಚಳವಳಿಯನ್ನು ಪುನರಾರಂಭಿಸುವುದು ಅನಿವಾರ್ಯವೆನಿಸಿತು. ಆಗ ದೇಶದಲ್ಲಿ ಚಳವಳಿಗೆ ಅನುಕೂಲ ವಾತಾವರಣವಿತ್ತು. ಗಂಭೀರವಾದ ಆರ್ಥಿಕ ಬಿಕ್ಕಟ್ಟು ತಲೆದೋರಿದ ಪರಿಣಾಮವಾಗಿ ಭಾರೀ ತೆರಿಗೆಯನ್ನು ಹಾಕಲಾಗಿತ್ತು. ಅನೇಕಾನೇಕ ನೌಕರರನ್ನು ಕೆಲಸದಿಂದ ನಿವೃತ್ತಿಗೊಳಿಸಲಾಗಿತ್ತು. ಕೃಷಿಕ್ಷೇತ್ರದಲ್ಲೂ ತೀವ್ರ ಅತೃಪ್ತಿಯಾಗಿತ್ತು. ವಾಣಿಜ್ಯರಂಗ ಚಿಂತೆಗೀಡಾಗಿತ್ತು. ಕಾಂಗ್ರೆಸ್ಸಿಗರು ಮತ್ತು ಸರಕಾರದ ನಡುವೆ ಸ್ಥಳೀಯವಾಗಿ ಘರ್ಷಣೆಗಳುಊ ನಡೆಯುತ್ತಿದ್ದವು. ವಾಯುವ್ಯ ಗಡಿಪ್ರಾಂತದಲ್ಲಿ ಖಾನ್ ಅಬ್ದುಲ್ ಗಫಾರ್ ಖಾನ್‌ರ ಕೆಂಪು ಅಂಗಿ ಸ್ವಯಂಸೇವಕರು ಮತ್ತು ಹಿಂದೂ ಕಾಂಗ್ರೆಸಿಗರ ನಡುವೆ ಜಗಳ ಆರಂಭವಾಗಿತ್ತು.

ಗಾಂಧೀಜಿಯವರು ವೈಸರಾಯ್‌ರೊಂದಿಗೆ ಭೇಟಿಯಾಗಬಯಸಿದರು. ಆದರೆ 1932ಜನವರಿ ಎರಡರಂದು ಅವರಿಗೆ ನಿರಾಕರಣೆಯ ಉತ್ತರ ಲಭಿಸಿತು. ಜನವರಿ ನಾಲ್ಕರಂದು ಗಾಂಧೀಜಿಯವರನ್ನು ಬಂಧಿಸಿ ಮತ್ತೆ ಯರವಾಡ ಸೆರೆಮನೆಗೆ ಕಳುಹಿಸಲಾಯಿತು. ಅದೇ ದಿನ ಸರಕಾರ ನಾಲ್ಕು ಸುಗ್ರೀವಾಜ್ಞೆಗಳನ್ನು ಹೊರಡಿಸಿತು. ಅಖಿಲ ಭಾರತ ಕಾಂಗ್ರೆಸ್ ಸಮಿತಿ, ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಮತ್ತು ಹಲವಾರು ಸ್ಥಳೀಯ ಕಾಂಗ್ರೆಸಂ ಘಟಕಗಳನ್ನು ನಿಷೇಧಿಸಿ, ಅವುಗಳ ಕಛೇರಿ ಹಾಗೂ ನಿಧಿಗಳನ್ನು ವಶಪಡಿಸಿಕೊಳ್ಳಲಾಯಿತು. 1932ಏಪ್ರಿಲ್ ವೇಳೆಗೆ ಬಂಧನಕ್ಕೊಳಗಾದವರು ಸಂಖ್ಯೆ32,458ಕ್ಕೇರಿತು. ಕಲ್ಕತ್ತ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷ ಭಾಷಣದಲ್ಲಿ ಪಂಡಿತ ಮದನ ಮೋಹನ ಮಾನವೀಯ ಅವರು 1,20,000ಮಂದಿಯನ್ನು ಬಂಧಿಸಲಾಗಿದೆ ಎಂದು ತಿಳಿಸಿದರು.

ಸರಕಾರದ ಈ ಅನಿರೀಕ್ಷಿತ ಕಾರ್ಯಾಚರಣೆಯಿಂದಾಗಿ ಕಾಂಗ್ರೆಸ್ ನಾಯಕರಿಗೆ ಕಾಯ್ದೆಭಂಗ ಚಳವಳಿಯನ್ನು ಯೋಜಿಸಲು ಹಾಗೂ ಕೇಂದ್ರೀಯ ನಿರ್ದೇಶನ ಮತ್ತು ನಿಯಂತ್ರಣದ ವ್ಯವಸ್ಥೆ ಮಾಡಲು ಸಾಧ್ಯವಾಗಲಿಲ್ಲ. ಆದ್ದರಿಂದ ಕಾಂಗ್ರೆಸ್ಸಿನ ಅಂಗಸಂಸ್ಥೆಗಳ

ಸದಸ್ಯರನ್ನೂ ಇತರ ಕೆಲವು ವ್ಯಕ್ತಿಗಳನ್ನೂ ಕಾಯ್ದೆ ಭಂಗ ಚಳುವಳಿಯನ್ನು ಯೋಜಿಸಲು ಹಾಗೂ ನಿಯಂತ್ರಿಸಲು ತಾತ್ಕಾಲಿಕವಾಗಿ ನಾಮಕರಣ ಮಾಡಲಾಯಿತು. ಚಳುವಳಿಯು ಹಳೆಯ ಮಾದರಿಯಲ್ಲೇ ಮುಂದುವರಿಯಿತು. ಬ್ರಿಟಿಷ್ ವಸ್ತುಗಳ (ಮುಖ್ಯವಾಗಿ ಬಟ್ಟೆ) ಬಹಿಷ್ಕಾರ, ಕಾನೂನು ಉಲ್ಲಂಘಿಸಿ ಉಪ್ಪು ತಯಾರಿಕೆ, ಸುಗ್ರೀವಾಜ್ಞೆ ಮೂಲಕ ತಂದ ಅನ್ಯಾಯದ ಸರಕಾರಿ ಆದೇಶಗಳ ಅವಗಣನೆ, ಇತ್ಯಾದಿಗಳು ಮುಂದುವರಿದವು. ಸರಕಾರದ ನಿಷೇದಾಜ್ಞೆ ಇದ್ದರೂ ದೆಹಲಿ ಮತ್ತು ಕಲ್ಕತ್ತ ಕಾಂಗ್ರೆಸ್ ಅಧಿವೇಶನಗಳನ್ನು (1932) ನಡೆಸಲಾಯಿತು.

## 18.9 ಘಟಕದ ಸಾರಾಂಶ

***ಈ ಘಟಕದ ಅಧ್ಯಯನದಿಂದ ನಾವು ಈ ವಿಷಯಗಳನ್ನು ತಿಳಿದೆವು.***

* ಕಾಯ್ದೆ ಭಂಗ ಚಳುವಳಿಯ ಪ್ರಾರಂಭದ ನಿರ್ಧಾರ
* ಈ ಚಳುವಳಿಯನ್ನು ದಂಡಿಯಾತ್ರೆಯ ಮೂಲಕ ಪ್ರಾರಂಭ ಮಾಡಿಸಿದ್ದು
* ಎಲ್ಲಾ ರಾಷ್ಟ್ರೀಯ ನಾಯಕರು, ಎಲ್ಲಾ ಕೋಮು ವರ್ಗದವರು ಬೇಧವೆನಿಸದೇ ಚಳುವಳಿಯಲ್ಲಿ ಭಾಗವಹಿಸಿದ್ದು
* ಈ ಚಳುವಳಿಯಿಂದ ಸಾವಿರಾರು ಜನರು ಜೈಲು ಸೇರಿದರು
* ಈ ಚಳುವಳಿಯ ಪರಿಣಾಮ ಪ್ರಥಮ ದುಂಡು ಮೇಜಿನ ಪರಿಷತ್ತನ್ನು ಕರೆದಿದ್ದು.
* .................. ಇರ್ವಿನ್ ಒಪ್ಪಂದ ಮತ್ತು 2ನೇ ದುಂಡುಮೇಜಿನ ಪರಿಷತ್ತು ಕರೆದಿದ್ದು, ಕಮ್ಯೂ......................

ಮುಂತಾದ ವಿಷಯಗಳನ್ನು ಈ ಚಳುವಳಿಯ ಪರಿಣಾಮವಾಗಿ ಅಧ್ಯಯನ ಮಾಡಿದೆವು.

## 18.10 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಕಾಯ್ದೆ ಭಂಗ ಚಳುವಳಿಯ ರೂಪುರೇಖೆಯನ್ನು ವಿವರಿಸಿ.
2. ಕಾಯ್ದೆ ಭಂಗ ಚಳುವಳಿಯಲ್ಲಿ ಗಾಂಧೀಜಿಯ ಪಾತ್ರವನ್ನು ಚರ್ಚಿಸಿ.
3. ಟಿಪ್ಪಣಿ ಬರೆಯಿರಿ: (a) ಉಪ್ಪಿನ ಸತ್ಯಾಗ್ರಹ (b) ಗಾಂಧಿ ಇರ್ವಿನ್ ಒಪ್ಪಂದ

# ಘಟಕ 19 ದುಂಡು ಮೇಜಿನ ಪರಿಷತ್ತುಗಳು

**ವಿಷಯ ಸೂಚಿ**



## 19.0 ಉದ್ದೇಶಗಳು

ಈ ಘಟಕ 19ರ ಅಧ್ಯಯನದಿಂದ ಈ ಕೆಳಗಿನ ಅಂಶಗಳನ್ನು ತಿಳಿಯಬಹುದು

* ಭಾರತಕ್ಕೆ ಸ್ವಾತಂತ್ರ್ಯ ಪಡೆಯಲು ಕಾಂಗ್ರೆಸ್ ಮತ್ತು ಗಾಂಧೀಜಿಯವರು ನಡೆಸುತ್ತಿದ್ದ ಸ್ವಾತಂತ್ರ್ಯ ಹೋರಾಟ.

* ಗಾಂಧೀಜಿಯವರು ಮಾಡಿದ ಅಸಹಕಾರ ಚಳುವಳಿ, ಕಾಯ್ದೆಭಂಗ ಚಳುವಳಿಯಲ್ಲಿ ನೋಡಿದ ಬ್ರಿಟೀಷರು, ಭಾರತಕ್ಕೆ ಸ್ವಾತಂತ್ರ್ಯ ನೀಡಲು ದುಂಡು ಮೇಜಿನ ಪರಿಷತ್ತನ್ನು ಕರೆದದ್ದು.

* ಗಾಂಧಿ - ಇರ್ವಿನ್ ಒಪ್ಪಂದವನ್ನು ಮಾಡಿಕೊಂಡಿದ್ದು.

* ದುಂಡು ಮೇಜಿನ ಪರಿಷತ್ತಿನಲ್ಲಿ ಗಾಂಧಿ, ಅಂಬೇಡ್ಕರ್ ಮುಂತಾದ ನಾಯಕರು ಭಾಗವಹಿಸಿದ್ದು.

* ಪೂನಾ ಒಪ್ಪಂದ ಮತ್ತು ಕೋಮು ತೀರ್ಪು ಮುಂತಾದವುಗಳ ಅಧ್ಯಯನ.

## 19.1 ಪೀಠಿಕೆ

ಬ್ರಿಟೀಷರ ದೌರ್ಜನ್ಯ ಮತ್ತು ಭಾರತೀಯರ ಸ್ವಾತಂತ್ರ್ಯಹರಮ ಆರ್ಥಿಕ ಅಧೋಗತಿ, ಸಾಮಾಜಿಕ ಅಸಮಾನತೆ ಮುಂತಾದವುಗಳು ಭಾರತೀಯರು ಇದಕ್ಕೆಲ್ಲಾ ಮೂಲ ಕಾರಣರಾದ ಬ್ರಿಟೀಷರನ್ನು ಭಾರತದಿಂದ ಓಡಿಸಲು ಹಲವು ಚಳುವಳಿಗಳನ್ನು ನಡೆಸಿದರು. ಅವುಗಳಲ್ಲಿ ಅಸಹಕಾರ ಚಳುವಳಿ, ಕಾಯ್ದೆಭಂಗ ಚಳುವಳಿ ಮುಖ್ಯವಾದವುಗಳು. ಈ ಚಳುವಳಿಗಳ ಕಾರಣದಿಂದ ಬ್ರಿಟೀಷರು ಹೆದರಿ ಭಾರತೀಯರಿಗೆ ಸ್ವಾತಂತ್ರ್ಯ ಕೊಡುತ್ತೇವೆಂಬ ನೆಪ ಒಡ್ಡಿ ಕೆಲವು ಸಮ್ಮೇಳನಗಳನ್ನು ನಡೆಸಿದರು. ಅವುಗಳಲ್ಲಿ ದುಂಡು ಮೇಜಿನ ಪರಿಷತ್ತುಗಳು ಪ್ರಮುಖವಾದವುಗಳು ಅವುಗಳ ಪ್ರಾರಂಭ ಕಾರಣ, ಮತ್ತು ಅವುಗಳ ಪರಿಣಾಮಗಳ ಬಗ್ಗೆ ಇಲ್ಲಿ ಅಧ್ಯಯನ ಮಾಡಲಾಗುತ್ತದೆ.

## 19.2 ದುಂಡು ಮೇಜಿನ ಪರಿಷತ್ತುಗಳು

ದುಂಡು ಮೇಜಿನ ಪರಿಷತ್ತುಗಳು ಆಧುನಿಕ ಭಾರತದ ಸಂವಿಧಾನಾತ್ಮಕ ಬೆಳವಣಿಗೆಯ ಇತಿಹಾಸದಲ್ಲಿ ಪ್ರಮುಖ ಸ್ಥಾನವನ್ನು ಗಳಿಸಿವೆ. ಈ ಸಮ್ಮೇಳನಗಳು ಸಂಘಟನೆಯಾಗಲು ಅನೇಕ ರಾಜಕೀಯ ಪರಿಸ್ಥಿತಿಗಳು ಕಾರಣವಾದವೆಂಬುದು. ಪ್ರಸ್ತುತ ಗಮನಾರ್ಹವಾಗಿದೆ. 1928 ಡಿಸೆಂಬರ್‌ನಲ್ಲಿ ಮೋತಿಲಾಲ್ ನೆಹರೂ ವರದಿಯನ್ನು ಸರ್ವಪಕ್ಷಗಳ ಸಭೆಯು ಅಂಗೀಕರಿಸಿದರು ಕೂಡಾ ಮುಸ್ಲಿಂ ಲೀಗ್ ಅದನ್ನು ವಿರೋಧಿಸಿತು. ಈ ಸಂದರ್ಭದಲ್ಲಿ ಮಹಮ್ಮದ್ ಆಲಿ ಜಿನ್ನಾರವರು 14 ಅಂಶಗಳನ್ನೊಳಗೊಂಡ ಒಂದು ಪ್ರಾಣಾಳಿಕೆಯನ್ನು ಮುಂದಿಟ್ಟಾಗ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಅದನ್ನು ತಿರಸ್ಕರಿಸಿತು. 1929 ರಲ್ಲಿ ಗ್ರೇಟ್ ಬ್ರಿಟನ್ನಿನಲ್ಲಿ ನಡೆದ ಮಹಾಚುನಾವಣೆಯಲ್ಲಿ ಲೇಬರ್ ಪಕ್ಷವು ಅಧಿಕಾರವನ್ನು ಸ್ಥಾಪಿಸಿದಾಗ ಭಾರತದ ಬಗ್ಗೆ ರಾಜಕೀಯ ಸಹಾನುಭೂತಿ ಮತ್ತು ಕಾಳಜಿಯನ್ನು ಹೊಂದಿದ್ದ ರ್‍ಯಾಮಸೆ ಮ್ಯಾಕಂ ಡೋನಾಲ್ಡ್‌ರವರು ಪ್ರಧಾನಮಂತ್ರಿಯಾಗಿ ಅಧಿಕಾರವನ್ನು ಸ್ವೀಕರಿಸಿ ಕಾಮನ್‌ವೆಲ್ತ್ ಕಾರ್ಮಿಕ ಪಕ್ಷಗಳ ಸಮ್ಮುಖದಲ್ಲಿ ಕಾಮನ್‌ವೆಲ್ತ್ ಒಕ್ಕೂಟಕ್ಕೆ ಇನ್ನೊಂದು ರಾಷ್ಟ್ರವು ಸೇರಲಿದೆ. ಆ ರಾಷ್ಟ್ರವೇ ಭಾರತ ಎಂಬುದಾಗಿ ತಿಳಿಸಿದರು. ಗ್ರೇಟ್ ಬ್ರಿಟನ್ನಿನ ಪ್ರಧಾನಿಯ ಈ ಘೋಷಣೆಯು ಭಾರತೀಯರಲ್ಲಿ ಆಶಾಭಾವನೆಯನ್ನು ಮೂಡಿಸಿತು. ರ್‍ಯಾಮಸೆ ಮ್ಯಾಕ್ ಡೋನಾಲ್ಡ್‌ರು ಭಾರತದ ವೈಸ್‌ರಾಯ್‌ರಾಗಿದ್ದ ಲಾರ್ಡ್ ಇರ್ವಿನ್ನರೊಂದಿಗೆ ಚರ್ಚೆಗಳನ್ನು ನಡೆಸಿದರು. 1929 ರ ಅಕ್ಟೋಬರ್ 31 ರಂದು 'ಗ್ರೇಟ್ ಬ್ರಿಟನ್ನಿನ ಚಕ್ರವರ್ತಿಯು ಸೈಮನ್ ಆಯೋಗದ ಶಿಫಾರಸ್ಸುಗಳನ್ನು ಒಪ್ಪಿ ಅವರ ಸರ್ಕಾರವು ಭಾರತೀಯ ರಾಜ್ಯಗಳು ಮತ್ತು ಬ್ರಿಟಿಷ್ ಪ್ರಾಂತ್ಯಗಳ ಪ್ರತಿನಿಧಿಗಳು ಒಂದು ಸ್ಪಷ್ಟವಾದ ನಿರ್ಧಾರಕ್ಕೆ ಬರಲು ಎಲ್ಲರನ್ನೊಳಗೊಂಡ ಒಂದು ಸಮ್ಮೇಳನವನ್ನು ಸಂಘಟಿಸಲು ಇಚ್ಛಿಸಿದೆ' ಎಂದು ಘೋಷಿಸಿದರು. ಭಾರತದಲ್ಲಿ ಉದ್ಭವಿಸಿದ್ದ ಗ್ರೇಟ್ ಬ್ರಿಟನ್ ಸರ್ಕಾರದ ವಿರುದ್ಧ ಭಾವನೆ ಮತ್ತು ವ್ಯಾಪಾರದ ಹಿತರಕ್ಷಣೆಗಾಗಿ ದುಂಡು ಮೇಜಿನ ಸಮ್ಮೇಳನಗಳನ್ನು ಸಂಘಟಿಸಲಾಯಿತೆಂದು ಊಹಿಸಬಹುದಾಗಿದೆ.

**ದೆಹಲಿ ಪ್ರಾಣಾಳಿಕೆ**

ಲಾರ್ಡ್ ಇರ್ವಿನ್ನರ ಘೋಷಣೆಯು ಅಸಷ್ಟವಾದುದರಿಂದ ಮತ್ತು ಡೊಮೆನಿಯನ್ ಸ್ಥಾನಮಾನಗಳ ಬಗ್ಗೆ ಯಾವುದೇ ಹೇಳಿಕೆಗಳು ಕಂಡು ಬರದಿದ್ದು ಭಾರತೀಯರಿಗೆ ನಿರಾಶೆಯನ್ನುಂಟು ಮಾಡಿತು. ಈ ಘೋಷಣೆಯು ಹೊರಬಿದ್ದ 24 ಗಂಟೆಗಳ ತರುವಾಯ ಕಾಂಗ್ರೆಸ್ಸಿನ ಮುಖಂಡರು ದುಂಡು ಮೇಜಿನ ಸಮ್ಮೇಳನಗಳ ಮುಖ್ಯ ಉದ್ದೇಶ ಡೊಮಿನಿಯನ್ ಸ್ಥಾನಮಾನಗಳಿಗಷ್ಟೇ ಸೀಮಿತವಾಗದೆ ಡೊಮಿನಿಯನ್ ಸಂವಿಧಾನವನ್ನು ರಚಿಸಬೇಕೆಂದು ಒಂದು ಹೇಳಿಕೆಯನ್ನು ನೀಡಿದರು. ಕಾಂಗ್ರೆಸ್ಸಿನ ಬಹುತೇಕ ಮುಖಂಡರು ಈ ಹೇಳಿಕೆಗೆ ತಮ್ಮ ಅಸಂತೋಷವನ್ನು ವ್ಯಕ್ತಪಡಿಸಿ ಲಾರ್ಡ್ ಇರ್ವಿನ್ನರ ಘೋಷಣೆಯನ್ನು ಒಂದು ಸುಳ್ಳಿನ ಸರಮಾಲೆಯಂದು ಕರೆದರು. ಗ್ರೇಟ್ ಬ್ರಿಟನ್ ಸರ್ಕಾರದ ಬಗ್ಗೆ ಸಂಶಯ ವ್ಯಕ್ತಪಡಿಸಿದರು. ಇದರಿಂದಾಗಿ ಈ ಇಬ್ಬರೂ ಮುಖಂಡರೂ ಕಾಂಗ್ರೆಸ್ಸಿನ ಕಾರ್ಯಕಾರಿ ಸಮಿತಿಗೆ ತಮ್ಮ ರಾಜಿನಾಮೆಯನ್ನು ಸಲ್ಲಿಸಿದರು.

1929ರ ಡಿಸೆಂಬರ್ 23 ರಂದು ಮಹಾತ್ಮ ಗಾಂಧಿಯವರು ಲಾರ್ಡ್ ಇರ್ವಿನ್ನರನ್ನು ದೆಹಲಿಯಲ್ಲಿ ಭೇಟಿ ಮಾಡಿ ಸರ್ಕಾರವು ದುಂಡು ಮೇಜಿನ ಸಮ್ಮೇಳನವನ್ನು ಸಂಘಟಿಸುವ ಪ್ರಯತ್ನದಲ್ಲಿ ತೊಡಗಿರುವುದನ್ನು ಶ್ಲಾಘಿಸಿದರು. ಈ ಸಭೆಯಲ್ಲಿ ಪಂಡಿತ ಮೋತಿಲಾಲ್ ನೆಹರೂ, ಸರ್ದಾರ್ ವಲ್ಲಭಬಾಯಿ ಪಟೇಲ್, ಮಹಮ್ಮದ್ ಆಲಿ ಜಿನ್ನಾ ಮೊದಲಾದವರು ಭಾಗವಹಿಸಿದ್ದರು. ಈ ಸಭೆಯಲ್ಲಿ ವೈಸ್‌ರಾಯ್ ಭವಿಷ್ಯದ ಸಂವಿಧಾನದ ಬಗ್ಗೆ ಸ್ಪಷ್ಟವಾದ ಮಾಹಿತಿಯನ್ನು ಕೊಡುವುದು ತಮ್ಮಿಂದ ಸಾಧ್ಯವಾಗದು ಎಂಬ ತಮ್ಮ ಅಸಹಾಯಕತೆಯನ್ನು ತೋರ್ಪಡಿಸಿದರು. ಹೀಗಾಗಿ ಈ ಅನಿಶ್ಚಯತೆಯಿಂದಾಗಿ, ಮಾತುಕತೆಗಳಿಂದ ಮುಖಂಡರು ಭ್ರಮನಿರಸರಾಗಿ ಹಿಂದುರುಗಿದರು.

## 19.3 ಪ್ರಥಮ ದುಂಡು ಮೇಜಿನ ಪರಿಷತ್ತು

ಗ್ರೇಟ್ ಬ್ರಿಟನ್ನಿನ ರಾಜಧಾನಿ ಲಂಡನ್ನಿನಲ್ಲಿ ಸಮಾವೇಶಗೊಂಡ ಮೊದಲನೆ ದುಂಡು ಮೇಜಿನ ಸಮ್ಮೇಳನದಲ್ಲಿ 89 ಮಂದಿ ಪ್ರತಿನಿಧಿಗಳು ಭಾಗವಹಿಸಿದ್ದರು. 57 ಮಂದಿ ಬ್ರಿಟೀಷ್ ಭಾರತವನ್ನು ಮತ್ತು 16 ಮಂದಿ ದೇಶೀಯ ರಾಜ್ಯಗಳನ್ನು ಪ್ರತಿನಿಧಿಸಿದ್ದು ಉಳಿದವರು ಗ್ರೇಟ್ ಬ್ರಿಟನ್ನಿನ ರಾಜಕೀಯ ಪಕ್ಷಗಳ ಪ್ರತಿನಿಧಿಗಳಾಗಿದ್ದರು. ಸರ್ಕಾರವು ಅಪಾಯರಹಿತ ಸದಸ್ಯರನ್ನು ಮಾತ್ರ ಪರಿಷತ್ತಿಗೆ ಆಮಂತ್ರಿಸಿತ್ತು. ಗ್ರೇಟ್ ಬ್ರಿಟನ್ನಿನ ಪ್ರಧಾನಿ ರ್‍ಯಾಮಸೆ ಮ್ಯಾಕ್‌ಡೋನಾಲ್ಡ್‌ರು ಇದರ ಅಧ್ಯಕ್ಷತೆಯನ್ನು ವಹಿಸಿದ್ದರು. ಬ್ರಿಟೀಷ್ ಭಾರತದ ಪ್ರತಿನಿಧಿಗಳಲ್ಲಿ ಹಿಂದೂಗಳ, ಮುಸ್ಲಿಮರು, ಸಿಖ್ಖರು, ಅಲ್ಪಸಂಖ್ಯಾತರು, ಭೂಮಾಲೀಕರು ಮತ್ತು ಕಾರ್ಮಿಕರು ಒಳಗೊಂಡಿದ್ದರು. ಕಾಂಗ್ರೆಸ್ಸಿನ ಮುಖಂಡರು ಸೆರೆಮನೆಯಲ್ಲಿದ್ದುದರಿಂದ ಸಮ್ಮೇಳನದಲ್ಲಿ ಭಾಗವಹಿಸಲಿಲ್ಲ.

ಅಧಿವೇಶನದ ಆರಂಭದಲ್ಲಿ ಸಂವಿಧಾನಾತ್ಮಕ ಪ್ರಸ್ತಾವನೆಗಳನ್ನು ಪ್ರಧಾನಿ ಮುಂದಿಟ್ಟರು. ಭವಿಷ್ಯದ ಸಂವಿಧಾನವು ಯಾವ ರೀತಿಯಲ್ಲಿರಬೇಕೆಂದು ವಿಚಾರದ ಮೇಲೆ ದೀರ್ಘವಾದ ಚರ್ಚೆಗಳು ನಡೆದವು. ಈ ಚರ್ಚೆಯ ಫಲವಾಗಿ ಮೂರು ಮುಖ್ಯ ಅಂಶಗಳು ಹೊರಹೊಮ್ಮಿದವು. ಅವುಗಳು ಯಾವುವೆಂದರೆ,

1. ಭಾರತದ ಭವಿಷ್ಯದ ಸರ್ಕಾರವು ಫೆಡರಲ್ ಸ್ವರೂಪದ್ದಾಗಿರಬೇಕು.

2. ಪ್ರಾಂತ್ಯಗಳಿಗೆ ಹೆಚ್ಚಿನ ಸ್ವಾಯತ್ತತೆಯನ್ನು ನೀಡಬೇಕು. ಜೊತೆಗೆ ಅಲ್ಪಸಂಖ್ಯಾತರ ಹಿತಾಸಕ್ತಿಯನ್ನು ಕಾಪಾಡುವ ವಿಶೇಷ ಹೊಣೆಯನ್ನು ಹೊರಬೇಕು.

3. ಕೇಂದ್ರ ಒಕ್ಕೂಟದಲ್ಲಿ ಸ್ಥಾಪಿಸಬೇಕು ಮತ್ತು ಗವರ್ನರ್ ಜನರಲ್‌ರಿಗೆ ಹೆಚ್ಚಿನ ಅಧಿಕಾರವನ್ನು ನೀಡಬೇಕು.

ಮೇಲಿನ ಪ್ರಸ್ತಾವನೆಗಳನ್ನು ಸಮ್ಮೇಳನದಲ್ಲಿ ಭಾಗವಹಿಸಿದ್ದ ಬಹುತೇಕ ಪ್ರತಿನಿಧಿಗಳು ಒಪ್ಪಿಕೊಂಡರು. ಬಿಕಾನೇರಿನ ಮಹಾರಾಜರು ಅಖಿಲ ಭಾರತ ಒಕ್ಕೂಟಕ್ಕೆ ದೇಶೀಯ ರಾಜರು ಸೇರಲು ಒಪ್ಪಿದ್ದಾರೆ ಎಂದು ಘೋಷಿಸಿ ಒಕ್ಕೂಟ ಎಂಬ ಶಬ್ದವು ರಾಜರಿಗಾಗಲಿ ಅಥವಾ ರಾಜ್ಯಗಳ ಸರ್ಕಾರಗಳಿಗಾಗಲಿ ಗಾಬರಿಯನ್ನು ಉಂಟುಮಾಡುವುದಿಲ್ಲ ಎಂದು ಹೇಳಿದರು. ಚೇಂಬರ್ ಆಫ್

ಪ್ರಿನ್ಸೆಸ್‌ನ ಅಧ್ಯಕ್ಷರಾಗಿದ್ದ ಪಾಟಿಯಾಲದ ಮಹಾರಾಜರು ಬಿಕಾನೇರಿನ ಮಹಾರಾಜರ ಹೇಳಿಕೆಯನ್ನು ಸಮರ್ಥಿಸಿ ಒಕ್ಕೂಟ ತತ್ವಕ್ಕೆ ಮಹಾರಾಜರುಗಳ ಒಪ್ಪಿಗೆಯನ್ನು ಘೋಷಿಸಿದರು. ಗ್ರೇಟ್ ಬ್ರಿಟನ್ನಿನ ಪಾರ್ಲಿಮೆಂಟಿನ ಎರಡೂ ಸದನಗಳು ಇದಕ್ಕೆ ಸಮ್ಮತಿಸಿದರೂ ಕೂಡಾ ಗ್ರೇಟ್ ಬ್ರಿಟನ್ನಿನ ಸರ್ಕಾರ ಭಾರತ ಒಕ್ಕೂಟ ರಚನೆಯ ಮಸೂದೆಯನ್ನು ಅಂಗೀಕರಿಸಲಿಲ್ಲ.

ಸಮ್ಮೇಳನದ ಕೊನೆಯಲ್ಲಿ ಕೋಮು ಸಮಸ್ಯೆಯು ಉದ್ಭವಿಸಿತು. ಇದರಿಂದಾಗಿ ಹಾಜರಿದ್ದ ಎಲ್ಲಾ ಪ್ರತಿನಿಧಿಗಳಿಗೂ ಒಪ್ಪಿಗೆಯಾಗುವಂತಹ ಸೂತ್ರವನ್ನು ಕಂಡು ಹಿಡಿಯುವುದು ಅಸಾಧ್ಯವಾಯಿತು. ಮುಸ್ಲಿಂ ಪ್ರತಿನಿಧಿಗಳು ಪ್ರತ್ಯೇಕ ಮೀಸಲಾತಿಯ ಬೇಡಿಕೆಯನ್ನು ಮುಂದಿಟ್ಟರು. ಮಹಮ್ಮದ್ ಆಲಿ ಜಿನ್ನಾರವರು ತಮ್ಮ 14 ಅಂಶಗಳಿಗೆ ಹೆಚ್ಚು ಒತ್ತುಕೊಟ್ಟು ಪ್ರಚಾರವನ್ನು ನೀಡಿದರು. ಡಾ. ಬಿ.ಆರ್. ಅಂಬೇಡ್ಕರ್‌ರವರೂ ಕೂಡ ಮುಸ್ಲಿಮರಂತೆ ದಲಿತರಿಗೂ (ನಿಮ್ಮ ವರ್ಗದವರಿಗೆ) ಸಹ ಪ್ರತ್ಯೇಕ ಮತಕ್ಷೇತ್ರಗಳನ್ನು ನೀಡಬೇಕೆಂದು ತಮ್ಮ ಬೇಡಿಕೆಯನ್ನು ಮುಂದಿಟ್ಟರು. ಇದಕ್ಕೆ ಬದಲಾಗಿ ಹಿಂದೂ ಪ್ರತಿನಿಧಿಗಳು ಅಲ್ಪಸಂಖ್ಯಾತರಿಗೆ ಜಂಟಿ ಮತಕ್ಷೇತ್ರಗಳನ್ನು ಬಿಟ್ಟುಕೊಡುವುದಾಗಿ ತಿಳಿಸಿದರು. ಇದರಿಂದಾಗಿ ಸಮಸ್ಯೆಯು ಮತ್ತಷ್ಟು ಜಟಿಲವಾಗಿ ಯಾವುದೇ ಸ್ಪಷ್ಟವಾದ ನಿರ್ಧಾರಕ್ಕೆ ಬರಲು ಸಾಧ್ಯವಾಗಲಿಲ್ಲ. ಸಮ್ಮೇಳನದ ಅಧ್ಯಕ್ಷರು ತೆಗೆದುಕೊಂಡ ಕೆಲವು ದೃಢ ನಿರ್ಧಾರಗಳನ್ನು ಹೊರತುಪಡಿಸಿದಲ್ಲಿ ಸಮ್ಮೇಳನವು ಬರಿ ಚರ್ಚೆ, ಬೇಡಿಕೆ ಮತ್ತು ಪ್ರತಿ ಬೇಡಿಕೆಗಳಲ್ಲಿಯೇ ಸಮಾಪ್ತಿಯಾಯಿತು. ಕಾಂಗ್ರೆಸ್ಸಿನ ಮುಖಂಡರ ಗೈರು ಹಾಜರಿಯಲ್ಲಿ ಸಾಧಿಸದೆ ವಿಫಲವಾಯಿತು.

ಮೊದಲನೆ ದುಂಡು ಮೇಜಿನ ಸಮ್ಮೇಳನದ ವಿಫಲವಾದ ಸಂದರ್ಭದಲ್ಲಿ ಭಾರತದ ರಾಜಕೀಯ ಪರಿಸ್ಥಿತಿಯಲ್ಲಿ ಅನಿಶ್ಚಯ ಸ್ಥಿತಿಗತಿಗಳು ಲಭ್ಯವಾಗಿದ್ದವು. ಇವುಗಳನ್ನು ಪರಿಹರಿಸುವ ದೃಷ್ಟಿಯಲ್ಲಿ ಮತ್ತು ರಾಜಕೀಯ ಸೂತ್ರವೊಂದನ್ನು ಹುಡುಕುವ ಯತ್ನದಲ್ಲಿ ಸರ್ಕಾರವು ಕ್ರಮಗಳನ್ನು ಕೈಗೊಂಡಿತು. ಹೀಗಾಗಿ 1931ರ ಫೆಬ್ರವರಿ 17 ರಿಂದ ಮಾರ್ಚ್ ತಿಂಗಳ 5 ರ ವರೆಗೆ ದೆಹಲಿಯಲ್ಲಿ ಮಹಾತ್ಮ ಗಾಂಧಿ ಮತ್ತು ವೈಸ್‌ರಾಯ್ ಲಾರ್ಡ್ ಇರ್ವಿನ್ನರು ಸುದೀರ್ಘ ರಾಜಕೀಯ ಚರ್ಚೆಯನ್ನು ನಡೆಸಿದರು. ಇದರ ಫಲದಿಂದಾಗಿ ಗಾಂಧಿ ಇರ್ವಿನ್ ಒಪ್ಪಂದವು ಏರ್ಪಟ್ಟು ತಾತ್ಕಲಿಕವಾಗಿ ಕಾಯ್ದೆ ಭಂಗ ಚಳುವಳಿಯನ್ನು ಸ್ಥಗಿತಗೊಳಿಸಲಾಯಿತು. ಈ ಒಪ್ಪಂದದಂತೆ ಮಹಾತ್ಮ ಗಾಂಧಿಯವರು ಎರಡನೇ ದುಂಡು ಮೇಜಿನ ಸಮ್ಮೇಳನದಲ್ಲಿ ಪಾಲ್ಗೊಳ್ಳುವಂತಾಯಿತು.

## 19.4 ದ್ವಿತೀಯ ದುಂಡು ಮೇಜಿನ ಪರಿಷತ್ತು

ಎರಡನೆ ದುಂಡು ಮೇಜಿನ ಸಮ್ಮೇಳನವು 1931ರ ಸೆಪ್ಟೆಂಬರ್ 7 ರಂದು ಪ್ರಾರಂಭವಾಯಿತು. ಗ್ರೇಟ್ ಬ್ರಿಟನ್ನಿನಲ್ಲಿನ ರ‍್ಯಾಮೇಸೆ ಮ್ಯಾಕ್ ಡೊನಾಲ್ಡ್‌ರ ಲೇಬರ್ ಪಕ್ಷವು ಅಧಿಕಾರವನ್ನು ಕಳೆದುಕೊಂಡಿತ್ತು. ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಏಕಮೇವ ಪ್ರತಿನಿಧಿಯಾಗಿ ಆಯ್ಕೆ ಮಾಡಬೇಕೆಂದು ಮಹಾತ್ಮ ಗಾಂಧಿಯವರ ಬೇಡಿಕೆಯನ್ನು ವೈಸ್‌ರಾಯ್‌ರವರು 'ಅವರನ್ನು ಎಲ್ಲಾ ಮುಸ್ಲಿಂರು ಕಾಂಗ್ರೆಸ್ಸಿನ ಪ್ರತಿನಿಧಿಯೆಂದು ಒಪ್ಪಿಕೊಳ್ಳುವುದಿಲ್ಲವೆಂಬ' ಕಾರಣದಿಂದ ತಿರಸ್ಕರಿಸಿದರು. ಮೊದಲನೆ ಸಮ್ಮೇಳನದಲ್ಲಿ ಪರಿಗಣನೆಗೆ ಬರದಿದ್ದ ಗುಂಪುಗಳು ಎರಡನೇ ಸಮ್ಮೇಳನದಲ್ಲಿ ಭಾಗವಹಿಸಿದ್ದು ಇದರ ವಿಶೇಷವಾಗಿತ್ತು. ಇಸ್ಲಾಂ ಧರ್ಮಿಯರ ಪರವಾಗಿ ಸರ್ ಮಹಮ್ಮದ್ ಇಕ್ಬಾಲ್, ಕ್ರಿಶ್ಚಿಯನ್‌ರ ಪರವಾಗಿ ಎಸ್.ಕೆ. ದತ್ತ, ಕೈಗಾರಿಕೋದ್ಯಮಿಗಳ ಪರವಾಗಿ ಜೆ.ಡಿ. ಬಿರ್ಲಾ, ಹಿಂದೂಗಳ ಪ್ರತಿನಿಧಿಯಾಗಿ ಪಂಡಿತ ಮದನ ಮೋಹನ ಮಾಳವೀಯ ಹಾಗೂ ಸರೋಜಿನಿ ನಾಯ್ಡು, ಆಲಿ ಇಮಾಮ್ ಮೊದಲಾದ ಗಣ್ಯರು ಭಾಗವಹಿಸಿದ್ದರು. ಮಹಾತ್ಮ ಗಾಂಧೀಜಿಯವರು ಸರಳ ಉಡುಪು ಮತ್ತು ವ್ಯಕ್ತಿತ್ವ ಸಮ್ಮೇಳನದ ಆಕರ್ಷಣೆಯಾಗಿತ್ತು.

1931ರ ಸೆಪ್ಟೆಂಬರ್ ತಿಂಗಳ 15 ರಂದು ಸಮ್ಮೇಳನದ ಸಂಯುಕ್ತ ರಚನಾ ಸಮಿತಿಯು ತಮ್ಮ ಭಾಷಣದಲ್ಲಿ ಅವರು,

'ಎಲ್ಲಾ ಪಕ್ಷಗಳು ತಮ್ಮ ವೈಯಕ್ತಿಕ ಹಾಗೂ ವರ್ಗದ ಹಿತಾಸಕ್ತಿಗೆ ಇಲ್ಲಿ ಸೇರಿವೆ. ಆದರೆ ಕಾಂಗ್ರೆಸ್ ಪಕ್ಷವು ಇಡೀ ರಾಷ್ಟ್ರವನ್ನು ಮತ್ತು ಸಮಸ್ತ ಭಾರತದ ವರ್ಗಗಳನ್ನು ಪ್ರತಿನಿಧಿಸುತ್ತಿದೆ. ಕಾಂಗ್ರೆಸ್ ಪಕ್ಷವು ಒಂದು ರಾಷ್ಟ್ರೀಯ ಸಂಘಟನೆಯಾಗಿದ್ದು ಅದು ಎಲ್ಲಾ ಅಲ್ಪಸಂಖ್ಯಾತರನ್ನು ಪ್ರತಿನಿಧಿಸುತ್ತದೆ'.

ಎಂದು ತಿಳಿಸಿದರು. ತಮ್ಮ ಭಾಷಣದಲ್ಲಿ ಅವರು ಸ್ವರಾಜ್ಯ ಬೇಡಿಕೆಯನ್ನು ಸಮ್ಮೇಳನದ ಮುಂದಿಟ್ಟರು. ಡಾ. ಬಿ.ಆರ್. ಅಂಬೇಡ್ಕರ್‌ರವರು ಅಂದೇ ತಮ್ಮ ಭಾಷಣದಲ್ಲಿ 'ಸಂಯುಕ್ತ ಶಾಸನ ಸಭೆ ಪ್ರತಿನಿಧಿಗಳನ್ನು ಆಯ್ಕೆ ಮಾಡಬೇಕಾಗಿರುವುದು ಚುನಾವಣೆಯ ಮೂಲಕವೇ ಹೊರತು ನಾಮಕಾರಣದಿಂದ ಅಲ್ಲವೆಂದು' ತಿಳಿಸಿದರು.

ದುಂಡು ಮೇಜಿನ ಸಮ್ಮೇಳನದ ಕಾರ್ಯಗಳು ಪ್ರಮುಖವಾಗಿ ಸಂಯುಕ್ತ ರಚನಾ ಸಮಿತಿ ಮತ್ತು ಅಲ್ಪಸಂಖ್ಯಾತರ ವಿಷಯಗಳಿಗೆ ಸಂಬಂಧಿಸಿದಂತೆ ನಡೆದವು. ಮಹಾತ್ಮ ಗಾಂಧಿಯವರು ಎರಡೂ ಸಮಿತಿಗಳ ಸದಸ್ಯರಾಗಿ ಸಕ್ರಿಯ ಕಾರ್ಯವನ್ನು ನಿರ್ವಹಿಸಿದರು. ಸಂಯುಕ್ತ ರಚನಾ ಸಮಿತಿಯ ಮುಂದೆ ಪೂರ್ಣ ಸ್ವರಾಜ್ಯದ ಬೇಡಿಕೆಯನ್ನು ಮಂಡಿಸಿದರು. ಆದರೆ ಗ್ರೇಟ್ ಬ್ರಿಟನ್ನಿನ ಸರ್ಕಾರವು ಅರೇ ಜವಾಬ್ದಾರಿ ಸರ್ಕಾರವನ್ನು ನೀಡುವುದಾಗಿ ತಿಳಿಸಿತು. ಆದರೆ ಕೋಮು ಭಾವನೆಯು ಆವರಿಸಿತು.

ಸೆಪ್ಟೆಂಬರ್ 28 ರಂದು ಅಲ್ಪಸಂಖ್ಯಾತರ ಸಮಿತಿಯ ಸಭೆಯು ಸಮಾವೇಶಗೊಂಡಿತು. ಡಾ. ಬಿ. ಆರ್. ಅಂಬೇಡ್ಕರ್‌ರವರು ನಿಮ್ಮ ವರ್ಗದವರಿಗೆ ಪ್ರತ್ಯೇಕ ಮತಕ್ಷೇತ್ರವನ್ನು ನೀಡಬೇಕೆಂಬ ಬೇಡಿಕೆಯನ್ನು ಮುಂದಿಟ್ಟರು. ಹಾಗೆಯೇ ಸಮ್ಮೇಳನದಲ್ಲಿ ಭಾಗವಹಿಸಿದ್ದ ಇನ್ನಿತರ ಅಲ್ಪಸಂಖ್ಯಾತ ಗುಂಪುಗಳು ವಿಶೇಷ ಸವಲತ್ತುಗಳಿಗಾಗಿ ತಮ್ಮ ಬೇಡಿಕೆಯನ್ನು ಸಲ್ಲಿಸಿದುವು. ಮಹಮ್ಮದ್ ಆಲಿ ಜಿನ್ನಾ ಮುಸ್ಲಿಮರ ಪರವಾದ ಬೇಡಿಕೆಗಳನ್ನು ಸಲ್ಲಿಸಿ ತಮ್ಮ 14 ಅಂಶಗಳಿಗೆ ಕಟ್ಟುಬಿದ್ದರು. ಕೋಮು ಸಮಸ್ಯೆಯು ಇತ್ಯರ್ಥವಾಗುವವರೆಗೂ ತಾವು ಫೆಡರಲ್ ಯೋಜನೆಗೆ ಸೇರುವುದು ಸಾಧ್ಯವಿಲ್ಲವೆಂದು ಮುಸ್ಲಿಂ ಮತ್ತು ಸಿಖ್ ಪ್ರತಿನಿಧಿಗಳು ಸ್ಪಷ್ಟಪಡಿಸಿದರು. ಹೀಗೆ ಸಮಸ್ಯೆಯು ಸಾಕಷ್ಟು ಗೊಂದಲಮಯವಾದುದರಿಂದ ಗ್ರೇಟ್ ಬ್ರಿಟನ್ ಸರ್ಕಾರದ ವಕ್ತಾರರಾದ ಸರ್ ಸ್ಯಾಮುಯೆಲ್ ಹೋರ್ ಎಲ್ಲರೂ ಆಶ್ಚರ್ಯಪಡುವಂತೆ ದುಂಡು ಮೇಜಿನ ಸಮ್ಮೇಳನವನ್ನು ಸಂವಿಧಾನ ಸಭೆಯಲ್ಲವೆಂದು ಘೋಷಿಸಿದರು.

ಮಹಾತ್ಮ ಗಾಂಧಿಯವರು ಎಲ್ಲಾ ಪ್ರತಿನಿಧಿಗಳಿಗೂ ಒಪ್ಪಿಗೆಯಾಗುವಂತಹ ಒಂದು ನಿರ್ಣಯವನ್ನು ಸಮ್ಮೇಳನದಲ್ಲಿ ಮಂಡಿಸುವಲ್ಲಿ ವಿಫಲರಾದರು. ಅಕ್ಟೋಬರ್ 8 ರಂದು ನಡೆದ ಅಲ್ಪಸಂಖ್ಯಾತ ಉಪಸಮಿತಿ ಸಭೆಯ ತಮ್ಮ ಭಾಷಣದಲ್ಲಿ ನಿಮ್ಮ ವರ್ಗದವರಿಗೆ ಪ್ರತ್ಯೇಕ ಮತಕ್ಷೇತ್ರವನ್ನು ನೀಡುವುದಕ್ಕಾಗಿ ತಮ್ಮ ಆಕ್ಷೇಪವನ್ನು ವ್ಯಕ್ತಪಡಿಸಿ ಹೀಗಾದಲ್ಲಿ ಹಿಂದೂ ಸಮಾಜವನ್ನು ವಿಭಜಿಸಿದಂತಾಗುತ್ತದೆ ಎಂದು ತಿಳಿಸಿದರು. ಈ ಸಮಸ್ಯೆಗೆ ಪರಿಹಾರವನ್ನು ಹುಡುಕಲು ಸಾಧ್ಯವಾಗದಿದ್ದಾಗ ರ್‍ಯಾಮ್‌ಸೆ ಮ್ಯಾಕ್‌ಡೋನಾಲ್ಡ್‌ರು ಮಧ್ಯ ಪ್ರವೇಶಿಸಬೇಕಾಯಿತು. ನಿರಾಶರಾಗಿ ಭಾರತಕ್ಕೆ ಮರಳಿದ ಮಹಾತ್ಮ ಗಾಂಧಿಯವರು,

'ನಾನು ಬರಿಗೈಯಲ್ಲಿ ಹಿಂತುರುಗಿದನೆಂಬುದನ್ನು ಒಪ್ಪಿಕೊಳ್ಳುತ್ತೇನೆ. ಆದರೆ ನನ್ನ ವಶಕ್ಕೆ ಕೊಟ್ಟ ವ್ಯಾಜ್ಯಕ್ಕೆ ಯಾವ ರೀತಿಯಲ್ಲಿಯೂ ಅಪಚಾರವನ್ನು ತೆರಲಿಲ್ಲ. ಯಾವ ರೀತಿಯಲ್ಲಿಯೂ ಅದನ್ನು ನಾನು ಬಿಟ್ಟುಕೊಡಲಿಲ್ಲ ಎಂಬುದು ನನಗೆ ಸಮಾಧಾನಕರವಾಗಿದೆ' ಎಂದು ಉದ್ಗರಿಸಿದರು.

## 19.5 ತೃತೀಯ ದುಂಡು ಮೇಜಿನ ಪರಿಷತ್ತು

ಮೊದಲನೆ ಹಾಗೂ ಎರಡನೇ ದುಂಡು ಮೇಜಿನ ಸಮ್ಮೇಳನಗಳು ವಿಫಲವಾದ ಹಿನ್ನಲೆಯಲ್ಲಿ ಮೂರನೆಯ ದುಂಡು ಮೇಜಿನ ಸಮ್ಮೇಳನವನ್ನು ಲಂಡನ್ನಿನಲ್ಲಿ ಸಂಘಟಿಸಲಾಯಿತು. 1932 ನವೆಂಬರ್ 12 ರಿಂದ ಡಿಸೆಂಬರ್ 24 ರವರೆಗೆ ನಡೆದ ಈ ಸಮ್ಮೇಳನವಲ್ಲಿ ಕೇವಲ 46 ಆಹ್ವಾನಿತ ಪ್ರತಿನಿಧಿಗಳು ಭಾಗವಹಿಸಿದ್ದರು. ಕಾಂಗ್ರೆಸ್ ಮತ್ತು ಗ್ರೇಟ್ ಬ್ರಿಟನ್ನಿನ ಲೇಬರ್ ಪಕ್ಷಗಳು ಈ ಸಮ್ಮೇಳನದಿಂದ ದೂರ ಉಳಿದಿದ್ದವು. ಈ ಸಮ್ಮೇಳನದಲ್ಲಿ ಮತೀಯ ತೀರ್ಪು ಮತ್ತು ಅದರ ಪರಿಣಾಮಗಳು ಹಾಗೂ ಎರಡನೆ ಸಮ್ಮೇಳನವಲ್ಲಿ ರಚಿಸಲಾಗಿದ್ದ ಸಮಿತಿಗಳು ಮತ್ತು ಉಪಸಮಿತಿಗಳ ಕಾರ್ಯವೈಖರಿಯ ಬಗ್ಗೆ ಚರ್ಚೆಗಳನ್ನು ನಡೆಸಲಾಯಿತು. ರಾಜ್ಯಗಳು ಒಕ್ಕೂಟಕ್ಕೆ ಸೇರ್ಪಡೆಯಾಗಬೇಕು ಮತ್ತು ಉಳಿಕೆ ಅಧಿಕಾರಗಳ ಸರಿಯಾದ ಹಂಚಿಕೆಯ ವಿಷಯಗಳ ಬಗ್ಗೆ ಈ ಸಭೆಯಲ್ಲಿ ನಡೆದ ಚರ್ಚೆಯನ್ನು ಮತ್ತು ನಿರ್ಣಯಗಳನ್ನು 1935 ರ ಭಾರತ ಸರ್ಕಾರದ ಕಾಯ್ದೆಯಲ್ಲಿ ಜಾರಿಗೆ ತರಲಾಯಿತು. ಹೀಗಿದ್ದರೂ ಕೂಡಾ ಮೂರನೆಯ ದುಂಡು ಮೇಜಿನ ಸಮ್ಮೇಳನ ಯಾವುದೇ ಯಶಸ್ಸನ್ನು ಗಳಿಸಲು ವಿಫಲವಾಯಿತು. ಕೆಲವು ವಿಮರ್ಶಕರ ದೃಷ್ಟಿಯಿಂದ ಇದು ಕೇವಲ ಸರ್ಕಾರದ ಹೌದಪ್ಪಗಳ ಸಭೆಯಾಗಿ ಸಮಾಪ್ತಿಯಾಯಿತು.

## 19.6 ಘಟಕದ ಸಾರಾಂಶ

* ಭಾರತಕ್ಕೆ ಸ್ವಾತಂತ್ರ್ಯವನ್ನು ನೀಡುವುದಕ್ಕಾಗಿ ಚರ್ಚಿಸಲು ಬ್ರಿಟೀಷರು ಮೂರು ದುಂಡು ಮೇಜಿನ ಪರಿಷತ್ತುಗಳನ್ನು ನಡೆಸಿದರು.

* ಈ ಸಮ್ಮೇಳನಗಳಲ್ಲಿ ಕಾಂಗ್ರೆಸ್, ಮುಸ್ಲಿಂ ಲೀಗ್, ಎರಡೂ ಪಕ್ಷಗಳ ನಾಯಕರು, ಹಿಂದುಳಿದ ವರ್ಗಗಳ ನಾಯಕರು ಮುಂತಾದವರು ಭಾಗವಹಿಸಿದರು.

* ಗಾಂಧೀಜಿಯವರು ಚಳುವಳಿಗಳನ್ನು ನಿಲ್ಲಿಸಿದ್ದರಿಂದ ಅನೇಕ ನಾಯಕರು ಅಸಮಾಧಾನಗೊಂಡು ಹಲವು ಪಕ್ಷಗಳನ್ನು ಸ್ಥಾಪಿಸಿಕೊಂಡರು.

* ಇವೇ ಮುಂತಾದ ವಿಷಯಗಳನ್ನು ಈ ಘಟಕದಲ್ಲಿ ಅಧ್ಯಯನ ಮಾಡಿ ಅರ್ಥ ಮಾಡಿಕೊಂಡೆವು.

## 19.7 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ದುಂಡು ಮೇಜಿನ ಪರಿಷತ್ತುಗಳ ಕಾರಣ ಮತ್ತು ಪರಿಣಾಮಗಳನ್ನು ವಿವರಿಸಿ.

------------------------------------------------------------

------------------------------------------------------------

------------------------------------------------------------

------------------------------------------------------------

2. ದುಂಡು ಮೇಜಿನ ಪರಿಷತ್ತುಗಳ ಗೊತ್ತುವಳಿ ಮತ್ತು ತೀರ್ಮಾನಗಳನ್ನು ಚರ್ಚಿಸಿ.

------------------------------------------------------------

------------------------------------------------------------

------------------------------------------------------------

------------------------------------------------------------

## 19.8 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


Sumit Sarkar : Modern India

ನರೇಂದ್ರ ಪ್ರಸಾದ್ ಮತ್ತು ಇತರರು : ಭಾರತ ಸ್ವಾತಂತ್ರ್ಯ ಚಳುವಳಿ

Hansraj : History of Modern India


ಡಾ || ಎ. ಸೋಮಶೇಖರ್

# ಘಟಕ 20 ಕಮ್ಯೂನಲ್ ಅವಾರ್ಡ್ ಮತ್ತು ಪೂನಾ ಒಪ್ಪಂದ

<u>ವಿಷಯ ಸೂಚಿ</u>

## 20.0 ಉದ್ದೇಶಗಳು

ಈ ಘಟಕದಲ್ಲಿ ಭಾರತಕ್ಕೆ ಸ್ವಾತಂತ್ರ್ಯವನ್ನು ನೀಡುವ ಉದ್ದೇಶದಿಂದ ದುಂಡು ಮೇಜಿನ ಪರಿಷತ್ತುಗಳನ್ನು ಕರೆದು, ಅಲ್ಲಿ ಯಾವುದೇ ತೀರ್ಮಾನಕ್ಕೆ ಬರದೇ ಕಮ್ಯೂನಲ್ ಅವಾರ್ಡ್ ಅಥವಾ ಕೋಮು ತೀರ್ಪನ್ನು ನೀಡಿದರು ಆದರೆ ಇದಕ್ಕೆ ಬಹಳಷ್ಟು ಟೀಕೆಗಳು ಬಂದವು. ಈ ಟೀಕೆಗಳಿಗೆ ಈ ಒಪ್ಪಂದದಲ್ಲಿದ್ದ ಅನೇಕ ಶರತ್ತುಗಳು ಕಾರಣವಾಗಿವೆ. ಈ ಘಟಕದಲ್ಲಿ ಗಾಂಧೀಜಿ ಮತ್ತು ಅಂಬೇಡ್ಕರ್ ಪಾತ್ರಗಳನ್ನು ಸಹ ಚರ್ಚಿಸಲಿದ್ದೇವೆ. ಈ ಅವಾರ್ಡ್‌ನ ಪರಿಣಾಮಗಳನ್ನು ಸಹ ಪರಿಣಾಮಗಳನ್ನು ಸಹ ಅಧ್ಯಯನ ಮಾಡಲಾಗುತ್ತದೆ.

## 20.1 ಪೀಠಿಕೆ

ಭಾರತಕ್ಕೆ ಸ್ವಾತಂತ್ರ್ಯ ನೀಡಲು ಬ್ರಿಟೀಷರು, ಭಾರತೀಯರಲ್ಲಿದ್ದ ಹಲವು ಭಿನ್ನಾಭಿಪ್ರಾಯಗಳನ್ನು ನೋಡಿ ಪರಿಷತ್ತುಗಳನ್ನು ಕರೆದರು. ಹಲವು ಚರ್ಚೆಗಳನ್ನು ನಡೆಸಿದರು ಮತ್ತು ಇಲ್ಲಿ ನಿಮ್ನ ವರ್ಗಗಳು ಮತ್ತು ಅಲ್ಪಸಂಖ್ಯಾತರಿಗೆ ಒಳ್ಳೆಯದನ್ನು ಮಾಡಬೇಕು ಎಂಬ ದೃಷ್ಟಿಯಿಂದ ಈ ಕಮ್ಯುನಲ್ ಅವಾರ್ಡ್‌ನ್ನು ಜಾರಿಗೆ ತಂದು ಎಲ್ಲರ ಕಟು ಟೀಕೆಗೆ ಕಾರಣರಾದರು. ಪೂನಾ ಒಪ್ಪಂದದ ಬಗ್ಗೆಯೂ ಸಹ ಅಧ್ಯಯನ ಮಾಡಲಾಗಿದೆ. ಇವುಗಳ ವಿಸ್ತೃತ ಅಧ್ಯಯನ ಇಲ್ಲಿದೆ.

## 20.2 ಕಮ್ಯೂನಲ್ ಅವಾರ್ಡ್‌ಅಥವಾ ಕೋಮು ತೀರ್ಪು

ಗ್ರೇಟ್ ಬ್ರಿಟನ್ನಿನ ಪ್ರಧಾನ ಮಂತ್ರಿ ಸರ್ ರ್‍ಯಾಮ್‌ಸೇ ಮ್ಯಾಕ್ ಡೋನಾಲ್ಡ್‌ರವರು ಸಮ್ಮೇಳನದ ಸಮಾರೋಪ ದಿನದಂದು ಭಾರತದ ಪ್ರತಿನಿಧಿಗಳು ಯಾವುದೇ ಒಂದು ಸ್ಪಷ್ಟವಾದ ತೀರ್ಮಾನಕ್ಕೆ ಬರದುದರಿಂದ ಮತ್ತು ಎಲ್ಲರಿಗೂ ಒಪ್ಪಿಗೆಯಾಗುವಂತಹ ಒಂದು ಸೂತ್ರವನ್ನು ಕಂಡುಕೊಳ್ಳುವಲ್ಲಿ ವಿಫಲರಾದುದರಿಂದ ಸರ್ಕಾರವೇ ತನ್ನ ನಿರ್ಧಾರವನ್ನು ಪ್ರಕಟಿಸಬೇಕಾಗುತ್ತದೆ ಎಂದು ತಿಳಿಸಿ 1932ರ ಆಗಸ್ಟ್‌ನಲ್ಲಿ ತಮ್ಮ ನಿರ್ಧಾರವನ್ನು ಪ್ರಕಟಿಸಿದರು. ಇದನ್ನು ಮತೀಯ ತೀರ್ಪು ಎಂದು ಕರೆಯಲಾಗಿದೆ. ಈ ಮತೀಯ ತೀರ್ಪಿನಲ್ಲಿದ್ದ ಕೆಲವು ಮುಖ್ಯಾಂಶಗಳು ಯಾವುವೆಂದರೆ

1. ಮುಸ್ಲಿಂ, ಸಿಖ್ ಮತ್ತು ಆಂಗ್ಲೋ - ಇಂಡಿಯನ್ನರಿಗೆ ಪ್ರತ್ಯೇಕ ಮತ ಕ್ಷೇತ್ರಗಳ ಬೇಡಿಕೆಗೆ ಮನ್ನಣೆಯನ್ನು ನೀಡುವಿಕೆ.

2. ಪ್ರಾಂತೀಯ ಶಾಸನ ಸಭೆಗೆ ಮತೀಯ ಆಧಾರದ ಮೇಲೆ ಸ್ಥಾನಗಳ ಹಂಚಿಕೆಯನ್ನು ಮಾಡುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಡುವಿಕೆ. ಆದರೆ ಕೇಂದ್ರ ಶಾಸನ ಸಭೆಗೆ ಈ ರೀತಿಯ ಪ್ರಾತಿನಿಧ್ಯತೆಯನ್ನು ನೀಡದಿರುವುದು.

3. ಸ್ತ್ರೀಯರಿಗೆ ವಾಯುವ್ಯ ಪ್ರಾಂತ್ಯವನ್ನು ಹೊರತುಪಡಿಸಿ ಉಳಿದೆಲ್ಲಾ ಪ್ರಾಂತ್ಯಗಳಲ್ಲೂ ಶೇಕಡಾ 3 ರಷ್ಟು ಮೀಸಲಾತಿಯನ್ನು ನೀಡುವುದು.

4. ನಿಮ್ನ ವರ್ಗದವರನ್ನು ಅಲ್ಪ ಸಂಖ್ಯಾತರೆಂದು ಪರಿಗಣಿಸಿ ಅವರಿಗೆ ಸ್ಥಾನಗಳನ್ನು ನೀಡುವಿಕೆ. ಇವರು ಸಾಮಾನ್ಯ ಮತ್ತು ಮೀಸಲು ಮತ ಕ್ಷೇತ್ರಗಳಲ್ಲಿ ತಮ್ಮ ಮತವನ್ನು ಚಲಾಯಿಸಬಹುದಾಗಿತ್ತು.

5. ಕಾರ್ಮಿಕರು, ಜಮೀನುದಾರರು, ವಾಣಿಜ್ಯ ಮತ್ತು ವಿಶ್ವವಿದ್ಯಾನಿಲಯಗಳಿಗೆ ಚುನಾವಣಾ ಕ್ಷೇತ್ರಗಳನ್ನು ನೀಡಿ ಕೆಲವು ಸ್ಥಾನಗಳನ್ನು ನಿಗದಿಪಡಿಸುವಿಕೆ. ಮುಸ್ಲಿಮರು ಮತ್ತು ಆಂಗ್ಲೋ - ಇಂಡಿಯನ್ನರನ್ನು ಹೊರತುಪಡಿಸಿ ಉಳಿದೆಲ್ಲಾ ವರ್ಗಗಳಿಗೆ ಸಾಮಾನ್ಯ ಮತ ಕ್ಷೇತ್ರಗಳಲ್ಲಿ ಮೀಸಲಾತಿಯನ್ನು ನೀಡಲು ತೀರ್ಪು ಪರಿಗಣಿಸಲಿಲ್ಲ. ಬಂಗಾಳ ಮತ್ತು ಪಂಜಾಬ್‌ಗಳಲ್ಲಿ ಹಿಂದೂಗಳು ಅಲ್ಪಸಂಖ್ಯಾತರಾಗಿದ್ದು ಕೂಡಾ ಅವರ ಜನಸಂಖ್ಯೆಗೆ ಸಮಾನವಾದ ಸ್ಥಾನಗಳು ಹಂಚಿಕೆಯಾಗಿಲ್ಲ. ಇದೇ ರೀತಿಯಲ್ಲಿ ಪಂಜಾಬ್‌ರಲ್ಲಿ ಸಿಖ್‌ರಿಗೂ ಮತ್ತು ಬಂಗಾಳದಲ್ಲಿ ಐರೋಪ್ಯರಿಗೂ ಶಾಸನ ಸಭೆಯಲ್ಲಿ ಅಸಮರ್ಪಕ ಪ್ರಾತಿನಿಧ್ಯತೆಯನ್ನು ಕೋಮು ತೀರ್ಪಿನಲ್ಲಿ ನೀಡಲಾಯಿತು.

## 20.3 ಕೋಮು ತೀರ್ಪಿನ ವಿರುದ್ಧ ಟೀಕೆಗಳು

ಎರಡನೇ ದುಂಡು ಮೇಜಿನ ಸಮ್ಮೇಳನದಲ್ಲಿ ಹೊರಹೊಮ್ಮಿದ ಕೋಮು ತೀರ್ಪನ್ನು ಭಾರತದ ಅನೇಕ ರಾಜಕೀಯ ಪಕ್ಷಗಳ ಮುಖಂಡರು ಅದರಲ್ಲೂ ಮುಖ್ಯವಾಗಿ ಕಾಂಗ್ರೆಸ್ಸಿಗರು ತೀವ್ರವಾಗಿ ಟೀಕಿಸಿದರು. ಈ ಕೆಳಕಂಡ ಅಂಶಗಳ ಆಧಾರದ ಮೇಲೆ ಅದನ್ನು ಟೀಕಿಸಲಾಯಿತು.

1. ನಿಮ್ನ ವರ್ಗದವರನ್ನು ಹಿಂದು ಸಮಾಜದಿಂದ ಬೇರ್ಪಡಿಸಿತು.

2. ಹಿಂದೂ ವಿರೋಧಿ ಮತ್ತು ಮುಸ್ಲಿಂ ಪರವಾಗಿತ್ತು.

3. ಹಿಂದೂ ಸಮಾಜವನ್ನು ಛಿದ್ರಗೊಳಿಸಿ ರಾಷ್ಟ್ರೀಯ ಐಕ್ಯತೆಗೆ ಬಲವಾದ ಪೆಟ್ಟನ್ನು ನೀಡಿತು.

4. ಒಟ್ಟು ಜನಸಂಖ್ಯೆಯ ಶೇಕಡಾ 0.1ರಷ್ಟಿದ್ದ ಐರೋಪ್ಯರಿಗೆ ಶೇಕಡಾ 10 ರಷ್ಟು ಪ್ರಾತಿನಿಧ್ಯತೆಯನ್ನು ನೀಡಿತು.

5. ಕೋಮು ತೀರ್ಪು ಸಂಪೂರ್ಣವಾಗಿ ಪ್ರಜಾಪ್ರಭುತ್ವ ವಿರೋಧಿಯಾಗಿತ್ತು.

ಜಾತೀಯ ಮತ್ತು ಧರ್ಮದ ಆಧಾರದ ಮೇಲೆ ಪ್ರತ್ಯೇಕ ಚುನಾವಣಾ ಕ್ಷೇತ್ರಗಳನ್ನು ನೀಡಿದ್ದು ದಿನ ಕಾಲಕ್ಕೆ ಅದು ಪ್ರತಿಗಾಮಿಯಾಗಿತ್ತು ಮತ್ತು ಯಾವ ರಾಷ್ಟ್ರದಲ್ಲಿಯೂ ಈ ರೀತಿಯ ವೈರುಧ್ಯಗೊಳನ್ನೊಳಗೊಂಡ ಮೀಸಲಾತಿ ಕಾಣುವುದು ಸಾಧ್ಯವಿಲ್ಲ ಎಂಬ ಅಭಿಪ್ರಾಯವನ್ನು ಕೆಲವು ಇತಿಹಾಸಕಾರರು ವ್ಯಕ್ತಪಡಿಸಿದ್ದಾರೆ. ಕೋಮು ತೀರ್ಪು ವಿರೋಧಿಸಿದ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಮುಖಂಡರು ಇದು ಬ್ರಿಟೀಷರ ಒಡೆದು ಆಳುವ ನೀತಿಗೆ ಸಾಕ್ಷಿ ಎಂದೂ ಬಗೆದರು.

## 20.4 ಗಾಂಧೀಜಿಯವರ ಉಪವಾಸ

ಸರ್ ರ್‍ಯಾಮ್‌ಸೆ ಮ್ಯಾಕ್ ಡೊನಾಲ್ಡ್‌ರವರ ಕೋಮು ತೀರ್ಪಿನಿಂದಾಗಿ ಆಘಾತಕ್ಕೆ ಒಳಗಾದ ಮಹಾತ್ಮ ಗಾಂಧಿಯವರು ಹಿಂದು ಸಮಾಜದಿಂದ ನಿಮ್ನವರ್ಗದವರನ್ನು ಬೇರ್ಪಡಿಸಲು ಬ್ರಿಟೀಷರು ಹೂಡಿದ ಸಂಚೆಂದು ಬಗೆದು ಇದರ ವಿರುದ್ಧ ಹೋರಾಟದ ಮನೋಭಾವನೆಯನ್ನು ತಳೆದರು. ಈ ತೀರ್ಪಿನಲ್ಲಿರುವ ಪ್ರತ್ಯೇಕ ಮತದಾನ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ವಿಚಾರಗಳನ್ನು ಬದಲಾಯಿಸದಿದ್ದಲ್ಲಿ ತಾವು ಉಪವಾಸ ಸತ್ಯಾಗ್ರಹವನ್ನು ಆರಂಭಿಸುವುದಾಗಿ ಸರ್ ರ್‍ಯಾಮ್‌ಸೆ ಮ್ಯಾಕ್ ಡೊನಾಲ್ಡ್‌ರಿಗೆ ಪತ್ರ ಮುಖೇನ ತಿಳಿಸಿದರು. ತಮ್ಮ ಪತ್ರಕ್ಕೆ ಸೂಕ್ತವಾದ ಪ್ರತಿಕ್ರಿಯೆಯು ಲಭ್ಯವಾಗದಿದ್ದಾಗ ಐತಿಹಾಸಿಕ ಉಪವಾಸ ಸತ್ಯಾಗ್ರಹವನ್ನು ಪ್ರಾರಂಭಿಸಿದರು.

## 20.5 ಡಾ. ಬಿ. ಆರ್. ಅಂಬೇಡ್ಕರ್ ಮತ್ತು ಪೂನಾ ಒಪ್ಪಂದ

ಡಾ. ಭೀಮ್‌ರಾವ್ ರಾಮಜಿ ಅಂಬೇಡ್ಕರ್ ಭಾರತದ ಸ್ವಾತಂತ್ರ್ಯ ಹೋರಾಟದ ಅಗ್ರಗಣ್ಯ ನಾಯಕರಲೊಬ್ಬರು. ಇವರು ಕ್ರಿ.ಶ. 1891 ರ ಏಪ್ರಿಲ್ 14 ರಂದು ಮಧ್ಯ ಪ್ರದೇಶದ ಮ್ಹಾವ್ ಸ್ಥಳದಲ್ಲಿ ಜನಿಸಿದರು. ಇವರ ತಂದೆ ರಾಮ್‌ಜಿ ಸಕ್‌ಪಾಲ್ ಮಿಲಿಟರಿ ಹುದ್ದೆಯಲ್ಲಿದ್ದರು. ತಾಯಿ ಭೀಮಬಾಯಿ ಬೊಂಬಾಯಿ ಪ್ರಾಂತ್ಯದ ಥಾಣಾ ಜಿಲ್ಲೆಯ ಮ್ರುರ್ಬಾದ್ ಎಂಬ ವರ್ಗದವರಾಗಿದ್ದರು. ಪರಂಪರೆಯಿಂದಲೂ ಮಹರ್ ವರ್ಗದವರು ಮಿಲಿಟರಿ ಹುದ್ದೆಯನ್ನಲಂಕರಿಸಿದ್ದರು. ರಾಮ್‌ಜಿ ಸಕ್‌ಪಾಲ್‌ರಿಗೆ 14 ಮಕ್ಕಳಿದ್ದು ಕಾಲಾನಂತರ 9 ಮಕ್ಕಳು ಅಸುನೀಗಿದವು. ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ತಾಯಿಯನ್ನು ಕಳೆದುಕೊಂಡ ಅಂಬೇಡ್ಕರರು ತಮ್ಮ ತಂದೆಯ ಸೋದರಿ ಮೀರಾಬಾಯಿಯ ಪ್ರೀತಿ ಮತ್ತು ವಾತ್ಸಲ್ಯಗಳಿಂದ ಬೆಳೆದರು. ಇವರ ತಂದೆ ಮಾಂಸಾಹಾರವನ್ನು ತ್ಯಜಿಸಿದ್ದು ಕಬೀರ ಪಂಥದ ಕಟ್ಟಾ ಅನುಯಾಯಿಯಾಗಿದ್ದುದು, ಬಾಲ್ಯದಲ್ಲಿ ಇದು ಅಂಬೇಡ್ಕರ್‌ರರ ಮೇಲೆ ತನ್ನ ಅತೀವವಾದ ಪ್ರಭಾವಗಳನ್ನು ಬೀರಿತು.

ಕೊಂಕಣದ ದಾಪೋಲಿಯಲ್ಲಿ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಪಡೆದುಕೊಂಡ ನಂತರ ಸತಾರದಲ್ಲಿ ಪ್ರೌಢಶಾಲೆಗೆ ಸೇರ್ಪಡೆಯಾದರು. ಸತಾರದ ಈ ಶಾಲೆಯಲ್ಲಿದ್ದ ಅಂಬೇಡ್ಕರ್ ಎಂಬ ಹೆಸರಿನ ಉಪಾಧ್ಯಾಯರು ತ್ಮ ಪ್ರಭಾವವನ್ನು ಬಾಲಕ ಅಂಬೇಡ್ಕರ್ ಮೇಲೆ ಬೀರುವಲ್ಲಿ ತೊಡಗಿದರು. ನಂತರ ಈ ಹೆಸರ ಮುಂದೆ ಖ್ಯಾತಿಯನ್ನು ಗಳಿಸಿಕೊಂಡಿತು. ನಿಮ್ನ ವರ್ಗಕ್ಕೆ ಸೇರಿದುದರಿಂದ ಅಂಬೇಡ್ಕರ್‌ರವರು ತಮ್ಮ ವಿದ್ಯಾರ್ಥಿ ಜೀವನದಲ್ಲಿ ಅನೇಕ ಬಾರಿ ಮಾನಸಿಕ ಹಿಂಸೆಗೆ ಸಹಪಾಠಿಗಳು ಮತ್ತು ಅಧ್ಯಾಪಕರಿಂದ ಗುರಿಯಾಗಬೇಕಾಯಿತು. ಈ ರೀತಿಯ ಸನ್ನಿವೇಶಗಳಿದ್ದರೂ ಕೂಡಾ ಧೃತಿಗೆಡದೆ ತಮ್ಮ ಶಿಕ್ಷಣವನ್ನು ಪೂರೈಸಿದರು. ಅವರಿಗೆ ಸಂಸ್ಕೃತ ಭಾಷೆಯ ಅಧ್ಯಯನದಲ್ಲಿ ಆಸಕ್ತಿಯಿದ್ದರೂ ಕೂಡಾ ಬಲವಂತವಾಗಿ ಅವರನ್ನು ಪರ್ಷಿಯನ್ ಭಾಷೆ ಓದುವಂತೆ ಸನ್ನಿವೇಶಗಳು ರೂಪಿಸಿದವು. 'ಸಂಸ್ಕೃತವನ್ನು ಓದಲು ತುಂಬಾ ಉತ್ಸಾಹವು ಇದ್ದರೂ ಕೂಡ ನನ್ನ ಉಪಾಧ್ಯಯರುಗಳು ಸಂಕುಚಿತ ಮನೋಭಾವನೆಯಿಂದಾಗಿ ನಾನು ಸಂಸ್ಕೃತವನ್ನು ಕಲಿಯುವ ಪ್ರಯತ್ನವನ್ನು ಕೈಬಿಡಬೇಕಾಯಿತು' ಎಂದು ಅವರು ಹೇಳಿದ್ದಾರೆ.

ರಾಮಜಿ ಸಕ್‌ಪಾಲ್ ಬೊಂಬಾಯಿ ಪಟ್ಟಣದಲ್ಲಿ ನೆಲೆಸಿದಾಗ ಅಂಬೇಡ್ಕರರು ಎಲ್‌ಫಿನ್‌ಸ್ಟನ್ ಪ್ರೌಢಶಾಲೆಗೆ ಸೇರ್ಪಡೆಯಾದರು. 1907 ರಲ್ಲಿ ಮೆಟ್ರಿಕುಲೇಷನ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಅವರ ಕುಟುಂಬಕ್ಕೂ ಹಾಗೂ ಇಡೀ ಮಹರ್ ಜನಸಮುದಾಯಕ್ಕೂ ಇದು ಮಹತ್ತರವಾದ ವಿಷಯವಾಯಿತು. ಅವರನ್ನು ಶಾಲೆಯಲ್ಲಿ ಅಭಿನಂದಿಸಲಾಯಿತು. ತಮ್ಮ 14 ನೇ ವಯಸ್ಸಿನಲ್ಲಿ ರಮಾಬಾಯಿಯವರನ್ನು ವಿವಾಹವಾದರು. ನಂತರ ಅವರು ಎಲ್‌ಫಿನ್‌ಸ್ಟೋನ್ ಕಾಲೇಜಿಗೆ ಸೇರ್ಪಡೆಯಾದರು. ಬರೋಡದ ಮಹಾರಾಜ ಸಯ್ಯಾಜಿರಾವ್ ಗಾಯಕ್‌ವಾಡ್ ಅವರಿಗೆ ಮಾಹೆಯಾನ 20 ರೂಪಾಯಿಗಳ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಿದರು 1912 ರಲ್ಲಿ ಬಿ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದ ಅಂಬೇಡ್ಕರ್‌ರಿಗೆ ಅವರ ತಂದೆ ಸಾವು ಅಘಾತವನ್ನು ತಂದಿತು. ಬರೋಡೆಯ ಮಹಾರಾಜರು ಅಂಬೇಡ್ಕರ್‌ರರನ್ನು ತಮ್ಮ ಸರ್ಕಾರದಲ್ಲಿ ಸೇವೆಯನ್ನು ಸಲ್ಲಿಸುವಂತೆ ಆಹ್ವಾನಿಸಿದಾಗ ಒಪ್ಪಿಕೊಂಡ ಅವರು ತಮ್ಮ ಕಾರ್ಯವನ್ನು ಪ್ರಾರಂಭಿಸಿದರು.

ಅಂಬೇಡ್ಕರರು ಬರೋಡೆಯ ಸೇವೆಯನ್ನು ಸೇರಿದುದು ಸಾಂಪ್ರದಾಯಿಕ ಮೇಲುವರ್ಗದವರಿಗೆ ನುಂಗಲಾರದ ತುತ್ತಾಯಿತು. ಕಛೇರಿಯ ಜವಾನರು ಇವರನ್ನು ಕಡೆಗಣಿಸಿದರು. ಇದರಿಂದಾಗಿ ರೋಸಿ ಹೋದ ಅವರು ತಮ್ಮ ಹುದ್ದೆಗೆ ರಾಜೀನಾಮೆ ನೀಡಿದರು. 1912 ರ ಜೂನ್ ತಿಂಗಳ 4 ರಂದು ಬರೋಡೆಯ ಮಹಾರಾಜರು ನೀಡಿದ ವಿದ್ಯಾರ್ಥಿ ವೇತನವನ್ನು ಪಡೆದುಕೊಂಡು ಅಮೇರಿಕಾ ಸಂಯುಕ್ತ ಸಂಸ್ಥಾನದ ಕೊಲಂಬಿಯಾ ವಿಶ್ವವಿದ್ಯಾನಿಲಯಕ್ಕೆ ಪ್ರವೇಶ ಪಡೆದುಕೊಂಡು, ಗಾಯಕ್‌ವಾಡ್ ಶಿಷ್ಯವೇತನವನ್ನು ಪಡೆದುಕೊಂಡ ಪ್ರಥಮ ಮಹರ್ ಎಂಬ ಖ್ಯಾತಿಯನ್ನು ಗಳಿಸಿದರು. ಕೊಲಂಬಿಯಾದಲ್ಲಿ ಅಂಬೇಡ್ಕರ್‌ರವರು ತಮ್ಮ ದೃಷ್ಟಿಕೋನವನ್ನು ವಿಶಾಲಗೊಳಿಸಿಕೊಂಡರು. ಪ್ರೊ. ಇ.ಆರ್.ಎ. ಸೆಲಿಗ್‌ಮ್ಯಾನ್ ಇವರು ನೆಚ್ಚಿನ ಉಪಾಧ್ಯಾಯರು ಮತ್ತು ಮಾರ್ಗದರ್ಶಕರಾದರು. ಪ್ರಸಿದ್ಧ ರಾಷ್ಟ್ರೀಯವಾದಿಯಾಗಿದ್ದ ಲಾಲ ಲಜಪತ್‌ರಾಯ್‌ರವರ ಸ್ನೇಹವೂ ದೊರೆಯಿತು. ಅವರೊಂದಿಗೆ ರಾಷ್ಟ್ರೀಯ ಸಮಸ್ಯೆಗಳ ಬಗ್ಗೆ ಚರ್ಚೆಯನ್ನು ನಡೆಸಿದರು. 'ಪ್ರಾಚೀನ ಭಾರತದಲ್ಲಿನ ವಾಣಿಜ್ಯ' ಎಂಬ ಪ್ರಬಂಧವನ್ನು 1915 ರಲ್ಲಿ ಮಂಡಿಸಿ ಎಂ.ಎ. ಪದವಿಯನ್ನು ಪಡೆದುಕೊಂಡರು. 1916 ರ ಮೇ ತಿಂಗಳಿನಲ್ಲಿ ಮಾನವ ಶಾಸ್ತ್ರಕ್ಕೆ ಸಂಬಂಧಿಸಿದಂತೆ "CASTES IN INDIA. THEIR MECHANISM. GENESIS AND DEVELOPMENT" ಎಂಬ ಸಂಶೋಧನಾ ಲೇಖನವನ್ನು ಮಂಡಿಸಿ ವಿದ್ವಾಂಸ ಮೆಚ್ಚುಗೆಗೆ ಪಾತ್ರರಾದರು. ಅದೇ ವರ್ಷ ಜೂನ್ ತಿಂಗಳಿನಲ್ಲಿ 'NATIONAL DIVIDEND OF INDIA - A HISTORIC AND ANALYTICAL STUDY' ಎಂಬ ಪ್ರೌಢ ಪ್ರಬಂಧವನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಶೀಲರಾದರು. ಈ ಪ್ರೌಢಬಂಧವನ್ನು ಪುರಸ್ಕರಿಸಿದ ಕೊಲಂಬಿಯಾ ವಿಶ್ವವಿದ್ಯಾನಿಲಯವು ಅವರಿಗೆ ಡಾಕ್ಟರ್ ಆಫ್ ಫಿಲಾಸಫಿ (ಪಿ. ಹೆಚ್. ಡಿ) ಪದವಿಯನ್ನು ನೀಡಿತು. 1924ರಲ್ಲಿ ಇದು 'THE EVOLUTION OF PROVINCIAL FINANCE IN INDIA' ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಯಿತು. ಈ ಪುಸ್ತಕವನ್ನು ಡಾ. ಅಂಬೇಡ್ಕರ್‌ರು ಬರೋಡೆಯ ಮಹಾರಾಜರಿಗೆ ಅರ್ಪಿಸಿದರು. 1916 ರ ಅಕ್ಟೋಬರ್‌ನಲ್ಲಿ ಅವರು ಲಂಡನ್ನಿನ ಗ್ರೇಸ್ ಇನ್ ಫಾರ್ ಲಾ ಮತ್ತು ಅರ್ಥಶಾಸ್ತ್ರದ ವಿದ್ಯಾರ್ಥಿಯಾಗಿ 'ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಮತ್ತು ಪೊಲಿಟಿಕಲ್ ಸೈನ್ಸ್'ಗೆ ಸೇರ್ಪಡೆಯಾದರು. ಡಿ.ಎಸ್ಸಿ. ಪದವಿಗೆ ತಯಾರಿಯನ್ನು ನಡೆಸಿದಾಗ ಅನಿರೀಕ್ಷಿತವಾಗಿ ವಿದ್ಯಾರ್ಥಿ ವೇತನವು ಸ್ಥಗಿತಗೊಂಡಿದುದರಿಂದ ಭಾರತಕ್ಕೆ ಹಿಂತಿರುಗಿದರು.

1917 ರಲ್ಲಿ ಭಾರತಕ್ಕೆ ಮರಳಿದ ಡಾ. ಅಂಬೇಡ್ಕರ್‌ರರು ಬರೋಡೆಯ ಮಹಾರಾಜರ ಮಿಲಿಟರಿ ಕಾರ್ಯದರ್ಶಿಯಾಗಿ ನೇಮಕಗೊಂಡರು. ನಿಮ್ನ ವರ್ಗಕ್ಕೆ ಸೇರಿದರೆಂಬ ಕಾರಣದಿಂದಾಗಿ ಅವರನ್ನು ತುಚ್ಛವಾಗಿ ಕಾಣಲಾಯಿತು. ಈ ವಿಚಾರವನ್ನು ಅವರು ಬರೋಡೆಯ ದಿವನಾರಲ್ಲಿ ಪ್ರಸ್ತಾಪಿಸಿದಾಗ, ದಿವಾನರು ಈ ನಿಟ್ಟಿನಲ್ಲಿ ತಾವು ಅಸಹಾಯಕರು ಎಂದು ತಿಳಿಸಿದರು. ಇದರಿಂದ ಬೇಸತ್ತ ಅವರು ತಮ್ಮ ಹುದ್ದೆಗೆ ರಾಜೀನಾಮೆಯನ್ನು ಸಲ್ಲಿಸಿ ಬೊಂಬಾಯಿ ನಗರಕ್ಕೆ ಹಿಂದಿರುಗಿದರು. ವ್ಯಪಾರವನ್ನು ಪ್ರಾರಂಭಿಸಿದ ಅವರು ಇಬ್ಬರು ವಿದ್ಯಾರ್ಥಿಗಳಿಗೆ ಪಾಠವನ್ನು ಹೇಳಿಕೊಡುವ ಕಾರ್ಯವನ್ನು ಆರಂಭಿಸಿದರು. 1918ರಲ್ಲಿ ಬೊಂಬಾಯಿಯ ಸಿಡೆನ್ ಹ್ಯಾಮ್ ಕಾಲೇಜಿನಲ್ಲಿ ರಾಜಕೀಯ ಅರ್ಥಶಾಸ್ತ್ರದ ಪ್ರಾಧ್ಯಾಪಕರಾಗಿ ನೇಮಕಗೊಂಡು ಬಹುಬೇಗನೆ ಉತ್ತಮ ಪ್ರಾಧ್ಯಾಪಕನೆಂಬ ಹೆಸರನ್ನು ಗಳಿಸಿದರು. ಆದರೆ ಇಲ್ಲಿಯೂ ಅಸ್ಪೃಶ್ಯತೆಯ ಸೋಂಕು ಇದ್ದುದರಿಂದ 1920 ರ ಮಾರ್ಚ್ ತಿಂಗಳಿನಲ್ಲಿ ತಮ್ಮ ಹುದ್ದೆಗೆ ರಾಜೀನಾಮೆಯನ್ನು ನೀಡಿ ತಾವು ಅಪೂರ್ಣಗೊಳಿಸಿದ ಅಧ್ಯಯನವನ್ನು ಅಧ್ಯಯನವನ್ನು ಮುಂದುವರಿಸಲು ಕೊಲ್ಲಾಪುರ ಮಹಾರಾಜರ ಶಿಷ್ಯವೇತನವನ್ನು ಪಡೆದು ಲಂಡನ್ನಿಗೆ ಮರಳಿದರು.

ಭಾರತದಲ್ಲಿದ್ದಾಗ 1920 ರ ಜನವರಿ 31 ರಂದು ಮೂಕ್‌ನಾಯಕ್ ಎಂಬ ವಾರಪತ್ರಿಕೆಯನ್ನು ದಲಿತರ ಹೋರಾಟಕ್ಕೆ ಪ್ರಾರಂಭಿಸಿದರು. ಇದಕ್ಕೆ ಕೊಲ್ಲಾಪುದರ ಸಾಹು ಮಹಾರಾಜರು 1 ಸಾವಿರ ರೂಪಾಯಿಗಳನ್ನು ದೇಣಿಗೆಯಾಗಿ ನೀಡಿದ್ದರು. ಇದೇ ರೀತಿಯಲ್ಲಿ ಮಹಾರಾಜರು 1919 ಮತ್ತು 1920 ರಲ್ಲಿ ಕ್ರಮವಾಗಿ ನಾಗಪೂರ ಮತ್ತು ಕೊಲ್ಲಾಪುರದಲ್ಲಿ ಸಂಘಟಿಸಿದ ನಿಮ್ನ ವರ್ಗದವರ ಸಮ್ಮೇಳನಗಳ ಅಧ್ಯಕ್ಷತೆಯಲ್ಲಿ ವಹಿಸಿದ್ದರು. ಈ ಸಮ್ಮೇಳನಗಳು ಮತ್ತು ಪತ್ರಿಕೆಗಳು ಡಾ. ಬಿ.ಆರ್. ಅಂಬೇಡ್ಕರ್‌ರವರ ಭವಿಷ್ಯದ ಹಾದಿಯನ್ನು ರೂಪಿಸುವಲ್ಲಿ ಯಶಸ್ವಿಯಾದವು. ಆರ್ಥಿಕ ಮುಗ್ಗಟ್ಟಿನ ಪರಿಸ್ಥಿತಿಗಳು ಲಂಡನ್ನಿನಲ್ಲಿ ಲಭ್ಯವಿದ್ದರೂ ಕೂಡಾ ಧೃತಿಗೆಡದೆ ಡಾ. ಅಂಬೇಡ್ಕರ್‌ರರು 1921ರ ಜೂನ್ ತಿಂಗಳಿನಲ್ಲಿ ತಾವು ಲಂಡನ್ ವಿಶ್ವವಿದ್ಯಾನಿಲಯಕ್ಕೆ ಅರ್ಪಿಸುದ 'PROVINCIAL DECENTRALIZATION OF IMPERIAL FINANCE IN BRITISH INDIA' ಎಂಬ ಪ್ರೌಢ ಪ್ರಬಂಧಕ್ಕೆ ಮಾಸ್ಟರ್ ಆಫ್ ಸೈನ್ಸ್ ಪದವಿಯನ್ನು ಪಡೆದುಕೊಂಡರು. 1922 ರ ಅಕ್ಟೋಬರ್ ತಿಂಗಳಿನಲ್ಲಿ ತಮ್ಮ ಅಮೂಲ್ಯವಾದ ಪ್ರಬಂಧ 'THE PROBLEM OF INDIAN RUPEE' ವನ್ನು ಲಂಡನ್ ವಿಶ್ವವಿದ್ಯಾನಿಲಯಕ್ಕೆ ಅರ್ಪಿಸಿ ಜರ್ಮನಿಯ ಬಾನ್ ವಿಶ್ವವಿದ್ಯಾನಿಲಯಕ್ಕೆ ಪ್ರಯಾಣ ಬೆಳೆಸಿದರು. ಆದರೆ ಇದನ್ನು ಲಂಡನ್ ವಿಶ್ವವಿದ್ಯಾನಿಲಯಕ್ಕೆ ಅರ್ಪಿಸಿ ಜರ್ಮನಿಯ ಬಾನ್ ವಿಶ್ವವಿದ್ಯಾನಿಲಯಕ್ಕೆ ಪ್ರಯಾಣ ಬೆಳೆಸಿದರು. ಆದರೆ ಇದನ್ನು ಲಂಡನ್ ವಿಶ್ವವಿದ್ಯಾನಿಲಯಕ್ಕೆ ಡಾಕ್ಟರ್ ಆಫ್ ಸೈನ್ಸ್ ಪದವಿಯನ್ನು ಗಳಿಸಿಕೊಂಡರು. ಈ ಪ್ರಂಬಂಧವನ್ನು 1923 ರಲ್ಲಿ ಲಂಡನ್ನಿನ ಪಿ.ಎಸ್. ಕಿಂಗ್ ಎಂಡ್ ಕಂಪನಿ ಎಂಬ ಪ್ರಕಾಶನ ಸಂಸ್ಥೆಯು ಪ್ರಕಟಿಸಿತು. ಲಂಡನ್ನಿನಲ್ಲಿದ್ದಾಗ ಅವರು ಭಾರದ ವ್ಯವಹಾರಗಳ ಕಾರ್ಯದರ್ಶಿಯಾಗಿದ್ದ ಮಾಂಟೆಗ್ಯೂ ಮತ್ತು ಸರ್ದಾರ್ ವಲ್ಲಭಭಾಯಿ ಪಟೇಲರೊಡನೆ ಭಾರತದಲ್ಲಿನ ನಿಮ್ನ ವರ್ಗದವರ ಬಗ್ಗೆ ಚರ್ಚಿಸಿದರು.

1923ರಲ್ಲಿ ಡಾ. ಅಂಬೇಡ್ಕರ್ ಬೊಂಬಾಯಿಯ ಹೈಕೋರ್ಟ್‌ನಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದರು. ಇವರನ್ನು ಬಡಪಾಯಿ ಬ್ಯಾರಿಸ್ಟರ್ ಎಂದೂ ಗೇಲಿ ಮಾಡಲಾಗುತ್ತಿತ್ತು. ದಲಿತರಾದುದರಿಂದ ಇವರ ಬಳಿ ಯಾವ ಪ್ರಕರಣಗಳೂ ಬರುತ್ತಿರಲಿಲ್ಲ. ಜೀವನ ನಿರ್ವಹಣೆಯು ಕಷ್ಟವಾದಾಗ ಹಣಕಾಸಿನ ಸಂಸ್ಥೆಯೊಂದರಲ್ಲಿ ಅರೆಕಾಲಿಕ ವಾಣಿಜ್ಯ ಶಾಸ್ತ್ರದ ಪ್ರಾಧ್ಯಾಪಕರಾಗಿಯೂ ಕಾರ್ಯವನ್ನು ನಿರ್ವಹಿಸಿದರು. ನಿಮ್ನ ವರ್ಗದವರ ಸಮ್ಮೇಳವನ್ನು ಸಂಘಟಿಸುವುದರ ಮೂಲಕ ಬಹಿಷ್ಕೃತಹಿತಕಾರಿಣಿ ಸಭೆಯನ್ನು 1924 ರಲ್ಲಿ ಚಿಮನ್ ಸೆತಲ್‌ವಾಡ್‌ರೊಂದಿಗೆ ಪ್ರಾರಂಭಿಸಿದರು. ನಿಮ್ನ ವರ್ಗವನ್ನು ಸುಶಿಕ್ಷಿತಗೊಳಿಸಿ ಅವರ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವುದು ಇವರ ಉದ್ದೇಶಗಳಾಗಿದ್ದವು.

ಎಲ್‌ಫಿನಸ್ಟೋನ್ ಕಾಲೇಜಿನ ಪ್ರಾಧ್ಯಾಪಕರ ಹುದ್ದೆ ಮತ್ತು ಕೊಲ್ಹಾಪುರ ರಾಜ್ಯದಲ್ಲಿನ ಮಂತ್ರಿಯ ಹುದ್ದೆಯನ್ನು ತಿರಸ್ಕರಿಸಿದ ಅವರು ಸಾಮಾಜಿಕ ಕಾರ್ಯಗಳಲ್ಲಿ ತಮ್ಮ ಕಾಲವನ್ನು ತೊಡಗಿಸಿಕೊಳ್ಳಲು ನಿರ್ಧರಿಸಿದರು. 1927 ರ ಏಪ್ರಿಲ್ ತಿಂಗಳ 3 ರಂದು ಬಹಿಷ್ಕೃತ ಭಾರತ ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು. ಕಾಲಕ್ರಮೇಣ ಇದು ದೀನ ದಲಿತರ ಧ್ವನಿಯಾಯಿತು. ದೇವಾಲಯಗಳಿಗೆ ದಲಿತರಿಗೆ ಪ್ರವೇಶ ನೀಡಬೇಕೆಂದು ಮತ್ತು ಅವರಿಗೆ ಕೆರೆ ಮತ್ತು ಬಾವಿಗಳ ನೀರನ್ನು ಉಪಯೋಗಿಸುವ ಅವಕಾಶವನ್ನು

ಕಲ್ಪಿಸಿಕೊಡಬೇಕೆಂದು ಪತ್ರಿಕೆಯ ಮೂಲಕ ಪ್ರತಿಪಾದಿಸಿದ ಡಾ. ಅಂಬೇಡ್ಕರ್‌ರವರು ಕೊಲಾಬಾ ಜಿಲ್ಲೆಯ ಮಹಾಡ್ ಎಂಬ ಸ್ಥಳದಲ್ಲಿ ಚರಿತ್ರಾರ್ಹ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಈ ಸತ್ಯಾಗ್ರಹದ ಮೂಲಕ ದೇಶದ ಗಮನವನ್ನು ಸೆಳೆದ ಡಾ. ಅಂಬೇಡ್ಕರ್‌ರನ್ನು ಸರ್ಕಾರವು 1927ರಲ್ಲಿ ಬೊಂಬಾಯಿಯ ಲೈಜಿಸ್ಲೇಟಿವ್ ಕೌನ್ಸಿಲ್‌ಗೆ ನಾಮಕರಣ ಮಾಡಿತು. ಹಿಂದುಳಿದ ಮತ್ತು ದಲಿತ ವರ್ಗದವರಿಗೆ ಶಿಕ್ಷಣವನ್ನು ನೀಡುವ ದೃಷ್ಟಿಯಿಂದ ಅನೇಕ ಶೈಕ್ಷಣಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. 1928 ರಲ್ಲಿ ಬೊಂಬಾಯಿಯ ಸರ್ಕಾರಿ ಕಾನೂನು ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ನೇಮಕಗೊಂಡು ಬಹುಬೇಗನೆ ವಿದ್ಯಾರ್ಥಿ ಸಮೂಹದ ಮೆಚ್ಚುಗೆಯನ್ನು ಗಳಿಸುವಲ್ಲಿ ಯಶಸ್ವಿಯಾದರು. ಸೈಮನ್ ಆಯೋಗದ ಬಹಿಷ್ಕಾರದ ಹಿನ್ನೆಲೆಯಲ್ಲಿನ ಪ್ರಕ್ಷುಬ್ಧ ರಾಜಕೀಯ ಪರಿಸ್ಥಿತಿಯಲ್ಲಿಯೂ ವಿಚಲಿತರಾಗದೆ ನಿಮ್ನ ವರ್ಗದ ಪರವಾಗಿ ಆಯೋಗದ ಮುಂದೆ ಸಾಕ್ಷ್ಯಾಧಾರಗಳನ್ನು ನೀಡಿದರು.

1930ರಲ್ಲಿ ಲಂಡನ್ ಸಂಘಟಿಸಲ್ಪಟ್ಟ ಮೊದಲನೆ ದುಂಡು ಮೇಜಿನ ಸಮ್ಮೇಳನದಲ್ಲಿ ನಿಮ್ನ ವರ್ಗದವರ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಕಾಂಗ್ರೆಸ್ ಪಕ್ಷವು ಈ ಸಮ್ಮೇಳನವನ್ನು ಬಹಿಷ್ಕರಿಸಿತು. ಎರಡನೇ ದುಂಡು ಮೇಜಿನ ಸಮ್ಮೇಳನವು ಕಾಂಗ್ರೆಸ್ಸಿನ ಸದಸ್ಯರನ್ನೊಳಗೊಂಡಿದ್ದರೂ ಕೂಡಾ ನಿಮ್ನ ವರ್ಗದವರಿಗೆ ಪ್ರತ್ಯೇಕ ಮತಕ್ಷೇತ್ರಗಳನ್ನು ನೀಡಬೇಕು ಅಥವಾ ಬೇಡವೇ ಎಂಬ ವಿಚಾರದಲ್ಲಿ ಚರ್ಚೆಯನ್ನು ನಡೆಸಲು ವಿಫಲವಾಯಿತು. ಕಾಂಗ್ರೆಸ್ಸಿನ ಪ್ರತಿನಿಧಿಯಾಗಿದ್ದ ಮಹಾತ್ಮ ಗಾಂಧಿಯವರು ಸಮ್ಮೇಳನದಲ್ಲಿ ಅಸ್ಪೃಶ್ಯರ ನಾಯಕತ್ವದ ಹಕ್ಕನ್ನು ಪ್ರತಿಪಾದಿಸಿದರೂ ಕೂಡಾ ಇದನ್ನು ವಿರೋಧಿಸಿದ ಡಾ. ಬಿ.ಆರ್. ಅಂಬೇಡ್ಕರ್‌ರರು ಸರ್ಕಾರವು ಈ ವಿಷಯಕ್ಕೆ ಸಂಬಂಧಿಸಿದಂತೆ ಒಂದು ನಿಲುವನ್ನು ಸ್ಪಷ್ಟಪಡಿಸಬೇಕೆಂದು ಆಗ್ರಹಿಸಿದರು. ಹೀಗಾಗಿ ಯಾವುದೇ ಸ್ಪಷ್ಟವಾದ ನಿರ್ಧಾರವನ್ನು ಕೈಗೊಳ್ಳಲಾರದೆ ಎರಡನೆ ದುಂಡು ಮೇಜಿನ ಸಮ್ಮೇಳನ ವಿಫಲವಾಯಿತು. 1932ರ ಆಗಸ್ಟ್ ತಿಂಗಳಿನಲ್ಲಿ ಹೊರಬಂದ ರ್‍ಯಾಮ್‌ಸೆ ಮ್ಯಾಕ್‌ಡೊನಾಲ್ಡ್‌ರ ಮತೀಯ ತೀರ್ಪು ನಿಮ್ನ ವರ್ಗದವರಿಗೆ ಪ್ರತ್ಯೇಕ ಮತಕ್ಷೇತ್ರವನ್ನು ನೀಡಲು ಒಪ್ಪಿಕೊಂಡಿದ್ದು, ಅಸ್ಪೃಶ್ಯರನ್ನು ಹಿಂದೂ ಸಮಾಜದಿಂದ ಇದು ಸಂಪೂರ್ಣವಾಗಿ ಬೇರ್ಪಡಿಸಿ ವರ್ಣಾಶ್ರಮ ಧರ್ಮವನ್ನು ಎತ್ತಿ ಹಿಡಿಯುತ್ತದೆ ಎಂದು ಅರ್ಥೈಸಿದ ಮಹಾತ್ಮ ಗಾಂಧಿಯವರು ತಮ್ಮ ಚರಿತ್ರಾರ್ಹ ಉಪವಾಸ ಸತ್ಯಾಗ್ರಹವನ್ನು ಆರಂಭಿಸಿದರು.

ನಿಮ್ನ ವರ್ಗದವರಿಗೆ ಪ್ರತ್ಯೇಕ ಮತಕ್ಷೇತ್ರವನ್ನು ಸಂಧಾನಗಳ ಮೂಲಕ ದೊರಕಿಸಿಕೊಳ್ಳಬೇಕೆಂಬುದು ಡಾ. ಅಂಬೇಡ್ಕರ್‌ರವರ ಧೃಡ ನಿಲುವಾಗಿತ್ತು. ಪರಿಸ್ಥಿತಿಯನ್ನು ತಿಳಿಗೊಳಿಸುವ ಉದ್ದೇಶದಿಂದ ತೇಜ್ ಬಹದ್ದೂರ್ ಸಪ್ರು, ಎಂ.ಆರ್. ಜಯಕರ ಮತ್ತು ಪಂಡಿತ ಮದನ ಮೋಹನ ಮಾಳವೀಯರ ಮಧ್ಯಸ್ಥಿಕೆಯಿಂದ ಡಾ. ಬಿ.ಆರ್. ಅಂಬೇಡ್ಕರ್‌ರವರು ಕಾಂಗ್ರೆಸ್ಸಿನ ಮುಖಂಡರೊಂದಿಗೆ 1932 ಸೆಪ್ಟೆಂಬರ್ 24 ರಂದು ಪೂನಾ ಒಪ್ಪಂದವನ್ನು ಮಾಡಿಕೊಂಡರು.

## 20.6 ಪೂನಾ ಒಪ್ಪಂದ

ಆಧುನಿಕ ಭಾರತದ ಇತಿಹಾಸದಲ್ಲಿ ಪೂನಾ ಒಪ್ಪಂದವು ಐತಿಹಾಸಿಕ ಒಪ್ಪಂದವೆಂಬ ಹೆಸರನ್ನು ಗಳಿಸಿಕೊಂಡಿದೆ. ದಲಿತ ವರ್ಗದವರಿಗೆ ಪ್ರತ್ಯೇಕ ಚುನಾವಣಾ ಕ್ಷೇತ್ರಗಳನ್ನು ನೀಡಬೇಕೆ ಬೇಡವೇ ಎಂಬ ವಿಷಯದಲ್ಲಿ ಉದ್ಭವಿಸಿದ ಜಿಜ್ಞಾಸೆಯಿಂದ ಮೂಡಿ ಬಂದಿದೆ ಈ ಚರಿತ್ರಾರ್ಹ ಪೂನಾ ಒಪ್ಪಂದ. ಈ ವಿಷಯದಲ್ಲಿ ಮತಭೇದವನ್ನು ಹೊಂದಿದ ಮಹಾತ್ಮ ಗಾಂಧಿಯವರು ಆಮರಣಾಂತ ಉಪವಾಸ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ತಮ್ಮ ಉಪವಾಸದ ಕಾಲದಲ್ಲಿ ನಡೆದ ಚರ್ಚೆಯಲ್ಲಿ ಪ್ರತ್ಯೇಕ ಮತಕ್ಷೇತ್ರಗಳ ಬದಲಿಗೆ ಪರ್ಯಾಯವಾದ ಸೂಚನೆಗಳನ್ನು ನೀಡಿದ ಮಹಾತ್ಮ ಗಾಂಧಿಯವರ ನಿರ್ಧಾರವನ್ನು ವಿರೋಧಿಸಿದ ಡಾ. ಅಂಬೇಡ್ಕರ್‌ರವರು ಪುಣೆಯ ಯರವಾಡ ಸೆರೆಮನೆಯಲ್ಲಿ ಗಾಂಧೀಜಿಯವರನ್ನು ಭೇಟಿ ಮಾಡಿದರು. ಸಿ. ರಾಜಗೋಪಾಲಚಾರಿ, ಡಾ. ರಾಜೇಂದ್ರ ಪ್ರಸಾದ್ ಮೊದಲಾದ ಮುಖಂಡರು ಇಬ್ಬರ ನಡುವೆ ರಾಜೀ ಸೂತ್ರವನ್ನು ಕಲ್ಪಿಸುವ ಪ್ರಯತ್ನಗಳನ್ನು ನಡೆಸಲು ವಿಫಲರಾದರು. ಹೀಗಾಗಿ ಸಮಸ್ಯೆಯು ಮತ್ತಷ್ಟು ಜಟಿಲಗೊಂಡಿತು. ಸಮಸ್ಯೆಯನ್ನು ಪರಿಹರಿಸುವ ಗಾಂಧಿಯವರ ಸಮ್ಮುಖದಲ್ಲಿ ಕೈಗೊಂಡ ಈ ತೀರ್ಮಾನಕ್ಕೆ ಡಾ. ಅಂಬೇಡ್ಕರ್‌ರರು ನಿಮ್ನ ವರ್ಗದವರ ಪರವಾಗಿ ಮತ್ತು ಪಂಡಿತ ಮದನ ಮೋಹನ ಮಾಳವೀಯ ಸವರ್ಣೀಯ ಹಿಂದೂಗಳ ಪರವಾಗಿಯೂ ಸಹಿ ಹಾಕಿದರು. ಎಂ.ಆರ್. ಜಯಕರ್, ತೇಜ್ ಬಹದ್ದೂರ್ ಸಪ್ರು, ಜಿ.ಡಿ. ಬಿರ್ಲಾ, ಚಕ್ರವರ್ತಿ ರಾಜಗೋಪಾಲಚಾರಿ, ಡಾ. ರಾಜೇಂದ್ರ ಪ್ರಸಾದ್, ಎಂ.ಸಿ. ರಾಜಾ, ದೇವದಾಸ ಗಾಂಧಿ ಮೊದಲಾದವರು ಸಹಿ ಹಾಕಿದರು.

## 20.7 ಪೂನಾ ಒಪ್ಪಂದ ಕರಾರುಗಳು

ಪೂನಾ ಒಪ್ಪಂದದ ಕರಾರುಗಳು ಈ ಕೆಳಗಿನಂತಿದ್ದವು

1. ಈ ಒಪ್ಪಂದದ ಪ್ರಕಾರ ಮಹಾತ್ಮ ಗಾಂಧಿ ಮತ್ತು ಡಾ. ಬಿ.ಆರ್. ಅಂಬೇಡ್ಕರ್‌ರವರು ಜಂಟಿ ಚುನಾವಣಾ ಕ್ಷೇತ್ರವನ್ನು ಉಳಿಸಿಕೊಳ್ಳಲು ಒಪ್ಪಿಕೊಂಡರು. ಕೋಮು ವರ್ಗದಲ್ಲಿ ನಿಮ್ನ ವರ್ಗದವರಿಗೆ ಕೇವಲ 71 ಸ್ಥಾನಗಳನ್ನು ಕಾಯ್ದಿರಿಸಲಾಗಿದ್ದರೂ ಕೂಡಾ ಒಪ್ಪಂದದಿಂದಾಗಿ ಇವುಗಳ ಸ್ಥಾನ ಸಂಖ್ಯೆಯನ್ನು 148 ಕ್ಕೆ ಏರಿಸಲಾಯಿತು.

2. ಕೇಂದ್ರ ಶಾಸಕಾಂಗದಲ್ಲಿ ಶೇಕಡ 20 ರಷ್ಟು ಸ್ಥಾನಗಳನ್ನು ದಲಿತರಿಗೆ ಮೀಸಲಾಗಿಡಲಾಯಿತು.

3. ದಲಿತರು ಸಾಮಾನ್ಯ ಕ್ಷೇತ್ರಗಳಲ್ಲಿ ತಮ್ಮ ಹೆಸರನ್ನು ನೊಂದಿಯಿಸಿಕೊಳ್ಳುವಂತಾಯಿತು.

4. ದಲಿತರು ಸಾಮಾನ್ಯ ಕ್ಷೇತ್ರಗಳಲ್ಲಿ ತಮ್ಮ ಹೆಸರನ್ನು ನೊಂದಾಯಿಸಿಕೊಳ್ಳುವಂತಾಯಿತು.

5. ನಿಮ್ನ ವರ್ಗದವರಿಗೆ ವಿದ್ಯಾಭ್ಯಾಸವನ್ನು ಇತರರಿಗೆ ಕಲ್ಪಿಸುವಂತಹ ರೀತಿಯಲ್ಲಿಯೇ ಆರ್ಥಿಕ ನರವನ್ನು ನೀಡುವಂತಾಯಿತು.

ಮಹಾತ್ಮಾ ಗಾಂಧಿಯವರು ಈ ಒಪ್ಪಂದದಿಂದಾಗಿ ಅಧಿಕ ಸಂಖ್ಯೆಯಲ್ಲಿ ಹಿಂದೂ ಸಮಾಜದಿಂದ ದಲಿತರು ಹೊರಹೋಗುವುದನ್ನು ತಪ್ಪಿಸಿ ಹಿಂದೂ ಸಮಾಜವೂ ಇಬ್ಭಾಗವಾಗುವ ದುರಂತದಿಂದ ರಕ್ಷಿಸಿದರು.

## 20.8 ತೃತೀಯ ದುಂಡು ಮೇಜಿನ ಪರಿಷತ್ತು

ಮೊದಲನೆ ಹಾಗೂ ಎರಡನೆ ದುಂಡು ಮೇಜಿನ ಸಮ್ಮೇಳನಗಳು ವಿಫಲವಾದ ಹಿನ್ನೆಲೆಯಲ್ಲಿ ಮೂರನೆಯ ದುಂಡು ಮೇಜಿನ ಸಮ್ಮೇಳನವನ್ನು ಲಂಡನ್ನಿನಲ್ಲಿ ಸಂಘಟಿಸಲಾಯಿತು. 1932 ನವೆಂಬರ್ 12 ರಿಂದ ಡಿಸೆಂಬರ್ 24 ರವರೆಗೆ ನಡೆದ ಈ ಸಮ್ಮೇಳನದಲ್ಲಿ ಕೇವಲ 46 ಆಹ್ವಾನಿತ ಪ್ರತಿನಿಧಿಗಳು ಭಾಗವಹಿಸಿದ್ದರು. ಕಾಂಗ್ರೆಸ್ ಮತ್ತು ಗ್ರೇಟ್ ಬ್ರಿಟನ್ನಿನ ಲೇಬರ್ ಪಕ್ಷಗಳು ಈ ಸಮ್ಮೇಳನದಿಂದ ದೂರ ಉಳಿದಿದ್ದವು. ಈ ಸಮ್ಮೇಳನದಲ್ಲಿ ಮತೀಯ ತೀರ್ಪು ಮತ್ತು ಅದರ ಪರಿಣಾಮಗಳು ಹಾಗೂ ಎರಡನೆ ಸಮ್ಮೇಳನದಲ್ಲಿ ಕೇವಲ 46 ಆಹ್ವಾನಿತ ಪ್ರತಿನಿಧಿಗಳು ಭಾಗವಹಿಸಿದ್ದರು. ಕಾಂಗ್ರೆಸ್ ಮತ್ತು ಗ್ರೇಟ್ ಬ್ರಿಟನ್ನಿನ ಲೇಬರ್ ಪಕ್ಷಗಳು ಈ ಸಮ್ಮೇಳನದಿಂದ ದೂರ ಉಳಿದಿದ್ದವು. ಈ ಸಮ್ಮೇಳನದಲ್ಲಿ ಮತೀಯ ತೀರ್ಪು ಮತ್ತು ಅದರ ಪರಿಣಾಮಗಳು ಹಾಗೂ ಎರಡನೆ ಸಮ್ಮೇಳನದಲ್ಲಿ ರಚಿಸಲಾಗಿದ್ದ ಸಮಿತಿಗಳು ಮತ್ತು ಉಪಸಮಿತಿಗಳು ಕಾರ್ಯವೈಖರಿಯ ಬಗ್ಗೆ ಚರ್ಚೆಗಳನ್ನು ನಡೆಸಲಾಯಿತು. ರಾಜ್ಯಗಳು ಒಕ್ಕೂಟಕ್ಕೆ ಸೇರ್ಪಡೆಯಾಗಬೇಕು ಮತ್ತು ಉಳಿಕೆ ಅಧಿಕಾರಗಳ ಸರಿಯಾದ ಹಂಚಿಕೆಯ ವಿಷಯಗಳ ಬಗ್ಗೆ ಈ ಸಭೆಯಲ್ಲಿ ನಡೆದ ಚರ್ಚೆಯನ್ನು ಮತ್ತು ನಿರ್ಣಯಗಳನ್ನು 1935 ರ ಭಾರದ ಸರ್ಕಾರದ ಕಾಯ್ದೆಯಲ್ಲಿ ಜಾರಿಗೆ ತರಲಾಯಿತು. ಹೀಗಿದ್ದರೂ ಕೂಡಾ ಮೂರನೆಯ ದುಂಡು ಮೇಜಿನ ಸಮ್ಮೇಳನ ಯಾವುದೇ ಯಶಸ್ಸನ್ನು ಗಳಿಸಲು ವಿಫಲವಾಯಿತು. ಕೆಲವು ವಿಮರ್ಶಕರ ದೃಷ್ಟಿಯಿಂದ ಇದು ಕೇವಲ ಸರ್ಕಾರದ ಹೌದಪ್ಪಗಳ ಸಭೆಯಾಗಿ ಸಮಾಪ್ತಿಯಾಯಿತು.

## 20.9 ಅಂಬೇಡ್ಕರ್ ಹೋರಾಟ

ಸರ್ಕಾರದ ಜಂಟಿ ಪಾರ್ಲಿಮೆಂಟರಿ ಸಮಿತಿಯ ಸದಸ್ಯರಾಗಿ ಕಾರ್ಯ ನಿರ್ವಹಿಸಿ ಮೂರನೆಯ ದುಂಡು ಮೇಜಿನ ಸಮ್ಮೇಳನದಲ್ಲಿ ಭಾಗವಹಿಸಿದ್ದ ಡಾ. ಅಂಬೇಡ್ಕರ್‌ರವರು 1935ರಲ್ಲಿ ಬೊಂಬಾಯಿಯ ಸರ್ಕಾರಿ ಕಾನೂನು ಕಾಲೇಜಿನ ಪ್ರಾಧ್ಯಾಪಕರಾಗಿ ನೇಮಕಗೊಂಡರು. 1935 ರ ಅಕ್ಟೋಬರ್ ತಿಂಗಳಿನಲ್ಲಿ ನಾಸಿಕ್ ಜಿಲ್ಲೆಯಲ್ಲಿ ಸಂಘಟಿಸಲ್ಪಟ್ಟ ನಿಮ್ನ ವರ್ಗದವರ ಸಮ್ಮೇಳನದ ತಮ್ಮ ಅಧ್ಯಕ್ಷ ಭಾಷಣದಲ್ಲಿ ಹಿಂದೂ ಧರ್ಮವನ್ನು ತ್ಯಜಿಸುವ ನಿರ್ಧಾರವನ್ನು ಪ್ರಕಟಿಸಿದ ಅವರು,

'ನಾನು ಹಿಂದುವಾಗಿ ಹುಟ್ಟಿದೆ, ಆದರೆ ಹಿಂದು ಆಗಿ ಸಾಯಲಾರೆ' ಎಂದು ಹೇಳಿದರು. 1936ರಲ್ಲಿ ನಡೆದ ಬೊಂಬಾಯಿ ಪ್ರಾಂತ್ಯದ ಮಹರ್ ಜನಾಂಗದವರ ಸಮ್ಮೇಳನದಲ್ಲಿ ಮಹರ್‌ರಿಗೆ ಹಿಂದೂ ಧರ್ಮವನ್ನು ತ್ಯಜಿಸುವಂತೆ ಕರೆ ನೀಡಿದರು.

1935 ರ ಭಾರತ ಸರ್ಕಾರ ಕಾಯ್ದೆಯ ಪ್ರಕಾರ ಚುನಾವಣೆಯನ್ನು ಎದುರಿಸುವ ಮತ್ತು ನಿಮ್ನ ವರ್ಗದವರ ಹಿತಾಸಕ್ತಿಯನ್ನು ಕಾಪಾಡುವ ಉದ್ದೇಶದಿಂದ ಸ್ವತಂತ್ರ ಕಾರ್ಮಿಕ ಪಕ್ಷವನ್ನು ಸ್ಥಾಪಿಸಿದರು. ಬೊಂಬಾಯಿಯ ಶಾಸಕಾಂಗದ ಚುನಾವಣೆಯಲ್ಲಿ ಸ್ಪರ್ಧಿಸಿದ್ದ 17 ಸ್ಥಾನಗಳನ್ನು 13 ಪಕ್ಷಗಳನ್ನು ಗೆದ್ದುಕೊಂಡ ಡಾ. ಅಂಬೇಡ್ಕರ್‌ರವರ ಪಕ್ಷವು ಬೊಂಬಾಯಿ ಪ್ರಾಂತೀಯ ಶಾಸಕಾಂಗದಲ್ಲಿ ವಿರೋಧ ಪಕ್ಷದ ಸ್ಥಾನವನ್ನು ಗೆದ್ದುಕೊಂಡು ಡಾ. ಅಂಬೇಡ್ಕರ್‌ರವರ ಪಕ್ಷವು ಬೊಂಬಾಯಿ ಪ್ರಾಂತೀಯ ಶಾಸಕಾಂಗದಲ್ಲಿವಿರೋಧ ಪಕ್ಷದ ಸ್ಥಾನವನ್ನು ಗಳಿಸಿಕೊಂಡಿತು. 1937 ರಲ್ಲಿ ಮಹರ್ ವತನ್ ಮಸೂದೆಯನ್ನು ರದ್ದುಪಡಿಸುವ ಉದ್ದೇಶದಿಂದ ಶಾಸನ ಸಭೆಯಲ್ಲಿ ಮತ್ತೊಂದು ಮಸೂದೆಯನ್ನು ಮಂಡಿಸಿದರು. ಸರ್ಕಾರವು ಶಾಸನ ಸಭೆಯಲ್ಲಿ 1938 ರಲ್ಲಿ ಅಸ್ಪೃಶ್ಯರ ಹೆಸರನ್ನು ವಿರೋಧಿಸಿದ ಅವರು ಬರಿ ಹೆಸರಿನ ಬದಲಾವಣೆಯಿಂದ ಅವರ ಸ್ಥಿತಿಗತಿಗಳು ಬದಲಾಗುವುದಿಲ್ಲವೆಂದು ತಿಳಿಸಿದರು.

1942ರಲ್ಲಿ ಅವರನ್ನು ಗವರ್ನರ್ ಜನರಲ್ಲದ ಕಾರ್ಯಕಾರಿ ಮಂಡಳಿಗೆ ಕಾರ್ಮಿಕ ಸದಸ್ಯರಾಗಿ ನಾಮಕರಣ ಮಾಡಲಾಯಿತು. ಈ ಹುದ್ದೆಯನ್ನು ಅವರು 1946 ರ ವರೆಗೆ ಅಲಂಕರಿಸಿದ್ದರು. 1946 ರ ಸೆಪ್ಟೆಂಬರ್‌ನಲ್ಲಿ ಲಂಡನ್ನಿಗೆ ಭೇಟಿ ನೀಡಿ ಸ್ವಾತಂತ್ರ್ಯಾ ನಂತರ ಸಂವಿಧಾನದಲ್ಲಿ ನಿಮ್ನ ವರ್ಗದವರಿಗೆ ವಿಶೇಷ ಸವಲತ್ತುಗಳನ್ನು ನೀಡುವ ಬಗ್ಗೆ ಚರ್ಚೆಗಳನ್ನು ನಡೆಸಿದರು. ಈ ಸಮಯದಲ್ಲಿ "WHO ARE THE SUDRAS" ಎಂಬ ಪುಸ್ತಕವನ್ನು ಪ್ರಕಟಿಸಿದರು. 1946 ರಲ್ಲಿ ಸಂವಿಧಾವ ರಚನಾ ಸಮಿತಿಗೆ ಬಂಗಾಳ ಪ್ರಾಂತ್ಯದಿಂದ ಆಯ್ಕೆಯಾಗಿ ಏಕೀಕೃತ ಭಾರತದ ನಿರ್ಮಾಣಕ್ಕೆ ಸಮಿತಿಯ ಸಭೆಯಲ್ಲಿ ಕರೆ ನೀಡಿದರು. 1947 ರ ಆಗಸ್ಟ್ ತಿಂಗಳಿನಲ್ಲಿ ಸಂವಿಧಾನ ರಚನೆಯ ಕರಡು ಸಮಿತಿಯ ಅಧ್ಯಕ್ಷರನ್ನಾಗಿ ಅವರನ್ನು ಆಯ್ಕೆ ಮಾಡಲಾಯಿತು. ತಮ್ಮ ಆಯ್ಕೆಯನ್ನು ಸಂಪೂರ್ಣವಾಗಿ ಸಮರ್ಥಿಸಿಕೊಂಡ ಡಾ. ಅಂಬೇಡ್ಕರ್‌ರರು ಸಂವಿಧಾನದ ರೂಪು ರೇಷೆಗಳನ್ನು ನಿರೂಪಿಸಿದರು. ಆಳವಾದ ಅಧ್ಯಯನ, ವಿಚಾರ ಪರಿಪೂರ್ಣತೆ ಮತ್ತು ಸಂವಿಧಾನ ಸಮಸ್ಯೆಗಳನ್ನು ಬಗೆಹರಿಸುವ ಅವರ ರೀತಿ ನೀತಿಗಳು ಜನರ ಮೆಚ್ಚುಗೆಯನ್ನುಗಳಿಸುವಲ್ಲಿ ಯಶಸ್ವಿಯಾಯಿತು. ಸಂವಿಧಾನದ ಕರಡನ್ನು ಸಿದ್ಧಪಡಿಸುವ ಯತ್ನದಲ್ಲಿ ತಮ್ಮ ವಿದ್ವತ್ ಪ್ರೌಢಿಮೆ, ಪ್ರತಿಭೆ, ತರ್ಕ ಮತ್ತು ಅನುಭವಗಳನ್ನು ಧಾರೆ ಎರೆದರು. ಹೀಗಾಗಿ ಅವರನ್ನು ಸ್ವತಂತ್ರ ಭಾರತದ ಸಂವಿಧಾನ ಶಿಲ್ಪಿ ಎಂದೂ ಕರೆಯಲಾಗಿದೆ.

1951ರ ಆಗಸ್ಟ್ ತಿಂಗಳಿನಲ್ಲಿ ರಚನೆಯಾದ ಸ್ವತಂತ್ರ ಭಾರತದ ಮೊದಲನೆ ಮಂತ್ರಿ ಮಂಡಲದ ಕಾನೂನು ಸಚಿವರಾಗಿ ನೇಮಕಗೊಂಡರು. 1951ರ ಸೆಪ್ಟೆಂಬರ್ ತಿಂಗಳಿನಲ್ಲಿ ಜವಹರಲಾಲ್ ನೆಹರೂರವರ ಸರ್ಕಾರವು ಹಿಂದುಳಿದ ಮತ್ತು ನಿಮ್ನ ವರ್ಗದವರನ್ನು ಕಡೆಗಣಿಸುತ್ತಿದೆ ಎಂದು ಮತ್ತು ಕಾಶ್ಮೀರದ ವಿಷಯದಲ್ಲಿ ಹಾಗೂ ಹಿಂದೂ ಸಂಹಿತೆಯ ಸಂಬಂಧದಲ್ಲಿ ಕಂಡು ಬಂದ ಭಿನ್ನಾಭಿಪ್ರಾಯಗಳ ಹಿನ್ನೆಲಿಯಲ್ಲಿ ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿದರು. 1952ರಲ್ಲಿ ರಾಜ್ಯ ಸಭೆಗೆ ಆಯ್ಕೆಯಾದರು. ಅಮೆರಿಕಾ ಸಂಯುಕ್ತ ಸಂಸ್ಥಾನದ ಕೊಲಂಬಿಯಾ ವಿಶ್ವವಿದ್ಯಾನಿಲಯವು ಭಾರತದ ಸಂವಿಧಾನದ ರಚನೆಯಲ್ಲಿ ಡಾ. ಬಿ. ಆರ್. ಅಂಬೇಡ್ಕರ್‌ರು ವಹಿಸಿದ ಪಾತ್ರವನ್ನು ಪರಿಗಣಿಸಿ ತನ್ನ ಎಲ್.ಎಲ್. ಡಿ. ಪದವಿಯನ್ನು ನೀಡಿ ಗೌರವಿಸಿತು. 1955 ರಲ್ಲಿ ಬೊಂಬಾಯಿ ರಾಜ್ಯದ ಕನಿಷ್ಠ ಗೋವಾ ಕಾಮಗಾರ ಸಂಘವನ್ನು ಸ್ಥಾಪಿಸಿದರು. ಇದೇ ವರ್ಷದ ಡಿಸೆಂಬರ್‌ನಲ್ಲಿ THOUGHTS ON LINGUISTIC STATES' ಎಂಬ ಪುಸ್ತಕವನ್ನು ಪ್ರಕಟಿಸಿದರು.

ತಮ್ಮ ಜೀವನದ ಅಂತಿಮ ವರ್ಷಗಳಲ್ಲಿ ಹಿಂದೂ ಧರ್ಮದ ಬಗೆಗಿದ್ದ ತಮ್ಮ ಕೊಂಚ ಒಲವನ್ನು ಬೌದ್ಧಧರ್ಮದೆಡೆಗೆ ಹರಿಸಿದರು. 1949 ರಲ್ಲಿಯೆ ನೇಪಾಳದ ರಾಜಧಾನಿ ಕಟ್ಮುಂಡುವಿನಲ್ಲಿ ಸಂಘಟಿಸಲ್ಪಟ್ಟಿದ್ದ ವಿಶ್ವಬೌದ್ಧ ಧರ್ಮೀಯರ ಸಮ್ಮೇಳನದಲ್ಲಿ ಭಾಗವಹಿಸಿದ್ದ ಅವರು MARXISM V/S BUDDISM' ಎಂಬ ಪ್ರಬಂಧವನ್ನು ಮಂಡಿಸಿದ್ದರು. ಇದೇ ರೀತಿಯಲ್ಲಿ ಬರ್ಮಾದ ರಂಗೂನ್‌ನಲ್ಲಿ 1954ರಲ್ಲಿ ನಡೆದ ಸಮ್ಮೇಳನದಲ್ಲಿ ಪಾಲ್ಗೊಂಡಿದ್ದರು. 1951 ರ ಅಕ್ಟೋಬರ್ 14 ರಂದು ನಾಗಪುರದ ಐತಿಹಾಸಿಕ ಧಾರ್ಮಿಕ ಸಮಾರಂಭದಲ್ಲಿ ಬೌದ್ಧ ಧರ್ಮವನ್ನು ತಮ್ಮ ಅಸಂಖ್ಯಾತ ಬೆಂಬಲಿಗರೊಡನೆ ಸ್ವೀಕರಿಸಿದರು. ಈ ಸಮಾರಂಭದಲ್ಲಿ

ಅವರನ್ನು ನವ ಬೌದ್ಧರು ಎಂದು ಸ್ವಾಗತಿಸಲಾಯಿತು. ಭಾರತದ ನಿಮ್ನ ವರ್ಗದವರ ಆಶಾಕಿರಣವಾಗಿದ್ದ ಡಾ. ಬಿ. ಆರ್. ಅಂಬೇಡ್ಕರ್‌ರವರು 1956 ರ ಡಿಸೆಂಬರ್ ತಿಂಗಳ 6 ರಂದು ಮರಣ ಹೊಂದಿದರು.

## 20.10 ಘಟಕದ ಸಾರಾಂಶ

ಈ ಘಟಕದ ಅಧ್ಯಯನದಿಂದ ನಾವು

* ಕಮ್ಯುನಲ್ ಅವಾರ್ಡ್ ಮತ್ತು ಪೂನಾ ಒಪ್ಪಂದವನ್ನು ಕುರಿತು ಅರ್ಥಮಾಡಿಕೊಂಡೆವು.

* ಈ ಸೌಲಭ್ಯವನ್ನು ದೊರಕಿಸುವ ಮುನ್ನ ಬ್ರಿಟೀಷರು ಎಲ್ಲಾ ವರ್ಗದ ನಾಯಕರು ಮತ್ತು ಪಕ್ಷಗಳನ್ನು ದುಂಡು ಮೇಜಿನ ಪರಿಷತ್ತುಗಳಿಗೆ ಆಹ್ವಾನಿಸಿ, ಗಾಂಧಿ - ಇರ್ವಿನ್ ಒಪ್ಪಂದ ಇವುಗಳನ್ನೆಲ್ಲಾ ನಡೆಸಿದ ನಂತರ ಅವರು ಈ ಕೋಮು ತೀರ್ಪು ಕೊಟ್ಟರು.

* ಈ ತೀರ್ಪುಗಳಿಗೆ ಸಾಕಷ್ಟು ವಿರೋಧ ಟೀಕೆಗಳು ವ್ಯಕ್ತವಾದರು ಸಹ, ಭಾರತಕ್ಕೆ ಸ್ವಾತಂತ್ರ್ಯ ತರುವ ಹಿದಾಯಲ್ಲಿ ಈ ಘಟನೆ ಮತ್ತು ಪೂನಾ ಒಪ್ಪಂದಗಳು ಬಹಳ ಪ್ರಮುಖ ಘಟ್ಟಗಳಾಗಿದ್ದವೆಂಬುದು ತಿಳಿಯಲಾಯಿತು.

* ಇನ್ನು ಗಾಂಧಿ ಮತ್ತು ಅಂಬೇಡ್ಕರ್‌ರವರ ಮುಖ್ಯ ಪಾತ್ರಗಳು ಸಹ ಮತ್ತು ಅವರುಗಳ ಹೃದಯದಿಂದ ಬಂದಂತಹ ಅಭಿಪ್ರಾಯಗಳನ್ನು ಸಹ ತಿಳಿಯಲಾಯಿತು.

## 20.11 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಕಮ್ಯುನಲ್ ಅವಾರ್ಡ್ ಮತ್ತು ಪೂನಾ ಒಪ್ಪಂದವನ್ನು ವಿಮರ್ಶಾತ್ಮಕವಾಗಿ ತಿಳಿಸಿ.

--------------------------------------------------------------------------------

--------------------------------------------------------------------------------

--------------------------------------------------------------------------------

--------------------------------------------------------------------------------

2. ಕೋಮು ತೀರ್ಪು ಮತ್ತು ಪೂನಾ ಒಪ್ಪಂದಗಳ ಗುಣಾವಗುಣಗಳನ್ನು ಚರ್ಚಿಸಿ.

--------------------------------------------------------------------------------

--------------------------------------------------------------------------------

--------------------------------------------------------------------------------

--------------------------------------------------------------------------------

## 20.12 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು

1. Sumit Sarkar : Modern India

2. ನರೇಂದ್ರ ಪ್ರಸಾದ್ ಮತ್ತು ಇತರರ : ಭಾರತ ಸ್ವಾತಂತ್ರ್ಯ ಚಳುವಳಿ

ಡಾ. ಎ. ಸೋಮಶೇಖರ್

# ಘಟಕ 21 -1935 ಭಾರತೀಯ ಸರ್ಕಾರದ ಕಾಯ್ದೆಯ ಕಾರ್ಯಗಳು

ವಿಷಯಸೂಚಿ

## 21.0 ಉದ್ದೇಶಗಳು

* ಈ ಘಟಕ 21 ರಲ್ಲಿ ಭಾರತದಲ್ಲಿ ಜಾರಿಗೆ ತಂದಂತಹ 1935 ಭಾರತ ಸರ್ಕಾರದ ಕಾಯ್ದೆ ಮತ್ತು ಅದರ ಕಾರ್ಯಗಳ ಬಗ್ಗೆ ತಿಳಿಯಲಾಗುವುದು.

* ಇದೇ ಕಾಯ್ದೆಯು ಮುಂದೆ ಭಾರತದ ಸಂವಿಧಾನದ ರಚನೆಯಲ್ಲಿ ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆದುದನ್ನು ತಿಳಿಯಲಿದ್ದೇವೆ.

* ಈ ಕಾಯ್ದೆಯಲ್ಲಿ ಏನು ನಿಬಂಧನೆಗಳಿದ್ದವು ಮತ್ತು ರಾಷ್ಟ್ರದ ಆಡಳಿತಕ್ಕೆ ಯಾವ ರೀತಿ ಪ್ರೋತ್ಸಾಹ ನೀಡಿದವು ಎಂಬುದನ್ನು ತಿಳಿಯುತ್ತೇವೆ.

* ಈ ಕಾಯ್ದೆಯ ಪ್ರಕಾರ ಒಕ್ಕೂಟ ವ್ಯವಸ್ಥೆ ಮತ್ತು ಪ್ರಾಂತೀಯ ಸ್ವಾಯತ್ತತೆಗಳು ಹೇಗೆ ಕಾರ್ಯ ನಿರ್ವಹಿಸಿದ್ದವು ಎಂಬದನ್ನು ತಿಳಿಯಲಾಗುವುದು.

* ಕಾರ್ಯಾಂಗದ ಚಟುವಟಿಕೆ ರಾಜಕೀಯ ಪ್ರತಿಕ್ರಿಯೆ ಮತ್ತು ಒಕ್ಕೂಟದ ಯೋಜನೆಯ ವೈಫಲ್ಯ ಮುಂತಾದವುಗಳನ್ನು ಇಲ್ಲಿ ತಿಳಿಯಲಾಗುವುದು.

## 21.1 ಪೀಠಿಕೆ

1919 ರ ಕಾಯ್ದೆಗೆ ತಿದ್ದುಪಡಿತಂದು ಬ್ರಿಟಿಷ್ ಸರ್ಕಾರವು ಭಾರತಕ್ಕೆ ಒಂದು ಪ್ರಮುಖವಾದ 1935ರ ಭಾರತದ ಕಾಯ್ದೆಯನ್ನು ಜಾರಿಗೆ ತಂದಿತು. ಈ ಕಾಯ್ದೆಯಲ್ಲಿ ಒಕ್ಕೂಟ ಸ್ಥಾಪನೆ ಹಾಗೂ ಪ್ರಾಂತೀಯ ಸ್ವಾಯತ್ತತೆಗಳಿಗೆ ಅವಕಾಶ ನೀಡಲಾಗಿದ್ದು, ಇವುಗಳನ್ನು ಭಾರತೀಯರು ಹೇಗೆ ಉಪಯೋಗಿಸಿಕೊಂಡರು ಮತ್ತು ಈ ಕಾಯ್ದೆಯು ಯಾವರೀತಿಯಲ್ಲಿ ಕಾರ್ಯ ನಿರ್ವಹಿಸಿತು ಎಂಬುದರ ಬಗ್ಗೆ ಸುಧೀರ್ಘವಾದ ಅಧ್ಯಯನ ಮಾಡಲಾಗುತ್ತದೆ. ಇದರ ಕಾರ್ಯಗಳು ಇದರ ಬಗ್ಗೆ ಟೀಕೆಗಳು ಮತ್ತು ಮುಂದೆ ಇದೇ ರಾಜ್ಯಾಂಗದ ರಚನೆಗೆ ಪ್ರಮುಖ ಅಡಿಪಾಯ ಹಾಕಿದುದನ್ನು ತಿಳಿಯಲಾಗುವುದು.

## 21.2 1935 ರ ಭಾರತೀಯ ಸರ್ಕಾರದ ಕಾಯಿದೆ

ಕಾನೂನು ಭಂಗ ಚಳುವಳಿಯು ಯಥಾ ಪ್ರಕಾರ ಮುಂದುವರಿಯಿತು. ಆದರೆ ಇದರಿಂದ ಸಂವಿಧಾನ ರೂಪಿಸುವ ಸಮಸ್ಯೆಯ ಕುರಿತು ಬ್ರಿಟಿಷ್ ಸರ್ಕಾರದ ಮೇಲೆ ಪ್ರತ್ಯಕ್ಷ ಪರಿಣಾಮ ಬೀರಲಾಗಲಿಲ್ಲ. 1932ನವಂಬರ್ -ದಶಂಬರದಲ್ಲಿ ಸುಮಾರು ಆರು ವಾರಗಳ ಕಾಲ ಮೂರನೆಯ ದುಂಡು ಮೇಜಿನ ಸಮ್ಮೇಳನವು ನಡೆಯಿತು. ಆದರೆ ಅದರಲ್ಲಿ ಕೇವಲ 46ಮಂದಿ ಪ್ರತಿನಿಧಿಗಳು ಭಾಗವಹಿಸಿದ್ದರು. ಕಾಂಗ್ರೆಸಿನ ಕಡೆಯಿಂದಂತೂ ಯಾರೂ ಭಾಗವಹಿಸಿರಲಿಲ್ಲ. ಮೂರು ಬಾರಿ ನಡೆದ ದುಂಜು ಮೇಜಿನ ಸಮ್ಮೇಳನಗಳ ಪರಿಣಾಮವಾಗಿ ಹೊಸ ಸಂವಿಧಾನದ ಸ್ಥೂಲ ಚೌಕಟ್ಟು ನಿರ್ಮಾಣವಾಗಿ ಬಳಿಕ ಅದಕ್ಕೆ ಅಂತಿಮ ಸ್ವರೂಪ ನೀಡಲಾಯಿತು.

ಬ್ರಿಟಿಷ್ ಸರಕಾರವು ದುಂಡು ಮೇಜಿನ ಸಮ್ಮೇಳನದ ಪ್ರಸ್ತಾವಗಳನ್ನು ಒಂದೆಡೆ ಸೇರಿಸಿ ಒಂದು ಶ್ವೇತಪತ್ರವನ್ನು ಸಿದ್ಧಪಡಿಸಿತು. ಸಂಸತ್ತಿನ ಉಭಯ ಸದನಗಳ ಒಂದು ಸಂಯುಕ್ತ ಸಮಿತಿಯು ಈ ಶ್ವೇತಪತ್ರದ ಪ್ರಸ್ತಾವಗಳನ್ನು ಪರೀಕ್ಷಿಸಿತು. ಈ ಸಮಿತಿಯ ವರದಿ ಮತ್ತು ಶ್ವೇತಪತ್ರ ಇವೆರಡು 1935ರ ಭಾರತ ಸರ್ಕಾರದ ಕಾಯಿದೆಗೆ ಮೂಲಾಧಾರವಾದವು.

1919 ರ ಕಾಯ್ದೆಯನ್ನು 10 ವರ್ಷಗಳ ನಂತರ ಪರಿಶೀಲಿಸಬಹುದು ಎಂಬ ನೆಪ ಹಾಗೂ ಭಾರತೀಯ ಸ್ವಾತಂತ್ರ್ಯ ಹೋರಾಟದ ಫಲವಾಗಿ ಬ್ರಿಟಿಷರು ಈ 1935 ರ ಕಾಯ್ದೆಯನ್ನು ಜಾರಿಗೆ ತಂದರು. ಇದು ಹಲವಾರು ನಿಬಂಧನೆಗಳನ್ನು ಹೊಂದಿದ್ದು 14 ಭಾಗಗಳನ್ನು, 10 ಪಟ್ಟಿಗಳನ್ನು ಮತ್ತು 451 ಆರ್ಟಿಕಲ್ (ಕಾಲಮು) ಗಳನ್ನು ಹೊಂದಿದ್ದು, ಭಾರತೀಯ ಒಕ್ಕೂಟ ಮತ್ತು ಪ್ರಾಂತೀಯ ಸ್ವಾಯತ್ತತೆಗೆ ಅವಕಾಶ ನೀಡಲಾಗಿತ್ತು.

## 21.3 ಒಕ್ಕೂಟ ಯೋಜನೆ

1935ರ ಕಾಯಿದೆಯ ಎರಡು ಮುಖ್ಯ ಭಾಗಗಳಲ್ಲಿ ಒಂದು, ಪ್ರಾಂತೀಯ ಸ್ವಾಯತ್ತೆಗೂ ಇನ್ನೊಂದು ಭಾರತದ ಒಕ್ಕೂಟಕ್ಕೂ ಸಂಬಂಧಪಟ್ಟಿತ್ತು.

ಈ ಕಾಯಿದೆಯ ಪ್ರಕಾರ ಭಾರತದ ಒಕ್ಕೂಟದ ಕಲ್ಪನೆ ಹೀಗಿತ್ತು: (1) ಗವರ್ನರರ ಪ್ರಾಂತಗಳು. (2) ಭಾರತದ ರಾಜ್ಯಗಳು ಮತ್ತು (3) ಮುಖ್ಯ ಕಮಿಷನರರುಗಳ ಪ್ರಾಂತಗಳು. ಈ ಮೂರು ಬಗೆಯ ಪ್ರಾಂತಗಳನ್ನೊಳಗೊಂಡ ಭಾರತ ಒಕ್ಕೂಟ (ಫೆಡರೇಷನ್ ಆಫ್ ಇಂಡಿಯಾ) ಇರತಕ್ಕದ್ದು. ಗವರ್ನರ್ ಜನರಲ್ ಬ್ರಿಟಿಷ್ ಚಕ್ರವರ್ತಿಯ ಪ್ರತಿನಿಧಿಯಾಗಿ ಈ ಒಕ್ಕೂಟದ ಆಡಳಿತ ಅಧಿಕಾರಯಾಗಿರಬೇಕು. ಆತನು ಮಂತ್ರಿಮಂಡಲದ ಸಹಾಯ ಮತ್ತು ಸಲಹೆ ಪಡೆದು ಕಾರ್ಯಪ್ರವೃತ್ತನಾಗಬೇಕು. ಈ ಮಂತ್ರಿಮಂಡಲವನ್ನು ಆತನೇ ನೇಮಿಸಬೇಕು. ಆತನಿಗೆ ಇಷ್ಟವಿದ್ದಷ್ಟು ಕಾಲ ಮಂತ್ರಿಮಂಡಲವು ಅಧಿಕಾರದಲ್ಲಿರುವುದು. ಆದರೆ ಕೆಲವು ವಿಷಯಗಳಲ್ಲಿ ತನ್ನ "ವಿವೇಚನೆ"ಯನ್ನು ಉಪಯೋಗಿಸಬೇಕಾಗಿತ್ತು. ಇನ್ನು ಕೆಲವು ವಿಷಯಗಳಲ್ಲಿ ತನ್ನ "ವೈಯಕ್ತಿಕ ತೀರ್ಪ"ನ್ನು ನೀಡಬೇಕಾಗಿತ್ತು. ಮೊದಲನೆಯ ಸಂದರ್ಭದಲ್ಲಿ (ವಿವೇಚನೆ) ಆತನಿಗೆ ಮಂತ್ರಿಗಳ ಸಲಹೆ ಪಡೆಯದೆ ಮುಂದುವರಿಯಲು ಅಧಿಕಾರವಿತ್ತು. ಎರಡನೆಯ ಸನ್ನಿವೇಶದಲ್ಲಿ 9 ವೈಯಕ್ತಿಕ ತೀರ್ಪು)ಮಂತ್ರಿಗಳೊಂದಿಗೆ ಸಮಾಲೋಜನೆ ಮಾಡಬೇಕಿತ್ತು. ಆದರೆ ಅವರ ಸಲಹೆಯನ್ನು ಒಪ್ಪಲೇಬೇಕಾಗಿರಲಿಲ್ಲ. ಇಷ್ಟು ಮಾತ್ರವಲ್ಲದೆ ರಕ್ಷಣೆ, ಮತೀಯ ವ್ಯವಹಾರಗಳು, ವಿದೇಶ ಸಂಬಂಧ ಮತ್ತು ಆದಿವಾಸ ಜನರ ವ್ಯವಹಾರಗಳು ಈ ನಾಲ್ಕು ವಿಷಯಗಳನ್ನು ಆತನೇ ನೋಡಿಕೊಳ್ಳಬೇಕಾಗಿತ್ತು.

ಒಕ್ಕೂಟದ ಶಾಸಕಾಂಗದಲ್ಲಿ (ಫೆಡರಲ್ ಲೆಜಿಸ್ಲೇಚರ್)ಎರಡು ಶಾಸನ ಸಭೆಗಳು ಇರಬೇಕಾಗಿತ್ತು. ಅವುಗಳೆಂದರೆ (1) ರಾಜ್ಯ ಸಭೆ ಅಥವಾ ಮೇಲ್ಮನೆ (ಕೌನ್ಸಿಲ್ ಆಫ್ ಸ್ಟೇಟ್ಸ್): ಇದರ ಸದಸ್ಯರ ಸಂಖ್ಯೆ ಇನ್ನೂರೈವತ್ತು : (2) ಸಭಾಸದನ ಅಥವಾ ಕೆಳಮನೆ (ಫೆಜರಲ್ ಆಸೆಂಬ್ಲಿ): ಅದರ ಸದಸ್ಯರ ಸಂಖ್ಯೆ ಮುನ್ನೂರ ಎಪ್ಪತ್ತೈದು. ಬ್ರಿಟಿಷ್ ಭಾರತೀಯ ಪ್ರಾಂತಗಳಲ್ಲಿ ಚುನಾವಣಾ ಪದ್ಧತಿಯು ಬಹಳ ಜಟಿಲವಾಗಿತ್ತು. ಅದರ ಮುಖ್ಯ ಲಕ್ಷಣವೆಂದರೆ "ಪ್ರತ್ಯೇಕ ಮತದಾರ ಕ್ಷೇತ್ರಗಳು".

ಒಕ್ಕೂಟ ಮತ್ತು ಅದರ ಘಟಕಗಳ ನಡುವೆ ಶಾಸನದ ಹಕ್ಕುಗಳನ್ನು ಮೂರು ಯಾದಿಗಳಲ್ಲಿ ವಿಂಗಡಿಸಲಾಗಿತ್ತು. ಒಕ್ಕೂಟದ ಶಾಸಕಾಂಗಕ್ಕೆ ಒಂದನೇ ಯಾದಿಯಲ್ಲಿ ಕಾಣಿಸಲಾದ ವಿಷಯಗಳ ಮೇಲೆ 9ರಕ್ಷಣೆ, ವಿದೇಶ ವ್ಯವಹಾರ, ರೈಲ್ವೆ ಇತ್ಯಾದಿ) ಕಾನೂನುಗಳನ್ನು ರೂಪಿಸಲು ವಿಶಿಷ್ಟ ಅಧಿಕಾರವಿರುವುದು. ಪ್ರಾಂತೀಯ ಶಾಸಕಾಂಗಗಳಿಗೆ ಎರಡನೇ ಯಾದಿಯಲ್ಲಿ ಕಾಣಿಸಲಾದ ವಿಷಯಗಳ ಮೇಲೆ (ಕಾನುನುಗಳನ್ನು ರೂಪಿಸಲು ವಿಶಿಷ್ಟ ಅಧಿಕಾರವಿರುವದು. ಮೂರನೆಯ ಯಾದಿಯಲ್ಲಿ ಕಾಣಿಸಲಾದ ವಿಷಯಗಳ ಮೇಲೆ (ಕ್ರಿಮಿನಲ್ ಕಾನೂನು, ಕಂಟ್ರಾಕ್ಟುಗಳು, ಪತ್ರಿಕೆಗಳು, ಇತ್ಯಾದಿ)ಒಕ್ಕೂಟದ ಶಾಸಕಾಂಗ ಮತ್ತು ಸಂಬಂಧಪಟ್ಟ ಪ್ರಾಂತೀಯ ಶಾಸಕಾಂಗಗಳಿಗೆ ಜಂಟಿ (concurrent) ಶಾಸನದ ಹಕ್ಕುಗಳಿರುವುವು.

ಗವರ್ನರ್ ಜನರಲ್‌ನಿಗೆ ಒಕ್ಕೂಟದ ಸಂಸ್ಥೆ ಅಥವಾ ಪ್ರಾಧಿಕಾರಕ್ಕೆ ನೀಡಲಾಗಿದ್ದ ಯಾವುದೇ ಹಕ್ಕನ್ನು ಘೋಷಣೆಯ ಮೂಲಕ ತಾನೇ ವಹಿಸಿಕೊಳ್ಳುವ ಅಧಿಕಾರವಿತ್ತು.

## 21.4 1935 ಪ್ರಾಂತೀಯ ಸ್ವಾಯತ್ತತೆ

ಪ್ರಾಂತೀಯ ಸ್ವಾಯತ್ತತೆಯ ತತ್ವವು ಶ್ವೇತ ಪತ್ರದ ಪ್ರಥಮ ಹಾಗೂ ಮೂಲಭೂತ ಪ್ರಸ್ತಾವವಾಗಿತ್ತು. ಪ್ರತಿಯೊಬ್ಬ ಗವರ್ನರರ ಪ್ರಾಂತವು ಒಂದು ಕಾರ್ಯಾಂಗ ಮತ್ತು ಶಾಸಕಾಂಗವನ್ನು ಹೊಂದಿರುವುದು. ಈ ಕಾರ್ಯಾಂಗ ಮತ್ತು ಶಾಸಕಾಂಗಗಳು ಕೇಂದ್ರ ಸರ್ಕಾರ ಮತ್ತು ಕೇಂದ್ರ ಶಾಸಕಾಂಗದ ನಿಯಂತ್ರಣಕ್ಕೆ ಒಳಪಟ್ಟಿರುವುದಿಲ್ಲ. ಮುಖ್ಯವಾಗಿ ಈ ಪ್ರಾಂತಗಳಿಗೆ ಶಾಸನದ ಹಾಗೂ ಆಡಳಿತ ಅಧಿಕಾರಗಳನ್ನು ನೀಡಲಾಗಿತ್ತು. ದ್ವಿಪ್ರಭುತ್ವವನ್ನು ರದ್ದು ಮಾಡಲಾಯಿತು. ಪ್ರಾಂತೀಯ ಸರಕಾರದಲ್ಲಿ ಪ್ರಾಂತೀಯ ಸಚಿವರನ್ನೇ ಸಾಮಾನ್ಯವಾಗಿ ಹೊಣೆಗಾರರನ್ನಾಗಿ ಮಾಡಲಾಯಿತು.

**21.4.1** (ಎ) **ಪ್ರಾಂತೀಯ ಕಾರ್ಯಾಂಗ:** 1935ರ ಕಾಯಿದೆಯು ಬ್ರಿಟಿಷ್ ಭಾರತೀಯ ಪ್ರಾಂತಗಳನ್ನು ಎರಡು ವರ್ಗಗಳಾಗಿ ವಿಂಗಡಿಸಿತು.

(1) ಗವರ್ನರರ ಪ್ರಾಂತಗಗಳು - 11

1. ಮದ್ರಾಸ್
2. ಮುಂಬಯಿ
3. ಬಂಗಾಲ
4. ಸಂಯುಕ್ತ ಪ್ರಾಂತಗಳು
5. ಪಂಜಾಬ್
6. ಬಿಹಾರ್
7. ಮಧ್ಯ ಪ್ರಾಂತಗಳು
8. ಅಸ್ಸಾಮ್
9. ವಾಯುವ್ಯ ಗಡಿನಾಡ ಪ್ರಾಂತ
10. ಒರಿಸ್ಸಾ
11. ಸಿಂಧ್

(ಬೊಂಬಾಯಿ ಪ್ರಾಂತವನ್ನು ವಿಂಗಡಿಸಿ ಸಿಂಧ್ ಹಾಗೂ ಒರಿಸ್ಸಾ ಎಂಬ ಎರಡು ಪ್ರಾಂತಗಳನ್ನು ರಚಿಸಲಾಯಿತು. ಬರ್ಮಾವನ್ನು ಬ್ರಿಟಿಷ್ ಇಂಡಿಯಾದಿಂದ ಪ್ರತ್ಯೇಕಿಸಲಾಯಿತು).

(II) ಚೀಫ್ ಕಮಿಷನರರುಗಳ ಪ್ರಾಂತಗಳು -ಸಂಖ್ಯೆ 5.

1. ಬ್ರಿಟಿಷ್ ಬಲೂಚಿಸ್ಥಾನ
2. ಆಜ್ಮೇರ್ -ಮೇರ್ವಾಡ
3. ಕೊಡಗು
4. ಅಂಡಮಾನ ಮತ್ತು ನಿಕೋಬಾರ ದ್ವೀಪಗಳು
5. ಪಂಥ ಪಿಪ್ಲೋದಾ

ಚೀಫ್ ಕಮಿನಷನರ್‌ಗಳ ಪ್ರಾಂತಗಳಿಗೆ ಸ್ವಾಯತ್ತತೆ ಇರುವುದಿಲ್ಲ. ಒಕ್ಕೂಟದ ಕಾರ್ಯಾಂಗ ಮತ್ತು ಶಾಸಕಾಂಗ ಅಧಿಕಾರವು ಈ ಪ್ರಾಂತಗಳಿಗೂ ಅನ್ವಯಿಸುವುದು. ಪ್ರಾಂತೀಯ ಸ್ವಾಯತ್ತೆಯನ್ನು ಗವರ್ನರರ ಪ್ರಾಂತದಲ್ಲಿ ಮಾತ್ರ ಜಾರಿಗೆ ತರುವುದಾಗಿತ್ತು. ಗವರ್ನರರ ಪ್ರಾಂತಗಳು ಮತ್ತು ಹಕ್ಕುಗಳನ್ನು ಮತ್ತು ಅಧಿಕಾರವನ್ನು ಹಿಂದಿನಂತೆ ಭಾರತ ಸರ್ಕಾರದಿಂದ ಪಡೆಯುವುದಾಗಿರಲಿಲ್ಲ. ಅವುಗಳನ್ನು ನೇರವಾಗಿ ಬ್ರಿಟಿಷ್ ದೊರೆಯಿಂದಲೇ ಪಡೆಯಬಹುದಾಗಿತ್ತು. ಹೀಗೆ ಮೊತ್ತ ಮೊದಲ ಬಾರಿಗೆ ಪ್ರಾಂತಗಳಿಗೊಂದು ಪ್ರತ್ಯೇಕ ಕಾನೂನುಬದ್ಧ ವ್ಯವಸ್ಥೆಯು ಪ್ರಾಪ್ತವಾಯಿತು.

1935ರ ಕಾಯಿದೆಯಂತೆ ಪ್ರಾಂತದ ಆಡಳಿತ ಅಧಿಕಾರವನ್ನು ಗವರ್ನರ್ ಚಲಾಯಿಸುವನು. ಅವನಿಗೊಂದು ಮಂತ್ರಿ ಮಂಡಲವಿರುವುದು. ಈ ಮಂತ್ರಿಗಳನ್ನು ಗವರ್ನರರೇ ನೇಮಿಸುವನು. ಅವನಿಗೆ ಇಷ್ಟವಿರುವಷ್ಟು ಕಾಲ ಮಂತ್ರಿಗಳು ತಮ್ಮ ಹುದ್ದೆಯಲ್ಲಿರುವರು. ಪ್ರಾಂತಗಳಲ್ಲಿ ಆಡಳಿತ ಮಂಡಲಿ ಇರುವುದಿಲ್ಲ. ಅಲ್ಲದೆ 'ಮೀಸಲು ವಿಷಯಗಳೂ"ಇರುವುದಿಲ್ಲ. ಪ್ರತಿಯೊಂದು ವಿಷಯವನ್ನು 'ವರ್ಗಾಯಿತ ವಿಷಯ"ವೆಂದು ಪರಿಗಣಿಸಲಾಗುವುದು. ಆದರೆ ಗವರ್ನರ್‌ತನಗೆ ನೀಡಲಾಗಿರುವ ವಿಶೇಷ ಅಧಿಕಾರಗಳನ್ನು ಚಲಾಯಿಸಿ ಮಂತ್ರಿಗಳ ಅಧಿಕಾರವನ್ನು ಮೊಟಕು ಮಾಡಬಹುದು.

ಗವರ್ನರನು ಕೆಲವು ವಿಷಯಗಳಲ್ಲಿ ಮಂತ್ರಿಗಳ ಸಲಹೆ ಕೇಳದೆ ಅಥವಾ ಅವರ ಸಲಹೆಯನ್ನು ತಿರಸ್ಕರಿಸಿ ತನ್ನ ಸ್ವಂತ ತೀರ್ಮಾನವನ್ನು ಚಲಾಯಿಸಬಹುದು. ಯಾವುದೇ ಪ್ರಾಂತೀಯ ಸಂಸ್ಥೆ ಅಥವಾ ಪ್ರಾಧಿಕಾರಕ್ಕೆ ನೀಡಲಾಗಿದ್ದ ಎಲ್ಲ ಅಥವಾ ಯಾವುದೇ ಅಧಿಕಾರಗಳನ್ನು ಘೋಷಣೆಯ ಮೂಲಕ ತಾನೆ ವಹಿಸಿಕೊಳ್ಳುವ ಅಧಿಕಾರವೂ ಗವರ್ನರನಿಗಿತ್ತು.

(ಬಿ) ಪ್ರಾಂತೀಯ ಶಾಸಕಾಂಗ:ಆರು ಪ್ರಾಂತಗಳಲ್ಲಿ (ಮದ್ರಾಸ್, ಮುಂಬಯಿ, ಬಂಗಾಲ, ಸಂಯುಕ್ತ ಪ್ರಾಂತಗಳು, ಬಿಹಾರ, ಅಸ್ಸಾಮ್)ಶಾಸಕಾಂಗದಲ್ಲಿ ಎರಡು ಸದನಗಳಿದ್ದವು. ವಿಧಾನಪರಿಷತ್ (ಮೇಲ್ಮನೆ)ಮತ್ತು ವಿಧಾನಸಭೆ(ಕೆಳಮನೆ) ಉಳಿದ ಪ್ರಾಂತಗಳ

ಶಾಸಕಾಂಗಗಳಲ್ಲಿ ವಿಧಾನಸಭೆ ಎಂಬ ಒಂದೇ ಸದನ ಇರುವುದು. ಶಾಸನ ಸಭೆಗಳಿಗೆ ಸ್ಥಾನಗಳ ನೀಡಿಕೆಯ ಯೋಜನೆಯು ಪ್ರತ್ಯೇಕ ಚುನಾವಣಾ ಕ್ಷೇತ್ರಗಳ ತತ್ವವನ್ನು ಆಧರಿಸಿತ್ತು. ಗವರ್ನರನಿಗೆ ಬೇರೆ ಬೇರೆ ರೀತಿಯ ಶಾಸನದ ಅಧಿಕಾರಗಳಿದ್ದವು. ಅಧ್ಯಾದೇಶ ಘೋಷಣೆಯ ಅಧಿಕಾರ ಅವುಗಳಲ್ಲೊಂದು. ಒಟ್ಟಿನಲ್ಲಿ ಪ್ರಾಂತೀಯ ಶಾಸಕಾಂಗಕ್ಕೆ ಎರಡನೆಯ ಯಾದಿ ಎಲ್ಲ ವಿಷಯಗಳ ಮೇಲೆ, ಹಾಗೂ ಒಕ್ಕೂಟದ ಶಾಸಕಾಂಗದ ಸಹಮತದೊಂದಿಗೆ ಮೂರನೆಯ ಯಾದಿಯ ಎಲ್ಲ ವಿಷಯಗಳ ಮೇಲೆ ಶಾಸನಗಳನ್ನು ರೂಪಿಸುವ ಅಧಿಕಾರವಿತ್ತು. ಒಕ್ಕೂಟದ ಮತ್ತು ಪ್ರಾಂತಗಳ ನಡುವೆ ಕಂದಾಯವನ್ನು ಸಮಾನವಾಗಿ ಹಂಚಲು 1935ರ ಕಾಯಿದೆಯಲ್ಲಿ ಅವಕಾಶ ಮಾಡಲಾಯಿತು.

## 21.5 1935 ಭಾರತದಲ್ಲಿ ರಾಜಕೀಯ ಪ್ರತಿಕ್ರಿಯೆ

ಡಾ. ರಾಜೇಂದ್ರ ಪ್ರಸಾದರು ಹೇಳಿದಂತೆ ಒಕ್ಕೂಟದ ಶಾಸಕಾಂಗವು ನಿಜವಾಗಿ ರಾಷ್ಟ್ರವನ್ನು ಪ್ರತಿನಿಧಿಸಲು ಸಾಧ್ಯವಿರಲಿಲ್ಲ. ಯಾಕೆಂದರೆ ಭಾರತದ ರಾಜ್ಯಗಳಿಂದ ಕಳುಹಿಸಲಾದ ಪ್ರತಿನಿಧಿಗಳು ಜನರಿಂದ ಚುನಾಯಿತರಾಗಿರಲಿಲ್ಲ. ರಾಜ್ಯಗಳನ್ನು ಆಳುವ ರಾಜರುಗಳಿಂದ ಈ ಪ್ರತಿನಿಧಿಗಳು ನೇಮಿತರಾಗಿದ್ದರು. ಭಾರತದ ಮೂರನೇ ಒಂದು ಭಾಗವು ಭಾರತದ ರಾಜರ ಅಧೀನದಲ್ಲಿತ್ತು. ಅದಲ್ಲದೆ ಅಧಿಕಾರವನ್ನು ಜನರ ನಿಯಂತ್ರಣಕ್ಕೆ ಬಿಟ್ಟುಕೊಡುವುದು ವಾಸ್ತವವಾಗಿರಲಿಲ್ಲ. ಗವರ್ನರ್ ಜನರಲ್ ಮತ್ತು ಗವರ್ನರುಗಳಿಗೆ ಕೊಡಲಾದ ವಿಶೇಷ ಒಡೆತನದ ಬಾಧ್ಯತೆಯಿಂದಾಗಿ ಅಧಿಕಾರದ ಬಹು ದೊಡ್ಡ ಭಾಗವು ಜನರ ನಿಯಂತ್ರಣದಿಂದ ಹೊರಗೆ ಉಳಿಯಿತು. ಇಷ್ಟು ಮಾತ್ರವಲ್ಲದೆ ಒಕ್ಕೂಟದ ಸರಕಾರ ಮಾಡುವ ಕನಿಷ್ಠ ಶೇಕಡ 80ರಷ್ಟು ವೆಚ್ಚವನ್ನು ಪ್ರಶ್ನಿಸಲಾಗುತ್ತಿರಲಿಲ್ಲ, ಹಾಗೂ 1935ರ ಕಾಯಿದೆಯಲ್ಲಿ ಸ್ವಯಂ ಪ್ರಭುತ್ವದ ಬೆಳವಣಿಗೆ ಮತ್ತು ಪುರೋಗತಿಗೆ ಅವಕಾಶವೇ ಇರಲಿಲ್ಲ. ನೆಹರೂರವರ ಪ್ರಕಾರ ಇದೊಂದು ಗುಲಾಮ ಪದ್ಧತಿಯ ಚಾರ್ಟರ್ ಎಂದು ಟೀಕಿಸಿದರು.

ಜಿನ್ನಾ ಅವರು ಒಕ್ಕೂಟದ ಈ ಯೋಜನೆಯನ್ನು ಖಂಡಿಸಿದರು. ಭಾರತದ ರಾಜ್ಯಗಳು ಒಕ್ಕೂಟದ ಶಾಸಕಾಂಗಕ್ಕೆ ತಮ್ಮ ಸ್ವಂತ ಪ್ರತಿನಿಧಿಗಳನ್ನೇ ಕಳುಹಿಸುತ್ತಿದ್ದವು. ಇದರಿಂದಾಗಿ ಒಕ್ಕೂಟದ ಶಾಸಕಾಂಗದಲ್ಲಿ ಹಿಂದೂ ಪ್ರತಿನಿಧಿಗಳ ಬಹುಮತವು ಹೆಚ್ಚಾಗುವುದೆಂದು ಅವರಿಗೆ ಭೀತಿ ಇತ್ತು. ಆದರೂ ಅವರು ಈ ಯೋಜನೆಯನ್ನು ಸ್ವೀಕರಿಸಲು ಸಿದ್ಧರಾದರು. ಯಾಕೆಂದರೆ ಅದರಿಂದಾಗಿ ಬಂಗಾಲ, ಪಂಜಾಬ್, ವಾಯುವ್ಯ ಗಡಿನಾಡು ಪ್ರಾಂತ ಮತ್ತು ಸಿಂಧ್ ಈ ನಾಲ್ಕು ಪ್ರಾಂತಗಳ ಮೇಲೆ ಮುಸ್ಲಿಮರಿಗೆ ನಿಯಂತ್ರಣ ಲಭಿಸುವುದು ಖಚಿತವಾಗಿತ್ತು. ಈ ಪ್ರಸ್ತಾವಿತ ಸಾಂವಿಧಾನಿಕ ವ್ಯವಸ್ಥೆಯಿಂದ ಸ್ವಯಂ ಪ್ರಭುತ್ವಕ್ಕೆ ರಾಷ್ಟ್ರೀಯ ಮಟ್ಟದಲ್ಲಿ ಆಗಬಹುದಾದ ದುಷ್ಪರಿಣಾಕಮಕೆ ಅವರು ಸಾಕಷ್ಟು ಮಹತ್ವವನ್ನೇ ನೀಡಲಿಲ್ಲ. ಪರ್ಯಾಯವಾಗಿ ತನ್ನ ಮುಸ್ಲಿಂ ಸಮುದಾಯದ ಸ್ವಂತ ಲಾಭದ ದೃಷ್ಟಿಯಿಂದಲೇ ಅದನ್ನು ನೋಡಿದರು.

## 21.6 ಒಕ್ಕೂಟ ಯೋಜನೆಯ ವಿಫಲತೆ

ಒಕ್ಕೂಟದ ಯೋಜನೆಯು ಅಂತಿಮ ರೂಪ ತಳೆಯುತ್ತಿದ್ದಂತೆ ಭಾರತದ ರಾಜ್ಯಗಳಿಗೆ ತಾವು ಒಕ್ಕೂಟವನ್ನು ಸೇರಿದರೆ ತಮ್ಮ ಹೆಚ್ಚಿನ ಹಕ್ಕುಗಳು ಹಾಗೂ ಅಧಿಕಾರಿಗಳು ಕುಂಠಿತಗೊಳ್ಳುವುದೆಂದು ಅನಿಸತೊಡಗಿತು. 1935ರ ಕಾಯದೆ ಅಂಗೀಕಾರವಾದ ಬಳಿಕ ಭಾರತದ ರಾಜ್ಯಗಳು ಒಕ್ಕೂಟದ ಯೋಜನೆಯ ಮೂಲಭೂತ ತತ್ವಗಳ ಕುರಿತು ಪ್ರಶ್ನೆಯೆತ್ತತೊಡಗಿದವು. ತಮ್ಮ ಸಮಗ್ರತೆ, ಸಾರ್ವಭೌಮತೆ ಮತ್ತು ಆಂತರಿಕ ಅಧಿಕಾರವನ್ನು ಉಳಿಸಿಕೊಳ್ಳಲು ಕಾತರವಾಗಿದ್ದವು.

ಕಾಯದೆಯು 1937ಏಪ್ರಿಲ್ ಒಂದರಂದು ಜಾರಿಗೆ ಬಂತು. ಯಾವ ಭಾರತದ ರಾಜ್ಯವೂ ಒಕ್ಕೂಟವನ್ನು ಸೇರಲಿಲ್ಲವಾದ್ದರಿಂದ ಪ್ರಸ್ತಾವಿತ ಒಕ್ಕೂಟವು ಅಸ್ತಿತ್ವಕ್ಕೆ ಬರಲೇ ಇಲ್ಲ. ಕೇಂದ್ರ ಸರ್ಕಾರ ಮತ್ತು ಕೇಂದ್ರ ಶಾಸಕಾಂಗ ಇವುಗಳು ಹೆಚ್ಚು ಕಡಿಮೆ 1919ರ ಕಾಯಿದೆಯ ಅವಕಾಶಗಳ ಪ್ರಕಾರವೇ ತಮ್ಮ ಕಾರ್ಯ ಮುಂದುವರಿಸಿದವು. ಪ್ರಾಂತಗಳಿಗೆ ಸಂಬಂಧಪಟ್ಟ ಆಡಳಿತ ನಿಯಮಗಳ(ಸೆಕ್ಷನ್ಸ್)ಬಗ್ಗೆ ಹೇಳುವುದಾದರೆ 1935ರ ಕಾಯಿದೆಯು 1947ರವರೆಗೆ ಜಾರಿಯಲ್ಲುಳಿಯಿತು.

## 2. ಕಾಂಗ್ರೆಸ್ ಮತ್ತು 1937ರ ಚುನಾವಣೆ

ಕಾನೂನು ಭಂಗ ಚಳುವಳಿಯು 1934ರ ಮೇ ತಿಂಗಳವರೆಗೂ ಮುಂದುವರಿಯಿತು. ಅದು ಬ್ರಿಟಿಷ್ ಸರ್ಕಾರದ ನೀತಿಯ ಮೇಲೆ ವಸ್ತುತಃ ಏನೂ ಪರಿಣಾಮ ಬೀರಲಿಲ್ಲ. ಅನಂತರ ಕಾಂಗ್ರೆಸ್ ಆ ಚಳುವಳಿಯನ್ನು ಕಾರ್ಯತಃ ಕೈಬಿಟ್ಟಿತು. 1922ರಲ್ಲಿ ಮಾಡಿದಂತೆ ಮತ್ತೊಮ್ಮೆ ಕಾಂಗ್ರೆಸ್ 1935ರ ಕಾಯಿದೆಯು ತಂದ ಸುಧಾರಣೆಗಳನ್ನು ಕಾರ್ಯರೂಪಕ್ಕೆ ತರಲು ನಿರ್ಧರಿಸಿತು. 1935ರ ಮಾರ್ಚಿಯಲ್ಲಿ ದಿಲ್ಲಿಯಲ್ಲೊಂದು ಸಮ್ಮೇಳನ ನಡೆಯಿತು. ಈ ಸಮ್ಮೇಳನವು ಸ್ವರಾಜ್ಯ ಪಕ್ಷವನ್ನು ಪುನಶ್ಚೇತನಗೊಳಿಸಲು ಮತ್ತು ಮುಂಬರುವ ಚುನಾವಣೆಯಲ್ಲಿ ಸ್ಪರ್ಧಿಸುವ ಕುರಿತು ಸಿದ್ಧತೆಗಳನ್ನು ಮಾಡಲು ನಿರ್ಧರಿಸಿತು. ಅದು ಎರಡು ಅಂಶಗಳ ಒಂದು ಕಾರ್ಯಕ್ರಮವನ್ನು ಆಧಾರವಾಗಿಟ್ಟುಕೊಂಡಿತು. (1) ದಮನಕಾರಿ ಕಾನೂನುಗಳನ್ನು ರದ್ದುಪಡಿಸುವುದು, ಮತ್ತು (2) ಗಾಂಧೀಜಿಯವರು ದುಂಡು ಮೇಜಿನ ಸಮ್ಮೇಳನದಲ್ಲಿ ಮಂಡಿಸಿದ್ದ ಬೇಡಿಕೆಗಳನ್ನು ಒತ್ತಾಯಿಸಿ ಶ್ವೇತಪತ್ರವನ್ನು ತಿರಸ್ಕರಿಸುವುದು ಮುಸ್ಲಿಂ ಲೀಗ್ ಕೂಡ ಹೊಸ ಪ್ರಾಂತೀಯ ಶಾಸನ ಸಭೆಗಳ ಚುನಾವಣೆಯಲ್ಲಿ ಪಾಲ್ಗೊಳ್ಳಲು ನಿರ್ಧರಿಸಿತು.

1935ರ ಕಾಯಿದೆಯ ಪ್ರಕಾರ 1937ರ ಚುನಾವಣೆಗಳು ನಡೆದವು. ಕಾಂಗ್ರೆಸ್ ಪ್ರಚಂಡ ಬಹುಮತ ಗಳಿಸಿತು. ಮುಸ್ಲಿಮರು ಪ್ರತಿಯೊಂದು ಪ್ರಾಂತದಲ್ಲೂ ಕಾಂಗ್ರೆಸಿನೊಂದಿಗೆ ಸಮ್ಮಿಶ್ರ ಸಂಪುಟ ರಚಿಸಲು ಆಶಿಸಿದರು. ಆದರೆ ಕಾಂಗ್ರೆಸ್ ಜಾತ್ಯತೀತತೆ ಮತ್ತು ಪ್ರಜಾಪ್ರಭುತ್ವದ ತತ್ವಗಳನ್ನು ಒಪ್ಪದಿರುವ ಯಾರನ್ನೂ ಸಂಪುಟಕ್ಕೆ ತೆಗೆದುಕೊಳ್ಳಲು ಒಪ್ಪಲಿಲ್ಲ;ಈ ನಿರ್ಧಾರದಿಂದ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗಿನ ನಡುವೆ ಅಂತರ ಹೆಚ್ಚಾಯಿತು. ಜಿನ್ನಾ ಇದುವರೆಗೆ ಕಾಂಗ್ರೆಸಿನ ಮಿತ್ರರಾಗಿದ್ದರು. "ಮುಸ್ಲಿಮರಿಗೆ ಕಾಂಗ್ರೆಸ್ ಸರಕಾರದಲ್ಲಿ ನ್ಯಾಯ ಅಥವಾ ಉಚಿತ ಸ್ಥಾನಮಾನ ದೊರಕೀತೆಂದು ನಿರೀಕ್ಷಿಸಲು ಸಾಧ್ಯವಿಲ್ಲ" ಎಂದು ಈ ಸಂದರ್ಭದಲ್ಲಿ ಬಹಿರಂಗವಾಗಿ ಘೋಷಿಸಿದರು. ಜಿನ್ನಾ ಮುಸ್ಲಿಂ ಸಮುದಾಯದ ಪ್ರಶ್ನಾತೀತ ನಾಯಕರಾದರು. ಪ್ರತಿವರ್ಷವೂ ಅವರು ಲೀಗಿನ ಅಧ್ಯಕ್ಷರಾಗಿ ಆಯ್ಕೆಯಾಗುತ್ತಿದ್ದರು. ಅಲ್ಪಕಾಲದಲ್ಲೇ ಭಾರಾತಾದ್ಯಂತ ಹೆಚ್ಚಿನ ಮುಸ್ಲಿಮರು ಲೀಗಿನ ಲಾಂಛನದಡಿಯಲ್ಲಿ ಒಟ್ಟುಗೂಡಿಸಿದರು.

ಒಟ್ಟಿನಲ್ಲಿ ನೋಡಿದರೆ 1937ರ ಚುನಾವಣೆಯಲ್ಲಿ ಕಾಂಗ್ರೆಸಿನ ವಿಜಯವು ಅದ್ಭುತವಾಗಿತ್ತು. ಜಿನ್ನಾ ನೇತೃತ್ವದ ಮುಸ್ಲಿಂ ಲೀಗಿನ ಮುಸ್ಲಿಂ ಬಾಹುಳ್ಯವುಳ್ಳ ಪ್ರಾಂತಗಳಾದ ಬಂಗಾಲ, ಪಂಜಾಬ್, ಸಿಂಧ್ ಮತ್ತು ವಾಯುವ್ಯ ಗಡಿನಾಡು ಪ್ರಾಂತ ಇವುಗಳಲ್ಲಿ ಒಂದರಲ್ಲಿಯೂ ಬಹುಮತ ಗಳಿಸಲು ಸಾಧ್ಯವಾಗಲಿಲ್ಲ. ಈ ನಾಲ್ಕು ಮುಸ್ಲಿಂ ಬಹುಸಂಖ್ಯಾತ ಪ್ರಾಂತಗಳಲ್ಲಿ ಮುಸ್ಲಿಂ ಪ್ರಧಾನ ಮಂತ್ರಿಗಳ ನೇತೃತ್ವದ ಸಮ್ಮಿಶ್ರ ಸಂಪುಟಗಳನ್ನು ರಚಿಸಲಾಯಿತು. ಕಾಂಗ್ರೆಸ್ ಅವುಗಳಲ್ಲಿ ಸೇರಲಿಲ್ಲ. ಮುಸ್ಲಿಮೇತರರು ಬಹುಸಂಖ್ಯಾತರಾಗಿರುವ ಅಸ್ಸಾಮಿನಲ್ಲಿ ಓರ್ವ ಪ್ರಧಾನ ಮಂತ್ರಿಯ ಕೈಕೆಳಗೆ ಸಮ್ಮಿಶ್ರ ಸಂಪುಟವನ್ನು ರಚಿಸಲಾಯಿತು.

ಕಾಂಗ್ರೆಸ್ ಐದು ಪ್ರಾಂತಗಳಲ್ಲಿ ಸ್ಪಷ್ಟ ಬಹುಮತ ಹೊಂದಿತ್ತು. ಅವುಗಳೆಂದರೆ (1) ಮದ್ರಾಸ್, (2) ಸಂಯುಕ್ತ ಪ್ರಾಂತಗಳು, (3) ಮಧ್ಯ ಪ್ರಾಂತಗಳು, (4) ಬಿಹಾರ್,(5) ಒರಿಸ್ಸಾ, ಮುಂಬಯಿಯಲ್ಲಿ ಕಾಂಗ್ರೆಸಿಗೆ ಸಹಾನುಭೂತಿ ಇದ್ದ ಕೆಲವು ಗುಂಪುಗಳಿದ್ದವು. ಅವುಗಳ ಬೆಂಬಲದಿಂದ ಅಲ್ಲಿ ಕಾಂಗ್ರೆಸ್ ಬಹುಮತಗಳಿಸಿತು. ಹೀಗೆ 1937ಜುಲೈಯಲ್ಲಿ ಕಾಂಗ್ರೆಸ್ ಒಟ್ಟು ಆರು ಪ್ರಾಂತಗಳಲ್ಲಿ ಸಂಪುಟಗಳನ್ನುರಚಿಸಿತು. 1937 ಸೆಪ್ಟಂಬರ್‌ನಲ್ಲಿ ವಾಯುವ್ಯ ಗಡಡಿನಾಡು ಪ್ರಾಂತದಲ್ಲಿ ಕಾಂಗ್ರೆಸೇತರ ಸಮ್ಮಿಶ್ರ ಸಂಪುಟದ ಪತನವಾಗಿ ಕಾಂಗ್ರೆಸ್ ಏಳು ಪ್ರಾಂತಗಳಲ್ಲಿ ಅಧಿಕಾರದಲ್ಲಿತ್ತು. ಅವುಗಳು ಯಾವುವೆಂದರೆ.

1. ಮದ್ರಾಸ್
2. ಮುಂಬಯಿ
3. ಸಂಯುಕ್ತ ಪ್ರಾಂತಗಳು
4. ಬಿಹಾರ್
5. ಒರಿಸ್ಸಾ
6. ಮಧ್ಯ ಪ್ರಾಂತಗಳು
7. ಈಶಾನ್ಯ ಗಡಿನಾಡು ಪ್ರಾಂತ

ಕಾಂಗ್ರೆಸ್ ಅಸ್ಸಾಮಿನ ಸರ್ಕಾರದ ಮೇಲೆ ವಸ್ತುತಃ ನಿಯಂತ್ರಣ ಹೊಂದಿತ್ತು. ಸಿಂಧ್‌ನ ಸಂಪುಟಕ್ಕೆ ಕಾಂಗ್ರೆಸಿನ ಬೆಂಬಲವು ಅನಿವಾರ್ಯವಾಗಿತ್ತು. ಬಂಗಾಲ ಮತ್ತು ಪಂಜಾಬ್ ಇವೆರಡು ಪ್ರಾಂತಗಳು ಮಾತ್ರ ಕಾಂಗ್ರೆಸಿನ ರಾಜಕೀಯ ಕಕ್ಷೆಯಿಂದ ಹೊರಗುಳಿದಿದ್ದವು.

**ದ್ವಿತೀಯ ಜಾಗತಿಕ ಸಮರಕ್ಕೆ ಭಾರತದ ಪ್ರತಿಕ್ರಿಯೆ;**

ದ್ವಿತೀಯ ಜಾಗತಿಕ ಸಮರವು 1939 ಸೆಪ್ಟಂಬರ್‌ನಲ್ಲಿ ಆರಂಭವಾಯಿತು. ಇದಕ್ಕಿಂತ ಮೊದಲೇ ಕಾಂಗ್ರೆಸ್ ಯುದ್ಧಪ್ರಯತ್ನಕ್ಕೆ ತನ್ನ ಅಸಹಕಾರವನ್ನು ಬಹಿರಂಗವಾಗಿ ಘೋಷಿಸಿತು. ತಾನು ಸ್ವತಂತ್ರವಾಗದೆ ಇನ್ನೊಬ್ಬರ ಸ್ವತಂತ್ರ್ಯಕ್ಕಾಗಿ ಭಾರತ ಹೋರಾಡದು ಎಂದು ಕಾಂಗ್ರೆಸ್ ಸಸ್ಪಷ್ಟಪಡಿಸಿತ್ತು. ಅಂತೆಯೆ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು, ಬ್ರಿಟಿಷ್ ಸರ್ಕಾರದ ಯುದ್ಧ ಸಿದ್ಧತೆಗಳಿಗೆ ಯಾವ ರೀತಿಯಲ್ಲೂ ಸಹಾಯ ಮಾಡಬಾರದು ಮತ್ತು ಸಂದರ್ಭ ಬಂದಾಗ ರಾಜೀನಾಮೆ ನೀಡಲು ಸಿದ್ಧವಾಗಿರಬೇಕು ಎಂದು ಪ್ರಾಂತೀಯ ಕಾಂಗ್ರೆಸ್ ಸರಕಾರಗಳಿಗೆ ನಿರ್ದೇಶನ ನೀಡಿತು.

1939 ಸೆಪ್ಟಂಬರ್ 3ರಂದು ಬ್ರಿಟಿಷ್ ಸಾಮ್ರಾಜ್ಯ ಮತ್ತು ಜರ್ಮನಿಯ ನಡುವೆ ಯುದ್ಧವು ಆರಂಭವಾದಾಗ ವೈಸ್‌ರಾಯ್ ಈ ಕುರಿತು ಒಂದು ಘೋಷಣಾ ಪತ್ರವನ್ನು ಹೊರಡಿಸಿದರು. ಇದರಿಂದಾಗಿ ಬ್ರಿಟಿಷ್ ಸಾಮ್ರಾಜ್ಯದ ಒಂದು ಭಾಗವಾಗಿದ್ದ ಭಾರತವು ಜರ್ಮನಿಯ ವಿರುದ್ಧದ ಸಮರದಲ್ಲಿ ಸ್ವಯಂ ಪಾಲುದಾರನಾದಂತಾಯಿತು. ಪಂಜಾಬ್, ಬಂಗಾಲ ಮತ್ತು ಸಿಂಧ್‌ನ ಮಂತ್ರಿ ಮಂಡಲಗಳು ಬ್ರಿಟಿಷರಿಗೆ ಸಂಪೂರ್ಣ ಬೆಂಬಲ ಘೋಷಿಸಿದವು. ಭಾರತೀಯ ರಾಜ್ಯಗಳಂತೂ ಖಂಡಿತವಾಗಿಯೂ ಸರ್ಕಾರವನ್ನು ಬೆಂಬಲಿಸುತ್ತಿದ್ದವು. ಆದರೆ ಕಾಂಗ್ರೆಸ್ ಪಕ್ಷದ ಸಮರಕ್ಕೆ ಯಾವುದೇ ರೀತಿಯ ಸಹಕಾರ ನೀಡಲು ನಿರಾಕರಿಸಿತು. ಇತರ ಕೆಲವು ರಾಜಕೀಯ ಪಕ್ಷಗಳು ನಿಃ ಶರ್ತ ಬೆಂಬಲ ನೀಡಿದವು. ಮುಸ್ಲಿಂ ಲೀಗಿನ ಹೈಕಮಾಂಡ್ ಬ್ರಿಟಿಷರಿಗೆ ಬೆಂಬಲ ನೀಡಲಿಲ್ಲ. ಆದರೆ ಬಂಗಾಲ ಮತ್ತು ಪಂಜಾಬಿನ ಮಂತ್ರಿಮಂಡಲಗಳು ಯುದ್ಧವನ್ನು ಬೆಂಬಲಿಸದಂತೆ ತಡೆಯುವ ಕೊಡವೆಗೂ ಹೋಗಲಿಲ್ಲ.

ಕಾಂಗ್ರೆಸಿನ ಇಬ್ಬರು ಮಹಾನಾಯಕರಾದ ಗಾಂಧೀಜಿ ಮತ್ತು ನೆಹರೂ ಅವರು ವೈಯಕ್ತಿಕವಾಗಿ ಹೇಳಿಕೆ ನೀಡಿ. ಬ್ರಿಟಿಷನಿಗೆ ನಿಃಶರ್ತ ಬೆಂಬಲ ಘೋಷಿಸಿದರು. ಆದರೆ ಕೇವಲ ಓರ್ವ ನಾಯಕರು ಧೈರ್ಯವಾಗಿ ಕಾಂಗ್ರೆಸಿನ ನೀತಿಯನ್ನು ಸಮರ್ಥಿಸಿದರು. ಅವರೇ ನೇತಾಜಿ ಸುಭಾಷ್‌ಚಂದ್ರಬೋಸ್, ಭಾರತವು ಬ್ರಿಟನಿನ ಯುದ್ಧಕ್ಕೆ ಸಹಕಾರ ನೀಡಬಾರದೆಂದು ಕಾಂಗ್ರೆಸ್ 1927 ರಿಂದ ಮೇಲಿನ ಮೇಲೆ ಘೋಷಿಸಿದೆ. ಈಗ ಕಾಂಗ್ರೆಸ್ ಆ ನೀತಿಯನ್ನು ಆಚರಣೆಗೆ ತರಬೇಕಾಗಿದೆ ಎಂದು ಅವರು ನೆನಪು ಮಾಡಿದರು, ಕಾಂಗ್ರೆಸ್ ಹೈಕಮಾಂಡ್ ಬ್ರಿಟಿಷರಿಗೆ ಬೆಂಬಲ ನೀಡುವ ಗಾಂಧೀಜಿ ಮತ್ತು ನೆಹರೂ ಅವರ ಭಾವುಕ ನೀತಿಯನ್ನು ಅನುಸರಿಸಲು ನಿರಾಕರಿಸಿತು. ಇದೊಂದು ಕಾಂಗ್ರೆಸಿನಲ್ಲಿ ನಡೆದ ಪವಾಡವೆನ್ನಬೇಕು. ಕಾರ್ಯಕಾರಿ ಸಮಿತಿಯು ಒಂದು ದೀರ್ಘವಾದ ನಿರ್ಣಯವನ್ನು ಅಂಗೀಕರಿಸಿ, ಭಾರತವು ಪ್ರಜಾಸತ್ತೆ ಮತ್ತು ಸ್ವಾತಂತ್ರ್ಯದ ಬಗ್ಗೆ ಆಗ್ರಹ ಹೊಂದಿದೆ. ಆದರೆ ತನಗೆ ಆ ಸ್ವಾತಂತ್ರ್ಯವೇ ಇಲ್ಲದಿರುವಾಗ ಭಾರತವು ಯುದ್ಧದಲ್ಲಿ ಸೇರಲಾರದು ಎಂದು ಆ ನಿರ್ಣಯದ್ದಿ ತಿಳಿಸುತ್ತ ಬ್ರಿಟಿಷ್ ಸರ್ಕಾರವು ಪ್ರಜಾಸತ್ತೆ ಮತ್ತು ಸಾಮ್ರಾಜ್ಯವಾದದ ಕುರಿತು ಯಾವ ತಾತ್ವಿಕ ಗುರಿಯನ್ನು ಹೊಂದಿದೆಯೆಂಬುದನ್ನು ಸ್ಪಷ್ಟವಾಗಿ ಘೋಷಿಸಬೇಕು. ವಿಶೇಷವಾಗಿ ಭಾರತಕ್ಕೆ ಈ ತತ್ವವನ್ನು ಹೆಗೆ ಅನ್ವಯಿಸಲಾಗುವುದು ಮತ್ತು ಸದ್ಯ ಅವುಗಳನ್ನು ಯಾವ ರೀತಿ ಜಾರಿಗೆ ತರಲಾಗುವುದು ಎಂಬುದನ್ನು ಸ್ಪಷ್ಟ ಶಬ್ದಗಳಲ್ಲಿ ಘೋಷಿಸಬೇಕು ಎಂಬ ಅಭಿಪ್ರಾಯವನ್ನು ಸ್ಪಷ್ಟಪಡಿಸಿತು. ಅಷ್ಟಲ್ಲದೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಭಾರತವನ್ನು ಸ್ವತಂತ್ರ ರಾಷ್ಟ್ರವೆಂದು ಘೋಷಿಸಬೇಕೆಂದು ಒತ್ತಾಯಿಸುವ ನಿರ್ಣಯವನ್ನೂ ಅಂಗೀಕರಿಸಿತು.

"ಸಾಮ್ರಾಜ್ಯವಾದವನ್ನು ನಿರ್ಮೂಲ ಮಾಡುವುದು ಮತ್ತು ಭಾರತವನ್ನು ಸ್ವತಂತ್ರ ರಾಷ್ಟ್ರವೆಂದು ಪರಿಗಣಿಸುವುದು ನಿಮ್ಮ ಯುದ್ಧದ ಗುರಿಗಳಲ್ಲಿ ಸೇರಿವೆಯೇ?" ಎಂಬುದಾಗಿಯೂ ಕಾಂಗ್ರೆಸ್, ಬ್ರಿಟಿಷ್ ಸರ್ಕಾರವನ್ನು ಪ್ರಶ್ನಿಸಿತು. ಈ ಪ್ರಶ್ನೆಗೆ ತೃಪ್ತಿಕರವಾದ ಉತ್ತರ ಬರಲಿಲ್ಲ. ಆಗ 1939ಅಕ್ಟೋಬರ್ -ನವಂಬರ್‌ನಲ್ಲಿ ಎಲ್ಲ ಕಾಂಗ್ರೆಸ್ ಮಂತ್ರಿಮಂಡಲಗಳು ರಾಜೀನಾಮೆ ನೀಡಿದವು.

**3. ಆಗಸ್ಟ್ ಕೊಡುಗೆ (1940)**

ಜಾಗತಿಕ ಯುದ್ಧದಲ್ಲಿ ಜರ್ಮನ್ ಸೇನೆ ಹೋದಲ್ಲೆಲ್ಲಾ ವಿಜಯ ಗಳಿಸಿತು. ಆಗ ಕೇಂದ್ರದಲ್ಲೊಂದು ಹಂಗಾಮಿ ರಾಷ್ಟ್ರೀಯ ಸರ್ಕಾರವನ್ನಾದರೂ ಸ್ಥಾಪಿಸಿದರೆ ಯುದ್ಧ ಪ್ರಯತ್ನದಲ್ಲಿ ಸಹಕರಿಸಲು ಸಿದ್ಧವೆಂದು ಕಾಂಗ್ರೆಸ್ ಹಲವು ಬಾರಿ ಪ್ರಸ್ತಾವಿಸಿತು. ಇದಕ್ಕೆ ಉತ್ತರವಾಗಿ 1940 ಆಗಸ್ಟ್ 8ರಂದು ವೈಸರಾಯ್ ಒಂದು ಹೇಳಿಕೆ ನೀಡಿದರು. ಸರ್ಕಾರರವು ನೀಡಬಹುದಾದ ಗರಿಷ್ಠ ರಿಯಾಯಿತಿಗಳನ್ನು ಅದರಲ್ಲಿ ಪ್ರಸ್ತಾವಿಸಲಾಗಿತ್ತು. ಇದನ್ನೇ "ಆಗಸ್ಟ್ ಕೊಡುಗೆ".ಎಂದು ಕರೆಯಲಾಯಿತು. ರಾಷ್ಟ್ರೀಯ ಸರ್ಕಾರವನ್ನು ಸ್ಥಾಪಿಸಬೇಕೆಂಬ ಬೇಡಿಕೆಯನ್ನು ವೈಸರಾಯ್ ಒಪ್ಪಲಿಲ್ಲ. ಆದರ ಆಡಳಿತವನ್ನು ಭಾರತದ ರಾಷ್ಟ್ರಜೀವನದ ದೊಡ್ಡ ಹಾಗೂ ಪ್ರಭಾವೀ ಶಕ್ತಿಗಲು

ಒಪ್ಪುವುದಿಲ್ಲ ಎಂಬುದು ಅವರ ವಾದವಾಗಿತ್ತು. ಈ ಹೇಳಿಕೆಯು ಮುಸಲ್ಮಾನರನ್ನು ದೃಷ್ಟಿಯಲ್ಲಿರಿಸಿಕೊಂಡು ನೀಡಿದ್ದೆಂಬುದು ಸ್ಪಷ್ಟವಾಗಿತ್ತು. ಆದರೆ ಅವರು ಇಷ್ಟನ್ನು ಮಾಡುವುದಾಗಿ ಪ್ರಸ್ತಾವಿಸಿದರು : (1)ಯುದ್ಧದ ಅನಂತರ ಭಾರತಕ್ಕೊಂದು ಹೊಸ ಸಂವಿಧಾನವನ್ನು ರೂಪಿಸಲು ಒಂದು ಪ್ರಾತಿನಿಧಿಕ ಸಭೆಯನ್ನು ಕರೆಯುವುದು; (2)ವೈಸರಾಯರ ಆಡಳಿತ ಮಂಡಲಿಗೆ ಹೆಚ್ಚಿನ ಸಂಖ್ಯೆಯ ಭಾರತೀಯ ಸದಸ್ಯರನ್ನು ನೇಮಕ ಮಾಡಿ ಮಂಡಲಿಯನ್ನು ವಿಸ್ತರಿಸುವುದು, ಮತ್ತು (3)ಬ್ರಿಟಿಷ್ ಭಾರತದ ಮತ್ತು ಭಾರತೀಯ ರಾಜ್ಯಗಳ ಪ್ರತಿನಿಧಿಗಳಿರುವ "ಯುದ್ಧ ಸಲಹಾ ಮಂಡಲಿ"ಯನ್ನು ನೇಮಿಸುವುದು.

ಈ "ಆಗಸ್ಟ್ ಕೊಡುಗೆ" ತೀರಾ ಅತೃಪ್ತಿಕರವೆಂದು ಕಾಂಗ್ರೆಸ್ ಅಭಿಪ್ರಾಯ ಪಟ್ಟಿತು. 1940 ಅಕ್ಟೋಬರ್‌ನಲ್ಲಿ ಕಾಂಗ್ರೆಸ್ ಗಾಂಧೀಜಿಯರ ನೇತೃತ್ವದಲ್ಲಿ "ವೈಯಕ್ತಿಕ ಕಾನೂನು ಭಂಗ ಚಳುವಳಿ"ವನ್ನು ಆರಂಭಿಸಿತು.

**ಮುಸ್ಲಿಂಲೀಗಿನ ಧೋರಣೆ (1939-40) : ಪಾಕಿಸ್ತಾನ ನಿರ್ಣಯ;**

ಬ್ರಿಟಿಷರೊಂದಿಗೆ ನಡೆದ ಸಂಧಾನದುದ್ದಕ್ಕೂ ಕಾಂಗ್ರೆಸಿಗೆ ಮುಸ್ಲಿಂಲೀಗಿನ ಬೆಂಬಲ ಭರವಸೆ ಇರಲಿಲ್ಲ. "ಏಕ ರಾಷ್ಟ್ರದ ಕಲ್ಪನೆ ಹಾಗೂ ತಲೆ ಎಣಿಸುವ ವಿಧಾನದ ಸಂಸದೀಯ ಸರ್ಕಾರದ ಪ್ರಜಾತಾಂತ್ರಿಕ ಪದ್ಧತಿ ಇವೆರಡೂ ಭಾರತದಲ್ಲಿ ಅಸಾಧ್ಯ"ಎಂದು ಜಿನ್ನಾ ವಾದಿಸುತ್ತಿದ್ದರು. ಕೇಂದ್ರದಲ್ಲಿ ಕಾಂಗ್ರೆಸ್ ರಾಜ್ಯ ಬಂದರೆ ಅಲ್ಪಸಂಖ್ಯಾತರಿಗೆ ರಕ್ಷಣೆಯಿರಲಾರದು;ಅಲ್ಪ ಸಂಖ್ಯಾಕರ ಭದ್ರತೆಗಳಿಂದಾಗಲಿ, ಪ್ರತ್ಯೇಕ ಚುನಾವಣಾ ಕ್ಷೇತ್ರಗಳಿಂದಾಗಲಿ ಮುಸಲ್ಮಾನರು 'ಕಾಂಗ್ರೆಸ್ ರಾಜ್' ವಿರುದ್ಧ ರಕ್ಷಣೆ ಪಡೆಯಲು ಸಾಧ್ಯವಿಲ್ಲ ಎಂದು ಅವರು ಬಹಿರಂಗವಾಗಿ ಹೇಳತೊಡಗಿದರು. ಪ್ರಾಂತಗಳಲ್ಲಿದ್ದ ಕಾಂಗ್ರೆಸ್ ಮಂತ್ರಿ ಮಂಡಲಗಳು ರಾಜೀನಾಮೆ ನೀಡಿದಾಗ ಮುಸ್ಲಿಂ ಲೀಗ್ ಭಾರತಾದ್ಯಂತ "ವಿಮೋಚನೆ ಹಾಗೂ ವಂದನಾ ದಿನ"ವನ್ನು ಆಚರಿಸಿತು.

1940 ಜನವರಿಯಲ್ಲಿ ಜಿನ್ನಾ ಇನ್ನೊಂದು ಘೋಷಣೆ ಹೊರಡಿಸಿದರು. ಹಿಂದುಗಳು ಮತ್ತು ಮುಸಲ್ಮಾನರು ಎರಡು ಪ್ರತ್ಯೇಕ ರಾಷ್ಟ್ರಗಳು;ತಮ್ಮಿಬ್ಬರಿಗೂ ಸಮಾನವಾದ ಈ ಮಾತೃಭೂಮಿಯ ಆಡಳಿತದಲ್ಲಿ ಇಬ್ಬರಿಗೂ ಸಮಾನ ಪಾಲು ಇರಬೇಕು ಎಂದು ಈ ಘೋಷಣೆಯಲ್ಲಿ ಹೇಳಿದರು. ಮೂರು ತಿಂಗಳ ನಂತರ (ಮಾರ್ಚ್ 1940)ಲಾಹೋರ್‌ನಲ್ಲಿ ಮುಸ್ಲಿಂ ಲೀಗಿನ ಅಧಿವೇಶನ ನಡೆಯಿತು. ಅಲ್ಲಿ ಜಿನ್ನಾ ಮುಸ್ಲಿಂ ರಾಷ್ಟ್ರಕ್ಕೊಂದು ಪ್ರತ್ಯೇಕ ಸ್ವತಂತ್ರ ಭೂಭಾಗವಿರಬೇಕು ಎಂದು ಘೋಷಿಸಿದರು. ಲಾಹೋರ್ ಅಧಿವೇಶನದಲ್ಲಿ ಅಂಗೀಕರಿಸಿದ ನಿರ್ಣಯವನ್ನು ಸಾಮಾನ್ಯವಾಗಿ "ಪಾಕಿಸ್ತಾನ ನಿರ್ಣಯ"ಎಂದು ಕರೆಯುತ್ತಾರೆ. ಪಂಜಾಬ್ ವಾಯುವ್ಯ ಗಡಿನಾಡು (ಅಫ್ಘಾನ್ ಪ್ರಾಂತ), ಕಾಶ್ಮೀರ, ಸಿಂಧ್ ಮತ್ತು ಬಲೂಚಿಸ್ಥಾನಗಳನ್ನು ಒಂದುಗೂಡಿಸಿ ಒಂದು ಸ್ವತಂತ್ರ ಸಾರ್ವಭೌಮ ರಾಷ್ಟ್ರವನ್ನು ಸ್ಥಾಪಿಸಬೇಕೆಂದು ಜಿನ್ನಾ ವಾದಿಸತೊಡಗಿದರು.

ಪಾಕಿಸ್ಥಾನ ಎಂಬುದರ ಮೂಲ ಹೆಸರು ಪಾಕ್‌ಸ್ಥಾನ್. ಇದರರ್ಥ ಪವಿತ್ರಸ್ಥಾನ ಎಂದು. ಪಂಜಾಬ್ (P). ಅಫ್ಘಾನ್ ಪ್ರಾಂತ (A). ಕಾಶ್ಮೀರ (K), ಮತ್ತು ಸಿಂಧ್ (S) ಈ ನಾಲ್ಕು ಹೆಸರುಗಳ ಮೊದಲ ಇಂಗ್ಲಿಷ್ ಅಕ್ಷರಗಳು ಹಾಗೂ ಬಲೂಚಿಸ್ಥಾನ (TAN) ಇದರ ಕೊನೆಯ ಮೂರು ಅಕ್ಷರಗಳು ಸೇರಿ PAKTSAN (ಪಾಕ್‌ಸ್ಥಾನ್)ರಚನೆಯಾಯಿತು. ಸಾರ್ವಭೌಮ ಪಾಕಿಸ್ಥಾನ ರಾಷ್ಟ್ರದ ಕಲ್ಪನೆಯನ್ನು ಮುಸ್ಲಿಂ ಲೀಗ್ 1942ರಲ್ಲಿ ವಿಧ್ಯುಕ್ತವಾಗಿ ಅನುಮೋದಿಸಿತು. ಆ ದಿನದಿಂದ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗಿನ ನಡುವೆ ರಾಜಿ ಮಾಡುವ ಎಲ್ಲ ಪ್ರಯತ್ನಗಳೂ ಈ ಪಾಕಿಸ್ಥಾನ ಪ್ರಶ್ನೆಯ ಆಧಾರದಲ್ಲೇ ನಡೆಯತೊಡಗಿದವು. ಬ್ರಿಟಿಷ್ ಸರ್ಕಾರವೂ ರಾಷ್ಟ್ರೀಯ ಸರ್ಕಾರ ರಚನೆಯಾಗಬೇಕೆಂಬ ಕಾಂಗ್ರೆಸಿನ ಬೇಡಿಕೆಯನ್ನು ಮುಸ್ಲಿಂರು ವಿರೋಧಿಸುತ್ತಾರೆ ಎಂಬ ಕುಂಟು ಕಾರಣ ನೀಡಿ, ಸುಲಭವಾಗಿ ತಿರಸ್ಕರಿಸಿತು.

## 21.7 ಘಟಕದ ಸಾರಾಂಶ

ಈ ಘಟಕದ ಅಧ್ಯಯನದಿಂದ 1935 ರ ಕಾಯ್ದೆಯು ದ್ವಿ ಸರ್ಕಾರವನ್ನು ತೆಗೆದುಹಾಕಿ ಒಕ್ಕೂಟ ವ್ಯವಸ್ಥೆ ಮತ್ತು ಪ್ರಾಂತ್ಯಗಳ ಸ್ವಾಯತ್ತತೆಗೆ ಅವಕಾಶವನ್ನು ಕೊಟ್ಟಿದ್ದನ್ನು ತಿಳಿದುಕೊಂಡೆವು. 1937ರ ಫೆಬ್ರವರಿಯಲ್ಲಿ ಈ ಕಾಯ್ದೆಯ ನಿಬಂಧನೆಗಳ ಪ್ರಕಾರ ಚುನಾವಣೆ ನಡೆದು ಸರ್ಕಾರಗಳು ಸ್ಥಾಪನೆಯಾದವು. ಮುಸ್ಲಿಂ ಲೀಗ್ ಸೋಲನ್ನು ಕಂಡಿತು. ಕಾಂಗ್ರೆಸ್ 7 ರಾಜ್ಯಗಳಲ್ಲಿ ಸರ್ಕಾರ ಸ್ಥಾಪಿಸಿತು. ಈ ಕಾಯ್ದೆಯು ಸಿಂಧ್ ಮತ್ತು ಒರಿಸ್ಸಾ ಪ್ರಾಂತ್ಯಗಳ ಸ್ಥಾಪನೆಗೆ ಕಾರಣವಾಯಿತು. ಬರ್ಮಾ ಭಾರತದಿಂದ

ಬೇರ್ಪಡೆಯಾಯ್ತು. ಕಾಂಗ್ರೆಸ್ ಮತ್ತು ಮುಸ್ಲಿಂಲೀಗ್ ಕ್ರಮವಾಗಿ ಏಳು ಮತ್ತು ಎರಡು ರಾಜ್ಯಗಳಲ್ಲಿ ಸರ್ಕಾರ ಸ್ಥಾಪಿಸಿದವು. ಎರಡು ರಾಜ್ಯಗಳಲ್ಲಿ ಸಮ್ಮಿಶ್ರ ಸರ್ಕಾರ ಸ್ಥಾಪನೆಯಾಯಿತು.

## 21.8 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. 1935 ರ ಭಾರತೀಯ ಕಾಯ್ದೆಯ ಪ್ರಮುಖ ನಿಬಂಧನೆಗಳು ಮತ್ತು ಕಾರ್ಯವನ್ನು ತಿಳಿಸಿ.
2. 1935 ರ ಭಾರತೀಯ ಕಾಯ್ದೆಯು ಭಾರತದ ಮುಂದಿನ ಸಂವಿಧಾನಕ್ಕೆ ದಾರಿದೀಪವಾಯಿತು ಎಂಬುದನ್ನು ಒಪ್ಪುವಿರಾ? ಚರ್ಚಿಸಿ.

## 21.9 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು

1. Sumit Sarkar - Modern India
2. ನರೇಂದ್ರ ಪ್ರಸಾದ್ ಮತ್ತು ಇತರರು - ಭಾರತ ಸ್ವಾತಂತ್ರ್ಯ ಚಳುವಳಿ

# ಘಟಕ 22 ಕ್ವಿಟ್ ಇಂಡಿಯಾ ಚಳುವಳಿ (1942)

**ವಿಷಯಸೂಚಿ**

## 22.0 ಉದ್ದೇಶಗಳು

ಈ ಘಟಕದ ಅಧ್ಯಯನದಿಂದ ನಾವು ಕೆಳಗಿನ ಪ್ರಮುಖ ಅಂಶಗಳನ್ನು ತಿಳಿಯುತ್ತೇವೆ.

* ಭಾರತೀಯರು ಕೊನೆಯ ಅಸ್ತ್ರವಾಗಿ ಬ್ರಿಟೀಷರೇ ಭಾರತ ಬಿಟ್ಟು ತೊಲಗಿ ಎಂಬ ಘೋಷಣೆಯನ್ನು ಹೊತ್ತ ಚಳುವಳಿಯಾಯಿತೆನ್ನಬಹುದು.

* ಕಾಂಗ್ರೆಸ್ ಆಗಸ್ಟ್ 8,1942 ರಂದು ಒಂದು ತೀರ್ಮಾನವನ್ನು ತೆಗೆದುಕೊಂಡು 9 ರಿಂದ ಚಲೇಜಾವ್ ಚಳುವಳಿಯನ್ನು ಪ್ರಾರಂಭ ಮಾಡಬೇಕು ಎನ್ನುವುದನ್ನು ಅರಿತುಕೊಳ್ಳುತ್ತೇವೆ.

* ಗಾಂಧೀಜಿಯವರಿಗೆ ಎಲ್ಲಾ ವರ್ಗದವರು, ನಾಯಕರು ಹಾಗೂ ಇಡೀ ದೇಶದ ಬೆಂಬಲದಿಂದ ಈ ಚಳುವಳಿಯು ನಡೆದುದನ್ನು ನೋಡುತ್ತೇವೆ.

* ಇದಲ್ಲದೇ ಎಲ್ಲಾ ನಾಯಕರನ್ನು ಜೈಲಿಗೆ ಹಾಕಿದ್ದರೂ, ಎಡಪಂಥೀಯ ನಾಯಕರು ಜಯಪ್ರಕಾಶ ನಾರಾಯಣ್ ನಾಯಕತ್ವದಲ್ಲಿ ನಡೆಸಿದ ಚಳುವಳಿಯ ಬಗ್ಗೆ ತಿಳಿಯುತ್ತೇವೆ.

* ಈ ಜನಸಾಗರದ ಬೆಂಬಲವನ್ನು ನೋಡಿದ ಬ್ರಿಟಿಷರು ಎರಡನೇ ಮಹಾಯುದ್ಧದ ಗತಿಯಲ್ಲಿರುವಾಗಲೇ ಈ ಚಳುವಳಿ ಅದದ್ದನ್ನು ನೋಡಿ, ಹೆದರಿ ಭಾರತಕ್ಕೆ ಸ್ವಾತಂತ್ರ್ಯ ಕೊಡಬೇಕೆಂದು ತೀರ್ಮಾನ ಮಾಡಿದ್ದನ್ನೂ ಸಹ ಇಲ್ಲಿ ಅಧ್ಯಯನ ಮಾಡುತ್ತೇವೆ.

## 22.1 ಪೀಠಿಕೆ

ಭಾರತದ ಸ್ವಾತಂತ್ರ್ಯವನ್ನು ಪಡೆಯಲು ಭಾರತೀಯರು ಮಾಡಿದ ಪ್ರಯತ್ನವೆಲ್ಲಾ ವಿಫಲವಾಗಿ, ಗಾಂಧೀಜಿಯವರ ನಾಯಕತ್ವದಲ್ಲಿ ಎಲ್ಲಾ ಜನರ ಬೆಂಬಲದೊಂದಿಗೆ ಒಂದು ಚಳುವಳಿಯನ್ನು ಮಾಡಿ, ಬ್ರಿಟಿಷರನ್ನು ಭಾರತದಿಂದ ಓಡಿಸಬೇಕೆಂದು ತೀರ್ಮಾನಿಸಿ, ಆಗಸ್ಟ್ 8, 1942 ರಂದು ಕಾಂಗ್ರೆಸ್ ಕ್ವಿಟ್ ಇಂಡಿಯಾ ಚಳುವಳಿಯನ್ನು ಪ್ರಾರಂಭಿಸಲು ತೀರ್ಮಾನಿಸಿ ಜನತೆಗೆ ಕರೆಯನ್ನು ನೀಡಿದರು. ಎಲ್ಲರೂ ಸಹ ಬೆಂಬಲ ನೀಡಬೇಕು, ಇದೇ ಕೊನೆಯ ಹೋರಾಟವಾಗಬೇಕೆಂದು ನುಡಿದರು. ಇಲ್ಲಿಂದ ಈ ಚಳುವಳಿ ಪ್ರಾರಂಭವಾಯಿತು.

## 22.2 ಕ್ವಿಟ್ ಇಂಡಿಯಾ ಚಳುವಳಿ (1942)

ರೌಲಟ್ ಕಾಯ್ದೆ, ಅಸಹಕಾರ ಚಳುವಳಿ, ಕಾಯ್ದೆಭಂಗ ಚಳುವಳಿ ಮತ್ತು ವ್ಯಕ್ತಿಗತ ಚಳುವಳಿಗಳು ವಿಫಲವಾದ ನಂತರ ಮತ್ತೊಂದು ಪ್ರಮುಖ ಚಳುವಳಿಯನ್ನು ಪ್ರಾರಂಭಿಸಿದರು. ಅದನ್ನೇ ನಾವು ಕ್ವಿಟ್ ಇಂಡಿಯಾ ಚಳುವಳಿ ಎನ್ನುತ್ತೇವೆ. ಇದೊಂದು ಕೊನೆಯ ಹಂತದ ರಾಷ್ಟ್ರೀಯ ಚಳುವಳಿಯಾಗಿದ್ದು ಇದಕ್ಕೆ ಗಾಂಧೀಜಿ, ಇನ್ನಿತರೆ ನಾಯಕರು ಮತ್ತು ಜನ ಸಾಮಾನ್ಯರು ಇದಕ್ಕೆ ಸಹಕಾರ ನೀಡಿದ್ದುದು ಒಂದು ಪ್ರಮುಖ ಅಧ್ಯಾಯವೆನಿಸಿದೆ. 1942 ಮಾರ್ಚ್‌ನಲ್ಲಿ ಜಪಾನೀಯರು ರಂಗೂನನ್ನು ವಶಪಡಿಸಿಕೊಂಡರು. ಆಗ ಬ್ರಿಟಿಷ್ ಪ್ರಧಾನಿ ಚರ್ಚಿಲ್ ಅವರಿಗೆ ಪೂರ್ವ ಭೂಭಾಗದ ರಣರಂಗದಲ್ಲಿ ಬ್ರಿಟಿಷ್ ಎಂತಹ ಹತಾಶ ಪರಿಸ್ಥಿತಿಯಲ್ಲಿದೆಯೆಂಬುದು ಮನವರಿಕೆಯಾಯಿತು. ಆದ್ದರಿಂದ ಬ್ರಿಟನ್ ಮತ್ತು ಭಾರತದ ನಡುವೆ ಹೊಸ ಸಂಬಂಧವನ್ನು ರೂಪಿಸಲು ಯತ್ನಿಸುವಂತೆ ಅವರಿಗೆ ಅಮೇರಿಕಾದ ಅಧ್ಯಕ್ಷ ರೂಸ್‌ವೆಲ್ಟ್ ಸಲಹೆಯಿತ್ತರು. ಇದರ ಪರಿಣಾಮವಾಗಿ 1942 ಮಾರ್ಚಿನಲ್ಲಿ ಕ್ರಿಪ್ಸ್ ನಿಯೋಗವನ್ನು ಭಾರತಕ್ಕೆ ಕಳುಹಿಸಲಾಯಿತು. ಆದರೆ ಬ್ರಿಟನ್ ಭಾರತದ ನಡುವಣ ಈ ಸಂಧಾನದ ಯತ್ನ ವಿಫಲವಾಯಿತು.

ಕ್ರಿಪ್ಸ್ ರಾಯಬಾರದ ವೈಫಲ್ಯ ಮತ್ತು ಜಪಾನೀಯರು ಭಾರತವನ್ನು ಆಕ್ರಮಣ ಮಾಡುವ ಭೀತಿಯಿದ್ದುದರಿಂದ ಗಾಂಧೀಜಿಯವರ ಧೋರಣೆಗಳಲ್ಲಿ ಕೂಡಲೇ ಮಹತ್ವದ ಬದಲಾವಣೆಗಳಾದವು. ಅವರು ಕಾಂಗ್ರೆಸಿನ ಸಕ್ರಿಯ ನಾಯಕತ್ವವನ್ನು ವಹಿಸಿಕೊಂಡರು. ಬ್ರಿಟಿಷರ ವಿರುದ್ಧ ಬೃಹತ್ ಪ್ರಮಾಣದ ಅಹಿಂಸಾತ್ಮಕ ಅಂದೋಲನದ ಪ್ರಸ್ತಾವವನ್ನು ಮಂಡಿಸಿದರು. ಬಹಿರಂಗ

ಅಹಿಂಸಾತ್ಮಕ ಆಂದೋಲನದ ಪ್ರಸ್ತಾವವನ್ನು ಮಂಡಿಸಿದರು. ಬಹಿರಂಗ ಅಹಿಂಸಾತ್ಮಕ ಆಂದೋಲನವನ್ನು ಹೂಡುವ ಮಾತನ್ನು ಆಡಿದರು. 1942 ಜುಲೈ 14ರಂದು ಚಲೇ ಜಾವ್ (ಕ್ವಿಟ್ ಇಂಡಿಯಾ) ನಿರ್ಣಯವು ಅಂಗೀಕೃತವಾಯಿತು. ಭಾರತದಲ್ಲಿ ಬ್ರಿಟಿಷ್ ಪ್ರಭುತ್ವವು ಕೂಡಲೇ ಅಂತ್ಯವಾಗಬೇಕೆಂಬ ಬೇಡಿಕೆಯೇ ಚಲೇ ಜಾವ್ ನಿರ್ಣಯದ ಸಾರ ಸರ್ವಸ್ವವಾಗಿತ್ತು. ಸಾಧ್ಯವಾದಷ್ಟು ದೊಡ್ಡ ಪ್ರಮಾಣದಲ್ಲಿ ಸಾಮೂಹಿಕ ಹೋರಾಟವನ್ನು ಆರಂಭಿಸಲು ಕಾಂಗ್ರೆಸು ನಿರ್ಣಯಿಸಿತು. ಆದರೆ ಆಗಸ್ಟ್ 9ರಂದು ಬೆಳಗಿನ ಜಾವ ಸರಕಾರವು ಎಲ್ಲಾ ಕಾಂಗ್ರೆಸ್ ನಾಯಕರನ್ನು ಬಂಧಿಸಿತು. ಕಾಂಗ್ರೆಸ್ ಕಾನೂನುಬಾಹಿರ ಸಂಸ್ಥೆಯೆಂದು ಘೋಷಿಸಲಾಯಿತು. ಆಗ ದೇಶದಲ್ಲಿ ನಿಶ್ಚಿತವಾದ ಬೇರೆ ಸಂಘಟನೆಯಿರಲಿಲ್ಲ. ನಾಯಕತ್ವದ ಸಂಪೂರ್ಣ ಕೊರತೆಯಿತ್ತು. ಈ ಎರಡು ಕೊರತೆಗಳಿಂದಾಗಿ ಭಾರತದ ಬೇರೆ ಬೇರೆ ಭಾಗಗಳಲ್ಲಿ ಹಿಂಸಾತ್ಮಕ ದೊಂಬಿಗಳು, ಹಲ್ಲೆಗಳು ಹಾಗೂ ಅಶಿಸ್ತಿನ ಘಟನೆಗಳು ಸಂಭವಿಸಿದವು. ಸರ್ಕಾರವು ಪುನಃ ಬಲವಾದ ದಮನಕಾರಿ ಕ್ರಮಗಳನ್ನು ಕೈಗೊಂಡಿತು. ವಿಮಾನಗಳಿಂದ ಗುಂಡಿನ ಮಳೆಕರೆಯಲಾಯಿತು. 1942ನೇ ವರ್ಷದ ಕೊನೆಯ ಐದು ತಿಂಗಳುಗಳಲ್ಲಿ 60,000ಕ್ಕೂ ಹೆಚ್ಚು ಜನರನ್ನು ಬಂಧಿಸಲಾಯಿತು. 18,000 ಮಂದಿಯನ್ನು ವಿಚಾರಣೆಯಿಲ್ಲದೆ ಶಿಕ್ಷಿಸಲಾಯಿತು, ಹಾಗೂ 940 ಮಂದಿ ಹತರಾದರು ಎಂಬುದಾಗಿ ಅಧಿಕೃತ ಅಂದಾಜುಗಳಿಂದ ಗೊತ್ತಾಗಿದೆ. ಇದು ಒಂದು ಜನಾಂದೋಲನ ಎಲ್ಲಾ ಜನರ ಒಂದು ಚಳುವಳಿಯಾಗಿತ್ತು.

## 22.3 ಜನಾಂದೋಲನ

ಜಯಪ್ರಕಾಶ ನಾರಾಯಣರು ಆಂದೋಲನದ ನಿಜವಾದ ನಾಯಕರಾಗಿದ್ದರು. 250 ರೈಲು ನಿಲ್ದಾಣಗಳನ್ನು ಹಾಳುಗೆಡವಲಾಯಿತು ಅಥವಾ ನಾಶಮಾಡಲಾಚಿತು. 550 ಅಂಚೆ ಕಚೇರಿಗಳಿಗೆ ದಾಳಿ ಮಾಡಲಾಯಿತು ಮತ್ತು 50 ಅಂಚೆ ಕಛೇರಿಗಳನ್ನು ಸುಟ್ಟು ಹಾಕಲಾಯಿತು. ಅಲ್ಲದೆ 3,500 ಸ್ಥಳಗಲ್ಲಿ ದೂರವಾಣಿ ಮತ್ತು ತಂತಿಗಳನ್ನು ಕತ್ತರಿಸಲಾಚಿತು. 70 ಪೋಲಿಸ್‌ಠಾಣೆಗಳನ್ನೂ ಇತರ ಸರಕಾರಿ ಕಟ್ಟಡಗಳನ್ನು ಸುಡಲಾಯಿತು ಎಂದು ಕಾಂಗ್ರೆಸಿನ ಇತಿಹಾಸಕಾರರು ಹೇಳುತ್ತಾರೆ. 11 ಮಂದಿ ಸೈನಿಕರನ್ನು ಕೊಲ್ಲಲಾಯಿತು ಮತ್ತು 7 ಮಂದಿಯನ್ನು ಗಾಯಗೊಳಿಸಲಾಯಿತು. 900 ಮಂದಿ ಪೋಲಿಸರು ಸತ್ತರು ಮತ್ತು ಅನೇಕರ ಗಾಯಗೊಂಡರು. ಈ ಅಂಕೆ ಸಂಖ್ಯೆಗಳು ಬಹುಶಃ ಅನಧಿಕೃತವು ಅಪೂರ್ಣವೂ ಆಗಿದೆ. ಆದರೆ ನಡೆದಿರಬಹುದಾಗ ಗೊಂದಲಗಳ ಸ್ವರೂಪ ಎಂತಹುದೆಂದು ನಮಗೆ ಇವುಗಳಿಂದ ಅರಿವಾಗುತ್ತದೆ ಇದು ಎಲ್ಲಾ ರಾಜ್ಯಗಳಲ್ಲಿಯೂ ನಡೆದಂತಹ ಚಳುವಳಿಯಾಗಿತ್ತು.

ಆಂದೋಲನದ ಅವಧಿ ಚುಟುಕಾಗಿತ್ತು. 1942ಅಕ್ಟೋಬರ್ ವೇಳೆ ಬಹಿರಂಗ ಚಳುವಳಿಯನ್ನು ಹತ್ತಿಕ್ಕಲಾಯಿತು. ಆದರೆ ಭೂಗತ ಚಟುವಟಿಕೆಗಳು 1943ರ ಪ್ರಾರಂಭದವರೆಗೂ ಮುಂದುವರಿದವು. ಅವುಗಳನ್ನು ಮುಖ್ಯವಾಗಿ ಜಯಪ್ರಕಾಶ ನಾರಾಯಣ ಅವರು ಸಂಘಟಿಸಿದ್ದರು. ಅವರು ಗಾಂಧೀಜಿಯವರ ನೀತಿಯನ್ನು ಬಹಿರಂಗವಾಗಿ ಅಲ್ಲಗಳೆದು, ಹಿಂಸೆ ಮತ್ತು ಸಾಮೂಹಿಕ ಕ್ರಾಂತಿಯ ಮಾರ್ಗವನ್ನು ಬೋಧಿಸಿದರು. ಅಹಿಂಸಾತ್ಮಕ ಮಾರ್ಗವು 1942 ಆಗಸ್ಟ್ 8ರ ಕಾಂಗ್ರೆಸಿನ ನಿರ್ಣಯಕ್ಕೆ ಸಂಗತವಾಗಿತ್ತೆಂದು ಅವರು ಭಾವಿಸಿದ್ದರು. ಆದರೆ ಈ ಚಳುವಳಿಯನ್ನು ಹತ್ತಿಕ್ಕಲು ಸರ್ಕಾರ ಧಮನಕಾರಿ ಕಾರ್ಯಕ್ರಮವನ್ನು ತೆಗೆದುಕೊಂಡಿತು. ಗ್ರಾಮೀಣ ಜನರು, ಹೆಂಗಸರು, ಮಕ್ಕಳೆನ್ನದೇ ಎಲ್ಲರ ಮೇಲೂ ಅಧಿಕಾರಿಗಳು, ಸೈನಿಕರು ಧಾಳಿಮಾಡಿ ಈ ಚಳುವಳಿಯನ್ನು ಹತ್ತಿಕ್ಕಿದರು. ಸಂಶಯ ಬಂದ ಮನೆಗಳು, ಸಂಸ್ಥೆಗಳು ಮತ್ತು ವ್ಯಕ್ತಿಗಳನ್ನು ಸೆರೆಹಿಡಿದು ಶಿಕ್ಷಿಸಿ ಸಂಸ್ಥೆಗಳು ಮತ್ತು ಮನೆಗಳನ್ನು ಬೆಂಕಿಗೆ ಆಹುತಿ ನೀಡಿದರು. ಬ್ರಿಟಿಷರು ಪೋಲಿಸ್ ಮತ್ತು ಮಿಲಿಟರಿಯಿಂದ ಸಾಕಷ್ಟು ಜನರು ಹಿಂಸೆ, ಮತ್ತು ಸಾವಿಗೊಳಗಾದರು. ಸಾವಿರಾರು ಮಂಧಿಯನ್ನು ಸೆರೆಹಿಡಿದು ಜೈಲಿಗೆ ಹಾಕಲಾಯಿತು.

## 22.4 ಕ್ವಿಟ್ ಇಂಡಿಯಾ ಚಳುವಳಿಯ ವಿಫಲತೆ

ಅಸಹಕಾರ ಚಳವಳಿ ಮತ್ತು ಕಾನೂನುಭಂಗ ಚಳವಳಿಗಳಂತೆ ಚಲೇ ಜಾವ್ ಚಳುವಳವೂ ತತ್‌ಕ್ಷಣದ ಯಾವುದೇ ರಾಜಕೀಯ ಉದ್ದೇಶವನ್ನು ಸಾಧಿಸಲಿಲ್ಲವಾದರೂ ಸಂಪೂರ್ಣ ವಿಫಲವಾಗಿರಲಿಲ್ಲ. ಭಾರತದ ಜನರು ಸ್ವತಂತ್ರರಾಗರು ಹೊಂದಿದ್ದ ಆಶಯವನ್ನೂ ಅದು ಸ್ಪಷ್ಟವಾಗಿ ಅಭಿವ್ಯಕ್ತಗೊಳಿಸಿತು. ಬ್ರಿಟಿಷರ ಆಳ್ವಿಕೆಯು ಇಲ್ಲಿ ದೀರ್ಘಕಾಲ ಬಾಳದು ಎಂಬ ಅಭಿಪ್ರಾಯವು ಈ ಚಳುವಳಿಯಿಂದ ಪುಷ್ಟಿಗೊಂಡಿತು.

"ಗಾಂಧೀಜಿಯವರು ಶಿಫಾರಸ್ಸು ಮಾಡಿದ "ಮಾಡು ಇಲ್ಲವೇ ಮಡಿ"ಎಂಬ ವಿಧಾನದಿಂದ ಬ್ರಿಟಿಷರನ್ನು ಭಾರತದಿಂದ ತೊಲಗಿಸಲು ಸಾಧ್ಯವಿಲ್ಲವೆಂಬುದು 1942ರ ದುರಂತದ ಘಟನೆಗಳಿಂದ ಗೊತ್ತಾಯಿತು. ಇದರ ಬದಲಿ ವಿಧಾನವಾಗಿ ಸುಭಾಶ್‌ಚಂದ್ರಬೋಸರು ಭಾರತದ ಗಡಿಯಾಚೆಯಿಂದ ಎಸಗಿತ ಬೃಹತ್ ಪ್ರಮಾಣದ ಸೇನಾಕಾರ್ಯಚರಣೆಯೂ ವಿಫಲವಾಯಿತು. ಚಲೇ ಜಾವ್ ಚಳುವಳಿಯು ಕೊನೆಯ ಕ್ರಾಂತಿಯಕಾರೀ ಹೋರಾಟವಾಗಿತ್ತು. ಒಂದು ದೃಷ್ಟಿಯಿಂದ ಅದು ಗಾಂಧೀಯುಗದ ಇತಿಹಾಸದ ಕೊನೆಯ ಅಧ್ಯಾಯವಾಗಿತ್ತು. ಕೊನೆಗೆ ಬ್ರಿಟಿಷರು ಹಿಟ್ಲರನ ಹೋರಾಟದಿಂದ ತತ್ತರಿಸಿದ ಕಾಲದಲ್ಲಿ ಮತ್ತು ಭಾರತದ ನಾಯಕತ್ವವನ್ನು ನೆಹರೂ ಮತ್ತು ಪಟೇಲ್ ವಹಿಸಿಕೊಂಡಿದ್ದ ಕಾಲದಲ್ಲಿ ಸಂಧಾನ ಹಾಗೂ ರಾಜಿಯ ಮೂಲಕ ದೇಶಕ್ಕೆ ಸ್ವಾತಂತ್ರ್ಯ ಬಂತು. "ಎಂಬುದಾಗಿ ಡಾ. ಎ.ಸಿ. ಬ್ಯಾನರ್ಜಿಯವರು ಹೇಳಿದ್ದು ಸೂಕ್ತವೇ ಆಗಿದೆ.

ಚಲೇಜಾವ್ ಚಳುವಳಿಯು ವಿಫಲವಾಗಲು ಅನೇಕ ಸಂಗತಿಗಳು ಕಾರಣವಾಗಿದ್ದವು. ಮೊದಲನೆಯದಾಗಿ, ಸರಕಾರವು ಬಂಡಾಯವನ್ನು ದಮನ ಮಾಡಲು ದೃಢ ಸಂಕಲ್ಪ ತಳೆದಿತ್ತು. ಬಂಡಾಯಗಾರರ ಮೇಲೆ ಸರಕಾರದ ಹೊಡೆತವು ಅನಿರೀಕ್ಷಿತವಾಗಿ ಮತ್ತು ಎಣಿಸಲಾರದಷ್ಟು ತೀವ್ರವಾಗಿ ಬಿದ್ದಿತು. ಬರ್ಮಾದಲ್ಲಿ ಜಪಾನೀಯರು ಭಾರತ ಸರ್ಕಾರವನ್ನು ಪೇಚಿನಲ್ಲಿ ಸಿಲುಕಿಸುವಂತಹ ಯಾವ ಕೆಲಸವನ್ನೂ ಮಾಡಲಿಲ್ಲ. ಎರಡನೆಯದಾಗಿ, ಬಂಡಾಯಗಾರರ ಚಟುವಟಿಕೆಗಳು, ಸಂಯೋಜಿತವೂ ಸುಸಂಘಟಿತವೂ ಆಗಿರಲಿಲ್ಲ. ಮೂರನೆಯದಾಗಿ, ಬೇರೆ ಯಾವ ಸಂಘಟಿತ ರಾಜಕೀಯ ಪಕ್ಷವೂ ಆಂದೋಲನವನ್ನು ಬೆಂಬಲಿಸಲು ಮುಂದೆ ಬರಲಿಲ್ಲ. ಜಿನ್ನಾ ಆಂದೋಲನವನ್ನು ಖಂಡಿಸಿದರು. ಅದು, ಮುಸಲ್ಮಾನರು ಕಾಂಗ್ರೆಸಿನ ಶರ್ತಗಳಿಗೆ ಹಾಗೂ ಇಚ್ಚೆಗೆ ಮಣಿಸುವ ಯತ್ನ ಎಂದು ಮುಸ್ಲಿಂಲೀಗ್ ವರ್ಣಿಸಿತು. ಯಾವ ರೀತಿಯಲ್ಲೂ ಆಂದೋಲನದಲ್ಲಿ ಭಾಗವಹಿಸಬಾರದು. "ಎಂದು ಲೀಗ್ ಮುಸಲ್ಮಾನರಿಗೆ ಕರೆ ನೀಡಿತು. ಕಮ್ಯೂನಿಸ್ಟ್ ಪಕ್ಷವು ಆಂದೋಲನವನ್ನು ಸಕ್ರಿಯವಾಗಿ ವಿರೋಧಿಸಿತು. ಉಗ್ರಗಾಮಿ ಕ್ರಾಂತಿಕಾರಿ ಗುಂಪುಗಳು ಆಂದೋಲನದಲ್ಲಿ ಸೇರಿದರೂ ಈ ಗುಂಪುಗಳಿಗೆ ತಮ್ಮವರೇ ಆದ ಬೇರೆ ಬೇರೆ ನಾಯಕರಿದ್ದರು. ಬೇರೆ ಬೇರೆ ನೀತಿಗಳಿದ್ದವು. ಅಲ್ಲದೆ ಅವುಗಳ ಚಟುವಟಿಕೆಗಳೂ ಸುಸಂಘಟಿತವಾಗಿರಲಿಲ್ಲ. ಈ ಚಳುವಳಿಯು ಸರಿಯಾದ ಸಂಯೋಜನೆಯಲ್ಲದೆ ಸರಿಯಾದ ಸಂಪರ್ಕ ಸಾಧನಗಳ ಕೊರತೆ, ಇತರೇ ಪಕ್ಷಗಳ ಸಹಕಾರದ ಕೊರತೆ, ಗಾಂಧೀಜಿಯವರ ಲೆಕ್ಕಾಚಾರ ತಪ್ಪಾಗಿದ್ದುದು ಮತ್ತು ಸೇವೆಯಲ್ಲಿದ್ದ ಜನರು ರಾಜಭಕ್ತಿ ಮತ್ತು ಅಧಿಕಾರಿಗಳು ಇವುಗಳೆಲ್ಲವೂ ಸೇರಿ ಈ ಚಳುವಳಿಯನ್ನು ವಿಫಲವಾಗಿಸಲು ಕಾರಣವಾದವೆಂದು ಹೇಳಬಹುದು.

ಆದರೂ ಈ ಚಳುವಳಿಯನ್ನು ಒಂದು ರೀತಿಯಲ್ಲಿ ರಾಷ್ಟ್ರೀಯ ಚಳುವಳಿಗೆ ಮತ್ತು ಸ್ವಾತಂತ್ರ್ಯ ಪಡೆದುಕೊಳ್ಳಲು ಅಂತಿಮ ಅಸ್ತ್ರವಾಗಿತ್ತೆಂದು ಹೇಳಬಹುದು. ದೇಶದಾದ್ಯಂತ ಎಲ್ಲರೂ ಸಹಕಾರ ನೀಡಿ ಮಾಡಿದಂತಹ ಚಳುವಳಿ ಇದಾಗಿತ್ತು. ಇದು ಇತಿಹಾಸದಲ್ಲಿ ಮಹತ್ವವಾದ ಹಂತವೆಂದು ಹೇಳಬಹುದು. ಈ ಚಳುವಳಿಯು ಬ್ರಿಟಿಷರು ಇನ್ನು ಇಲ್ಲಿ ಹೆಚ್ಚು ದಿನ ಇರಲು ಅಸಾಧ್ಯ ಎನ್ನುವುದನ್ನು ಅರಿಯುವಂತೆ ಮಾಡಿತು. ಇದರಿಂದ ಅವರೂ ಸಹ ದೇಶವನ್ನು ಬಿಡಲು ತೀರ್ಮಾನಿಸಿದರು. ಇದಲ್ಲದೇ ಭಾರತೀಯ ಸೇನೆ, ಭಾರತೀಯ ಆಡಳಿತಗಾರರು, ಪೋಲಿಸರು, ಸೈನ್ಯ ಮುಂತಾದವುಗಳು ಶಾಶ್ವತವಾಗಿ ತಮಗೆ ಸೇವೆಸಲ್ಲಿಸಲಾರರು ಎಂಬುದನ್ನು ಅರಿತು ಭಾರತಕ್ಕೆ ಸ್ವಾತಂತ್ರ್ಯವನ್ನು ನೀಡಲು ಮನಸ್ಸು ಮಾಡಿರೆಂದು ಹೇಳಬಹುದು.

## 22.5 ಘಟಕದ ಸಾರಾಂಶ

ಈ ಕ್ವಿಟ್ ಇಂಡಿಯಾ ಚಳುವಳಿಯು ಭಾರತೀಯ ಸ್ವಾತಂತ್ರ್ಯ ಚಳುವಳಿಯ ಯಶಸ್ವಿ ಕಾರ್ಯಕ್ರಮವಾಯಿತು. ಬ್ರಿಟಿಷರು ಭಾರತವನ್ನು ಬಿಡಲು ತೀರ್ಮಾನ ಮಾಡಿದರು, ಎಲ್ಲಾ ಜನರೂ ಸಹ ಸಹಕಾರ ನೀಡಿದರು. ಎಲ್ಲಾ ನಾಯಕರೂ, ಎಡಪಂಥೀಯರೂ ಸಹ ಸಹಕಾರ ನೀಡಿ ಯಶಸ್ವಿಗೊಳಿಸಿದರು.

## 22.6 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಕ್ವಿಟ್ ಇಂಡಿಯಾ ಚಳುವಳಿಯ ಕಾರಣ ಮತ್ತು ಪರಿಣಾಮಗಳನ್ನು ತಿಳಿಸಿ.

2. ಕ್ವಿಟ್ ಇಂಡಿಯಾ ಚಳುವಳಿಯ ವಿವಿಧ ಹಂತಗಳನ್ನು ತಿಳಿಸಿ.

## 22.7 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


1. Sumit Sarkar - Modern India

2. ನರೇಂದ್ರ ಪ್ರಸಾದ್ ಮತ್ತು ಇತರರು - ಭಾರತ ಸ್ವಾತಂತ್ರ್ಯ ಚಳುವಳಿ

# ಘಟಕ 23 ಸುಭಾಷ್‌ಚಂದ್ರಬೋಸ್ ಮತ್ತು ಇಂಡಿಯನ್ ನ್ಯಾಷನಲ್ ಆರ್ಮಿ

ವಿಷಯಸೂಚಿ

## 23.0 ಉದ್ದೇಶಗಳು

ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಎಡಪಂಥೀಯ ನಾಯಕರಾದ ಸುಭಾಷ್‌ಚಂದ್ರಬೋಸ್ 1920-40 ರವರೆಗೂ ಎಲ್ಲರೊಂದಿಗಿದ್ದು ಸ್ವಾತಂತ್ರ್ಯಕ್ಕಾಗಿ ಹೋರಾಡಿದ್ದನ್ನು ಇಲ್ಲಿ ಅಧ್ಯಯನ ನಡೆಸುತ್ತೇವೆ. ನಂತರದಲ್ಲಿ ಇವರು ಭಾರತದ ಹೊರಗೆ ಹಲವು ದೇಶಗಳು ಫ್ರಾನ್ಸ್, ಜರ್ಮನಿ, ಜಪಾನ್ ಮುಂತಾದವುಗಳ ನೆರವಿನಿಂದ ಆಜಾದ್ ಹಿಂದ್ ಫೌಜ್‌ನ್ನು ಸ್ಥಾಪಿಸಿ, ಬ್ರಿಟಿಷರರಿಗೆ ಸಿಂಹಸ್ವಪ್ನವಾಗಿ ಹಲವಾರು ದಂಗೆಗಳಲ್ಲಿ ಭಾಗವಹಿಸಿ, ಹಲವು ಪ್ರದೇಶಗಳನ್ನು ವಶಪಡಿಸಿಕೊಂಡು ಭಾರತದ ಸ್ವತಂತ್ರಕ್ಕಾಗಿ ಹಿಂಸೆಯೇ ಪರಮಮೂಲವೆಂದು ತಿಳಿದು ಹೋರಾಡಿದರು. ಆದರೆ ದುರದೃಷ್ಟವಶಾತ್ ವಿಮಾನ ಅಪಘಾತದಲ್ಲಿ ನಿಧನರಾದರು. ಇವರ ಪಾತ್ರ ಸ್ವಾತಂತ್ರ್ಯ ಚಳುವಳಿಯಲ್ಲಿ ಅಪಾರವಾಗಿರುವುದನ್ನು ತಿಳಿಯುತ್ತೇವೆ.

## 23.1 ಪೀಠಿಕೆ

ಭಾರತೀಯರನ್ನು ಅದರಲ್ಲೂ ಯುವಕರನ್ನು ಬಡಿದೆಬ್ಬಿಸಿದ ಒಬ್ಬ ಧೈರ್ಯಶಾಲಿ ಮಾಡಲಾಗುವುದು. ಗಾಂಧೀಜಿಯವರನ್ನು ತತಾತತ್ವಿಕವಾಗಿ ವಿರೋಧಿಸಿ, ಅಹಿಂಸೆಯಿಂದ ಮತ್ತು ಪ್ರಯೋಗಶೀಲ ನಾಯಕರಾದ ಸುಭಾಷ್‌ಚಂದ್ರಬೋಸ್‌ರು ರಾಷ್ಟ್ರೀಯ ಚಳುವಳಿಯಲ್ಲಿ ನಿರ್ವಹಿಸಿದ ಪಾತ್ರವನ್ನು ಅಧ್ಯಯನ ಮಾಡಲಾಗುವುದು. ಗಾಂಧೀಜಿಯವರನ್ನು ತಾತ್ವಿಕವಾಗಿ ವಿರೋಧಿಸಿ ಅಹಿಂಸೆಯಿಂದ ಸ್ವಾತಂತ್ರ್ಯಸಿಗದೆಂದು ತಿಳಿದು ಆಜಾದ್ ಹಿಂದ್ ಫೌಜ್‌ನ್ನು ಸ್ಥಾಪಿಸಿ ಹೋರಾಟ ನಡೆಸಿದರು. ಇವರ ಅಧಿಕಾರದಲ್ಲಿ ಬಂಗಾಳದ ಆಡಳಿತದಲ್ಲಿ ಆದ ಅನೇಕ ಅಭಿವೃದ್ಧಿ ಕಾರ್ಯಗಳು ಸುತ್ಯಾರ್ಹವಾಗಿದೆ. ಇವರು ವಿದೇಶೀಯ ನೆರವನ್ನು ಪಡೆದು ತಮ್ಮದೇ ಸೈನ್ಯಸ್ಥಾಪಿಸಿ ಭಾರತದ ಮೇಲೆ ಧಾಳಿಮಾಡಿ ಅನೇಕ ಪ್ರದೇಶಗಳನ್ನು ವಶಪಡಿಸಿ ಇನ್ನೇನು ಯಶಸ್ವಿಯಾಗುವುದರಲ್ಲಿದ್ದಾಗ ವಿಮಾನ ಅಪಘಾತದಲ್ಲಿ ತೀರಿಹೋದರು. ಆದರೂ ಇವರ ಸಾಹಸ ಕಾರ್ಯಗಳು ಇಡೀ ದೇಶಕ್ಕೆ ಮಾದರಿಯಾಗಿವೆ.

## 23.2 ಸುಭಾಷ್‌ಚಂದ್ರಬೋಸ್ ಮತ್ತು ಆಜಾದ್ ಹಿಂದ್ ಫೌಜ್

ಬಾಲ್ಯದಲ್ಲಿ ಸುಭಾಸ್‌ಚಂದ್ರಬೋಸ್ ಅವರ ಮೇಲೆ ತಂದೆ ಮತ್ತು ತಾಯಿಯ ಪ್ರಭಾವ ಅಪಾರವಾಗಿತ್ತು. ಅದರಲ್ಲೂ ವಿಶೇಷವಾಗಿ ಅವರಿಗೆ ಧಾರ್ಮಿಕ ಪ್ರವೃತ್ತಿ ತಾಯಿಯಿಂದ ಬಂದಿತ್ತು. ಆದರೆ ಕಟಕ್‌ನ ರೇವನ್‌ಶಾ ಕಾಲೇಜ್ ಸ್ಕೂಲಿನ ಮುಖ್ಯೋಪಾಧ್ಯಾಯರಾದ ಶ್ರೀ ಬೇನೀಮಾಧವ ದಾಸರು ಅವರ ಮೇಲೆ ತಂದೆ ತಾಯಿಗಳಿಗಿಂತಲೂ ಹೆಚ್ಚು ಪ್ರಬಾವ ಬೀರಿದ್ದರು. ಅವರು ಮುಖ್ಯೋಪಾಧ್ಯಾಯರನ್ನು ಹೆಚ್ಚು ಕಡಿಮೆ ದೇವಮಾನವರೆಂದು ಪೂಜಿಸುತ್ತಿದ್ದರು. ಅವರೆಡೆಗೆ ಬಹಳವಾಗಿ ಆಕರ್ಷಿತರಾಗಿದ್ದರು. ತಾರುಣ್ಯದಲ್ಲಿ ಸ್ವಾಮಿ ವಿವೇಕಾನಂದರ ಜೀವನ ಮತ್ತು ಬೋಧನೆಗಳು ಅವರ ಮೇಲೆ ಪ್ರಭಾವ ಬೀರಿದವು.

ಸುಭಾಷ್‌ಚಂದ್ರಬೋಸ್ ಕಲ್ಕತ್ತ ವಿಶ್ವವಿದ್ಯಾನಿಲಯದಲ್ಲಿ ಓರ್ವ ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದರು. ಅವರು ಲಂಡನ್ನಿನಲ್ಲಿ ಐ.ಸಿ.ಎಸ್. ಪರೀಕ್ಷೆಯಲ್ಲಿ ನಾಲ್ಕನೇ ಸ್ಥಾನ ಪಡೆದು ಉತ್ತೀರ್ಣರಾದರು. ಅನಂತರ ಸರಕಾರಿ ಹುದ್ದೆಗೆ ನೇಮಕವಾದರೂ ಅದಕ್ಕೆ ರಾಜೀನಾಮೆ ನೀಡಿದರು. ತಾಯ್ನಾಡಿಗೆ ಮರಳಿ ಬಂದ ಅವರು ಚಿತ್ತರಂಜನ್ ದಾಸ್ ಅವರೊಂದಿಗೆ ರಾಜಕೀಯಕ್ಕೆ ದುಮುಕಿದರು.

ಸುಭಾಷರು ಕ್ರಾಂತಿಕಾರೀ ವಿಚಾರಗಳನ್ನು ಹೊಂದಿದ್ದರು. ಉಗ್ರಗಾಮಿ ರಾಷ್ಟ್ರವಾದಿಗಳೊಂದಿಗೆ ಸಂಪರ್ಕ ಇಟ್ಟುಕೊಂಡಿದ್ದರು. 1928ರಲ್ಲಿ ಕಲ್ಕತ್ತದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಅವರು ನೆಹರೂ ವರದಿಯ ಆಧಾರದ ಸ್ವಯಂ ಆಡಳಿತ ಸ್ಥಾನ ಮಾನವ (ಡೊಮಿನಿಯನ್ ಸ್ಟೇಟಸ್) ಬೇಡಿಕೆಯನ್ನು ವಿರೋಧಿಸಿದರು. ಸಂಪೂರ್ಣ ಸ್ವಾತಂತ್ರ್ಯ ಲಭಿಸಬೇಕೆಂದು ಪ್ರಬಲವಾಗಿ ವಾದಿಸಿದರು. ಆದರೆ ಗಾಂಧೀಜಿಯವರ ಧ್ಯೇಯ ಮತ್ತು ರಾಜಕೀಯ ನೀತಿಯನ್ನು ಒಪ್ಪಿಕೊಳ್ಳಲು ಅವರಿಗೆ ಸಾದ್ಯವಾಗಲಿಲ್ಲ. ಗಾಂಧೀಜಿಯವರು ಲಾರ್ಡ್ ಇರ್ವಿನ್‌ನೊಂದಿಗೆ ಒಪ್ಪಂದ ಮಾಡಿಕೊಂಡಾಗ ಅವರಿಗೆ ತೀರಾ ಅಸಮಾಧಾನವಾಯಿತು. ಸುಭಾಷರು ಕಾಂಗ್ರೆಸಿನ ತರುಣ ವಿಭಾಗದ ಪ್ರಮುಖ ವಕ್ತಾರರಾಗಿದ್ದರು.

1938ರಲ್ಲಿ ಹರಿಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿ ಸುಭಾಷ್‌ಚಂದ್ರಬೋಸರು ಅವಿರೋಧವಾಗಿ ಆಯ್ಕೆಯಾದರು. ಕೆಲವು ಪ್ರಮುಖ ನಿರ್ಣಯಗಳು ಈ ಅಧಿವೇಶನದಲ್ಲಿ ಅಂಗೀಕೃತವಾದವು. ಮೊದಲನೆಯದಾಗಿ, ಭಾರತದ ರಾಜ್ಯಗಳಲ್ಲಿ ಜನರ ಆಂದೋಲನಕ್ಕೆ ಕಾಂಗ್ರೆಸು ನೈತಿಕ ಬೆಂಬಲವನ್ನು ಸಾರಿತು. ಎರಡನೆಯದಾಗಿ, ಭಾರತವು ಸಾಮ್ರಾಜ್ಯವಾದಿ ಸಮರದಲ್ಲಿ ಪಾಲ್ಗೊಳ್ಳದೆಂದು ಘೋಷಿಸುವ ನಿರ್ಣಯವೂ ಅಧಿವೇಶನದಲ್ಲಿ ಅಂಗೀಕೃತವಾಯಿತು.

## 23.3 ತ್ರಿಪುರ ಕಾಂಗ್ರೆಸ್ ಅಧಿವೇಶನ (1939)

ಸುಭಾಷ್‌ಚಂದ್ರಬೋಸ್ ಮತ್ತು ಗಾಂಧೀಜಿಯವರ ನಡುವೆ ಅನೇಕ ಭಿನ್ನಾಭಿಪ್ರಾಯಗಳು ಬೆಳೆದು ಬಂದುವು. ಮೊದಲನೆಯದಾಗಿ, ಭಾರತವು ಬ್ರಿಟನಿನೊಂದಿಗೆ ಯಾವುದೇ ರೀತಿಯ ರಾಜೀ ಮಾಡಿಕೊಳ್ಳುವುದನ್ನು ಬೋಸರು ವಿರೋಧಿಸಿದರು. ಇದರಿಂದ ಗಾಂಧೀಜಿಯವರ ನಿಕಟವರ್ತಿಗಳಿಗೆ ತೀವ್ರ ಅಸಮಾಧಾನವಾಯಿತು. ಎರಡನೆಯದಾಗಿ ಬ್ರಿಟನ್ ಮತ್ತು ಜರ್ಮನಿಯ ನಡುವೆ ಆಗುವ ಯುದ್ಧವು ಅನಿವಾರ್ಯವೆಂದು ಬೋಸ್ ಭಾವಿಸಿದರು. ಯುದ್ಧದ ವೇಲೆ ಬ್ರಿಟನ್ನಿಗೊದಗುವ ಗಂಡಾಂತರವನ್ನು ತನ್ನ ಲಾಭಕ್ಕೆ ಉಪಯೋಗಪಡಿಸಿಕೊಂಡರೆ, ಭಾರತದವು ಸ್ವತಂತ್ರವಾಗಲು ಸುಲಭಸಾಧ್ಯವಾಗಬಹುದೆಂದು ಅವರು ಆಶಿಸಿದರು. ಆದರೆ ಗಾಂಧೀಜಿ ಮತ್ತು ನೆಹರೂರವರು ಬ್ರಿಟನಿನ ಗಂಡಾಂತರದ ದುರ್ಲಾಭ ಪಡೆಯುವುದನ್ನು ತೀವ್ರವಾಗಿ ವಿರೋಧಿಸಿದರು. ಮೂರನೆಯದಾಗಿ, ಬ್ರಿಟನ್ ಜರ್ಮನ್ ಯುದ್ಧವನ್ನು ನಿರೀಕ್ಷಿಸಿದ ಬೋಸರು ಭಾರತೀಯರನ್ನು ಸ್ವಾತಂತ್ರ್ಯ ಸಮರಕ್ಕೆ ಸಜ್ಜುಗೊಳಿಸಲು ಭಾರತಾದ್ಯಂತ ಬಹಿರಂಗ ಪ್ರಚಾರ ಕೈಗೊಂಡರು. ದೇಶದ ಹಲವು ಪ್ರಾಂತೀಯ ಸರಕಾರಗಳನ್ನು ನಡೆಸುತ್ತಿದ್ದಂತಹ ಗಾಂಧೀವಾದಿಗಳು ಅದನ್ನು ವಿರೋಧಿಸಿದರು. ನಾಲ್ಕನೆಯದಾಗಿ, ಗಾಂಧೀಜಿಯವರು ಉದ್ಯಮೀಕರಣದ ವಿರೋಧಿಯಾಗಿದ್ದರು. ಆದರೆ ಬೋಸರು ಉದ್ಯಮೀಕರಣದ ಆಧಾರದಲ್ಲಿ ದೇಶದ ಆರ್ಥಿಕ ಅಭಿವೃದ್ಧಿಗೆಂದು ವ್ಯಾಪಕ ಯೋಜನೆಯನ್ನು ರೂಪಿಸಿ, ಅದಕ್ಕೋಸ್ಕರ ಒಂದು ರಾಷ್ಟ್ರೀಯ ಯೋಜನಾ ಸಮಿತಿಯನ್ನು ನೇಮಿಸಿದರು.

ಈ ಎಲ್ಲಾ ಭಿನ್ನಾಭಿಪ್ರಾಯಗಳಿಂದಾಗಿ ಕಾಂಗ್ರೆಸಿನ ತ್ರಿಪುರ ಅಧಿವೇಶನದಲ್ಲಿ (1939) ಅಧ್ಯಕ್ಷರ ವಿಷಯದಲ್ಲಿ ಬಿಕ್ಕಟ್ಟು ಉಂಟಾಯಿತು. 1920 ರಿಂದ 1938 ರವರೆಗೆ ಕಾಂಗ್ರೆಸ್ ಪಕ್ಷದಲ್ಲಿ ಅಧ್ಯಕ್ಷರ ಚುನಾವಣೆಯು ಕೇವಲ ಒಂದು ಅನಧಿಕೃತ ಆಜ್ಞೆಯಂತಿತ್ತು. ಗಾಂಧೀಜಿಯವರು ಸೂಚಿಸಿದ ಅಭ್ಯರ್ಥಿಗಳೇ ಯಾವಾಗಲೂ ಆಯ್ಕೆಯಾಗುತ್ತಿದ್ದರು. ಬೋಸರನ್ನು ಹರಿಪುರ ಅಧಿವೇಶನಕ್ಕೆ (1938) ಅಧ್ಯಕ್ಷರನ್ನಾಗಿ ಗಾಂಧೀಜಿಯವರು ಆರಿಸಿದ್ದರು. ಅವರಿಗೆ ಎರಡನೆಯ ಬಾರಿ ಈ ಪದವಿಯನ್ನು ನೀಡಲು ಗಾಂಧೀಜಿಯವರು ಸಿದ್ಧರಿರಲಿಲ್ಲ. ಅವರಿಗೆ ಎರಡನೆಯ ಬಾರಿ ಈ ಪದವಿಯನ್ನು ನೀಡಲು ಗಾಂಧೀಜಿಯವರು ಸಿದ್ಧರಿರಲಿಲ್ಲ. ಬೋಸ್ ಸ್ಪರ್ಧಿಸದಂತೆ ಅವರ ಮನವೊಲಿಸಲು, ಮಾಡಿದ ಪ್ರಯತ್ನಗಳು ವಿಫಲವಾದವು. ಗಾಂಧೀಜಿಯವರು ಪಟ್ಟಾಭಿಸೀತಾರಾಮ್ಮನವರನ್ನು ಆರಿಸಿದರು. ಆಗ ಅಷ್ಟೇನೂ ಪ್ರಸಿದ್ಧರಲ್ಲದ ಸೀತಾರಾಮಯ್ಯನರವನ್ನು ಬೋಸರ ವಿರುದ್ಧ ನಿಲ್ಲಿಸಲು ಗಾಂಧೀಜಿಯವರು ತನ್ನ ಸರ್ವಶಕ್ತಿಯನ್ನು ತೊಡಗಿಸಿದರು. ಆದರೆ ಬೋಸರು 95ಮತಗಳ ಬಹುಮತದಿಂದ ಗೆದ್ದರು. ಇದರಿಂದ ನೊದ ಗಾಂಧೀಜಿಯವರು, "ಈ ಸೋಲು ಪಟ್ಟಾಭಿಯವರದಕ್ಕಿಂತಲೂ ಹೆಚ್ಚಾಗಿ ನನ್ನದು." ಎಂದು ಬಹಿರಂಗವಾಗಿ ಹೇಳಿದರು.

ಗಾಂದೀಜಿಯವರ ಈ ಹೇಳಿಕೆ ಹಲವು ಮಂದಿ ಕಾಂಗ್ರೆಸ್ ನಾಯಕರ ಮೇಲೆ ಪರಿಣಾಮ ಬೀರಿತು. ಅವರು ಬೋಸರನ್ನು ದೂರವಿರಿಸಿ ಗಾಂಧೀಜಿಯವರ ನೇತೃತ್ವದಲ್ಲಿ ವಿಶ್ವಾಸ ಪ್ರಕಟಿಸಿದರು. 1939 ಮಾರ್ಚ್‌ನಲ್ಲಿ ತ್ರಿಪುರಿಯಲ್ಲಿ ಕಾಂಗ್ರೆಸ್ ಅಧಿವೇಶನ ಜರಗಿತು. ಬೋಸ್ ಈ ಅಧಿವೇಶನದ ಅಧ್ಯಕ್ಷರಾಗಿದ್ದರು. ಅಧಿವೇಶನದಲ್ಲಿ, ಗಾಂಧೀಜಿಯವರ ಆಶಯಕ್ಕೆ ಅನುಗುಣವಾಗಿ ಕಾರ್ಯಕಾರಿ ಸಮಿತಿಯನ್ನು ರಚಿಸಬೇಕೆಂದು ಅಧ್ಯಕ್ಷರನ್ನು ವಿನಂತಿಸುವ ಒಂದು ನಿರ್ಣಯವನ್ನು ಅಂಗೀಕರಿಸಲಾಯಿತು. ಆದರೆ ಗಾಂಧೀಜಿಯವರು ಕಾರ್ಯಕಾರಿ ಸಮಿತಿಗೆ ಯಾರ ಹೆಸರನ್ನೂ ಸೂಚಿಸಲು ನಿರಾಕರಿಸಿದರು. ಇದರಿಂದಾಗಿ 1939 ಏಪ್ರಿಲ್‌ನಲ್ಲಿ ಬೋಸರು ಅಧ್ಯಕ್ಷಸ್ಥಾನಕ್ಕೆ ರಾಜೀನಾಮೆಯಿತ್ತರು. ಪ್ರಜಾತಂತ್ರಕ್ಕನುಗುಣವಾಗಿ ಆಯ್ಕೆಯಾಗಿದ್ದ ಅಧ್ಯಕ್ಷರ ಮೇಲೆ ಗಾಂದೀವಾದಿಗಳು ಒಂದು ಶರ್ತನ್ನು ವಿಧಿಸಿದ್ದರು. ಅದು ಕಾಂಗ್ರೆಸ್ ಸಂವಿಧಾನಕ್ಕೆ ಸರಿಹೊಂದಿರಲಿಲ್ಲ. ಹೀಗೆ, ಈ ಶರ್ತದ ಮೂಲಕ ಅಧ್ಯಕ್ಷರು ರಾಜೀನಾಮೆಯನ್ನು ನೀಡುವಂತೆ ಅವರನ್ನು ಬಲಾತ್ಕರಿಸಲಾಯಿತು. ಇದರಿಂದ ಇನ್ನಷ್ಟು ಬಿಕ್ಕಟ್ಟು ನಿರ್ಮಾಣವಾಯಿತು.

## 23.4 ಫಾರ್ವರ್ಡ್ ಬ್ಲಾಕ್

ಬೋಸ್ ಕೂಡಲೇ ಕಾಂಗ್ರೆಸಿನೊಳಗೇ ಒಂದು ಕ್ರಾಂತಿಕಾರಿ ಹಾಗೂ ಪ್ರಗತಿಪರ ಪಕ್ಷವನ್ನು ರಚಿಸಿದರು. ಕಾಂಗ್ರೆಸಿನಲ್ಲಿದ್ದ ಎಲ್ಲ ವಾಮಪಂಥೀಯರನ್ನೂ ಒಂದಾಗಿ ಸಂಘಟಿಸುವುದು ಅವರ ಉದ್ದೇಶವಾಗಿತ್ತು. ಈ ಕೂಟವನ್ನು "ಫಾರ್ವರ್ಡ್ ಬ್ಲಾಕ್" ಎಂದು ಕರೆಯಲಾಯಿತು.

ಬೋಸರು ಪಕ್ಷದ ಶಿಸ್ತನ್ನು ಉಲ್ಲಂಘಿಸಿದ್ದಾರೆಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಅವರ ಮೇಲೆ ಆರೋಪ ಮಾಡಿತು. ಅವರು ಮೂರು ವರ್ಷಗಳವರೆಗೆ ಯಾವುದೇ ಚುನಾಯಿತ ಕಾಂಗ್ರೆಸ್ ಸಮಿತಿಯ ಸದಸ್ಯರಾಗಿರಲು ಅರ್ಹರಲ್ಲ ಎಂದು ಸಮಿತಿ ಘೋಷಿಸಿತು. ವಸ್ತುತಃ ಇದು ಕಾಂಗ್ರೆಸಿನಿಂದ ಬೋಸರ ಉಚ್ಚಾಟನೆಯೇ ಆಗಿತ್ತು.

ಕಾಂಗ್ರೆಸು ಭಾರತದ ಸಾಮ್ರಾಜ್ಯವಾದಿಗಳೊಂದಿಗೆ ರಾಜೀಮಾಡಿಕೊಂಡಲ್ಲಿ ಮುಂದಕ್ಕೆ ಭಾರತದ ವಾಮವಾದಿಗಳು ಸಾಮ್ರಾಜ್ಯವಾದಿಗಳ ವಿರುದ್ಧ ಮಾತ್ರವಲ್ಲದೆ ಭಾರತದಲ್ಲಿರುವ ಅವರ ಮಿತ್ರರ (ಅಂದರೆ ಕಾಂಗ್ರೆಸಿನ)ವಿರುದ್ಧವೂ ಹೋರಾಡುವರು ಎಂಬುದಾಗಿ ಬೋಸ್ ಘೋಷಿಸಿದರು. ಅಲ್ಲದೆ ಗಾಂಧೀಜಿಯವರು ಮತ್ತು ಅವರ ಅನುಯಾಯಿಗಳು 1935ರ ಕಾಯಿದೆಯ ಒಕ್ಕೂಟ ಯೋಜನೆಯನ್ನು ಒಪ್ಪುವ ಬಗ್ಗೆ ಬ್ರಿಟಿಷ್ ಸರ್ಕಾರದೊಂದಿಗೆ ರಹಸ್ಯವಾಗಿ ಸಂಧಾನ ಮಾಡುತ್ತಿದ್ದಾರೆಂದು ಬೋಸ್ ಶಂಕಿಸಿದರು. ಇಂತಹ ರಾಜಕೀಯ ಮೂಲಕ ಭಾರತವು ಸ್ವಾತಂತ್ರ್ಯ ಪಡೆಯಲಾರದೆಂದು ಅವರಿಗೆ ಮನವರಿಕೆಯಾಗಿತ್ತು. ಬ್ರಿಟನ್ ಆಗ ಯೂರೋಪಿನಲ್ಲಿ ಹಿಟ್ಲರ್‌ನೊಂದಿಗೆ ಮುಖಾಮುಖಿಯಾಗಿ ಯುದ್ಧ ನಡೆಸುತ್ತಿತ್ತು. ಬ್ರಿಟಿಷ್ ಸಾಮ್ರಾಜ್ಯವಾದದೊಂದಿಗೆ ಬಹಿರಂಗ ಸಂಘರ್ಷವೇ ಯೋಗ್ಯ ಮಾರ್ಗವೆಂದು ಬೋಸ್ ಯೋಚಿಸಿದಲು. ಅವರು 1935ರಲ್ಲಿ ವಿಯೆನ್ನಾದಲ್ಲಿದ್ದಾಗ ಅಲ್ಲಿಂದ ಬರ್ಲಿನ್‌ಗೆ ಹೋಗಿ ಹಿಟ್ಲರನನ್ನು ಭೇಟಿಯಾಗಿದ್ದರು. ಜರ್ಮನಿ ಮತ್ತು ಬ್ರಿಟನ್ ನಡುವೆ ಯುದ್ಧವಾಗುವ ಸಾಧ್ಯತೆಯ ಕುರಿತು ಹಿಟ್ಲರನೊಂದಿಗೆ ಚರ್ಚಿಸಿದ್ದರು.

1939ರಲ್ಲಿ ಕಾಂಗ್ರೆಸಿನಿಂದ ಉಚ್ಚಾಟಿತರಾದ ಬಳಿಕ ಬೋಸ್ ಫಾರ್ವರ್ಡ್ ಬ್ಲಾಕನ್ನು ಸಂಘಟಿಸಿದರು. 1940ರ ಜುಲೈಯಲ್ಲಿ ಅವರು ಬಂಧಿತರಾದರು. ಸೆರೆಮನೆಯಲ್ಲಿ ಅವರು ಉಪವಾಸ ಆರಂಭಿಸಿದರು. 1940 ದಶಂಬರದಲ್ಲಿ ಬೋಸ್ ಬಿಡುಗಡೆಯಾದರು. ಆದರೆ ಕಲ್ಕತ್ತದಲ್ಲಿ ತನ್ನ ಸ್ವಂತ ಮನೆಯಲ್ಲೇ ಗೃಹ ಬಂಧನಕ್ಕೀಡಾದರು. ಅವರ ಮೇಲೆ ಪೋಲಿಸರ ಬಲವಾದ ಕಾವಲಿತ್ತು. 1941 ಜನವರಿಯಲ್ಲಿ ಅವರು ರಹಸ್ಯವಾಗಿ ತಪ್ಪಿಸಿಕೊಂಡರು. ಅಲ್ಲಿಂದ ಪೇಶಾವರ ಮತ್ತು ಕಾಬೂಲಿನ ಮಾರ್ಗವಾದಿ ಮಾಸ್ಕೊಗೆ ಹೋದರು. 1941 ಮಾರ್ಚ್‌ನಲ್ಲಿ ಅವರು ಮಾಸ್ಕೊದಿಂದ ಬರ್ಲಿನ್‌ಗೆ ತೆರಳಿ ಅಲ್ಲಿ ತಮ್ಮ ಎರಡು ಪ್ರಸ್ತಾವಗಳಿಗೆ ಜರ್ಮನರ ಸಮ್ಮತಿ ಪಡೆದರು. ಅವುಗಳು ಯಾವುವೆಂದರೆ ಒಂದನೆಯದಾಗಿ, ಅವರು ಬರ್ಲಿನ್ ಆಕಾಶವಾಣಿಯಿಂದ ಬ್ರಿಟಿಷ್ ವಿರೋಧಿ ಪ್ರಚಾರವನ್ನು ಬಿತ್ತರಿಸುವುದು. ಎರಡನೆಯದಾಗಿ, ಅವರು ಜರ್ಮನಿಯಲ್ಲಿರುವ ಭಾರತೀಯ ಯುದ್ಧ ಕೈದಿಗಳನ್ನು ಸೇರಿಸಿಕೊಂಡು "ಭಾರತ ವಿಮೋಚನೆ ಘಟಕ"ಗಳನ್ನು ರಚಿಸುವುದು. ಇಟಲಿಯು ಜರ್ಮನಿಯ ಮಿತ್ರರಾಷ್ಟ್ರವಾದುದರಿಂದ ಅದರ ರಾಜಧಾನಿಯಾದ ರೋಮ್ ನಗರದಲ್ಲಿ "ಭಾರತ ವಿಮೋಚನಾ ಘಟಕಗಳನ್ನು ಸ್ಥಾಪಿಸಲಾಯಿತು. ಇಷ್ಟು ಮಾತ್ರವಲ್ಲದೆ ಜರ್ಮನಿಯ ಅಧೀನದಲ್ಲಿದ್ದ ಪ್ಯಾರಿಸ್ ನಗರದಲ್ಲಿಯೂ ಈ ಘಟಕಗಳನ್ನು ಸ್ಥಾಪಿಸಲಾಯಿತು. ಈ ಪಡೆಯ ಒಟ್ಟು ಸಂಖ್ಯೆ 3,000ಆಗಿತ್ತು.

## 23.5 ಜಪಾನಿನಲ್ಲಿ ಬೋಸ್

ಜಪಾನ್ 1941 ಡಿಸಂಬರ್‌ನಲ್ಲಿ ಸಮರಾಂಗಣಕ್ಕಿಳಿಯಿತು. ಅದಕೆ ಮೊದಲೇ ರಾಸ್‌ಬಿಹಾರಿ ಬೋಸ್ ಎಂಬ ಹಿರಿಯ ರಾಜಕೀಯ ಕ್ರಾಂತಿಕಾರಿ. ಜಪಾನಿನಲ್ಲಿ ರಾಜಕೀಯ ಆಶ್ರಯ ಪಡೆದಿದ್ದರು. ಜಪಾನ್ ಯುದ್ಧದಲ್ಲಿ ತೊಡಗಿದ ಬಳಿಕ ಅವರು ಆಗ ಜಪಾನಿನ ನಿಯಂತ್ರಣದಲ್ಲಿದ್ದ ಆಗ್ನೇಯ ಏಶ್ಯನ್ ದೇಶಗಳಲ್ಲಿ ವಾಸಮಾಡುತ್ತಿದ್ದ ಭಾರತೀಯರನ್ನು ಒಟ್ಟು ಸೇರಿಸಿ "ಇಂಡಿಯನ್ ಇಂಡಿಪೆಂಡೆನ್ಸ್ ಲೀಗ್"ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. 1942ರ ಆಗೋಸ್ತು ತಿಂಗಳಲ್ಲಿ ಜಪಾನಿಗೆ ಶರಣಾಗತರಾದ ಸುಮಾರು 40,000 ಮಂದಿ ಭಾರತೀಯ ಕೈದಿಗಳು ಮೋಹನಸಿಂಗ್ ಅವರ ನೇತೃತ್ವದ ಐ.ಎನ್.ಎ. (ಇಂಡಿಯನ್ ನ್ಯಾಶನಲ್ ಆರ್ಮಿ ಅಥವಾ ಆಜಾದ್ ಹಿಂದ್ ಫೌಜ್)ಯನ್ನು ಸೇರುವುದಾಗಿ ಪ್ರತಿಜ್ಞೆ ಮಾಡಿದರು. 1942 ಸೆಪ್ಟಂಬರ್ ಒಂದರಂದು ಐಎನ್‌ಐ ವಿಧ್ಯುಕ್ತವಾಗಿ ಸ್ಥಾಪನೆಯಾಯಿತು. 1943 ಜುಲೈಯಲ್ಲಿ ಬೋಸರು ಸಿಂಗಾಪುರಕ್ಕೆ ಬಂದರು. ಅಲ್ಲಿ ಇಂಡಿಯನ್ ಇಂಡಿಪೆಂಡೆನ್ಸ್ ಲೀಗ್ ಮತ್ತು ಐನ್‌ಐ ಇವುಗಳ ನಾಯಕತ್ವ ವಹಿಸಿಕೊಂಡರು. ಭಾರತೀಯರು ಅವರನ್ನು "ನೇತಾಜೀ"ಎಂದು ಕರೆಯತೊಡಗಿದರು. ಅವರು ಸಿಂಗಾಪುರದಲ್ಲಿ ಹಂಗಾಮಿ ಸ್ವತಂತ್ರ ಭಾರತ ಸರಕಾರವನ್ನು ಸ್ಥಾಪಿಸಿದರು. ಈ ಸ್ವತಂತ್ರ ಭಾರತ ಸರಕಾರಕ್ಕೆ ಜರ್ಮನಿ, ಇಟಲಿ ಮತ್ತು ಜಪಾನ್ ದೇಶಗಳು ಮಾನ್ಯತೆ ನೀಡಿದವು. ಸುಭಾಷರು ಐಎನ್‌ಎಗೆ "ದಿಲ್ಲೀಚಲೋ"ಎಂಬ ಘೋಷಣೆಯನ್ನು ನೀಡಿದರು. ಐಎನ್‌ಎಯು ಬರ್ಮಾವನ್ನು ದಾಟಿಕೊಂಡು ಭಾರತೀಯ ಪ್ರದೇಶದಲ್ಲಿ 150 ಮೈಲುಗಳಷ್ಟು ಒಳಗೆ ಬಂತು. 1944 ಮಾರ್ಚ್ 19ರಂದು ಭಾರತದ ನಲದಲ್ಲಿ ತ್ರಿವರ್ಣ ಧ್ವಜವನ್ನು ಹಾರಿಸಿತು. ಆದರೆ ಕೆಲವೆ ದಿನಗಳಲ್ಲಿ ಬ್ರಿಟಿಷರು ರಂಗೂನನ್ನು ವಶಪಡಿಸಿಕೊಂಡಿದ್ದರಿಂದ ಐಎನ್‌ಎಯ ಮುನ್ನಡೆಗೆ ತಡೆಯಾಯಿತು.

ಐಎನ್‌ಎ ಯೋಧರನ್ನು ನಿಶ್ಯಸ್ತ್ರಗೊಳಿಸಿ ಸೆರೆಮನೆಗೆ ತಳ್ಳಲಾಯಿತು. ಆಗ್ನೇಯ ಏಷ್ಯಾದಲ್ಲಿ ಭಾರತೀಯ ಸ್ವಾತಂತ್ರ ಸಂಗ್ರಾಮ ಅಂತ್ಯಗೊಂಡಿತು. 1945 ಆಗಸ್ಟ್‌ನಲ್ಲಿ ಜಪಾನ್ ಯುದ್ಧದಲ್ಲಿ ಶರಣಾದ ಬಳಿಕ ಬೋಸ್ ಫೊರ್ಮೋಸಾದ (ಈಗಿನ ತೈವಾನ್) ತೈಪೆಗೆ ಹೋದರು. ಅಲ್ಲಿ ಅವರು 1945 ಆಗಸ್ಟ್ 18 ರಂದು ವಿಮಾನ ಅಪಘಾತದಲ್ಲಿ ಮಡಿದರೆಂದು ಹೇಳಲಾಗುತ್ತದೆ.

## 23.6 ಐಎನ್‌ಎ ವಿಚಾರಣೆ ಮತ್ತು ನೌಕಾಸೇನೆಯ ದಂಗೆ (1945-46)

ಬರ್ಮಾದಲ್ಲಿ ಜಪಾನೀ ಸೇನೆಯು ಸೋತ ಬಳಿಕ ಬ್ರಿಟಿಷ್ ಸೇನೆಯ ಸುಮಾರು 20,000 ಮಂದಿ ಭಾರತೀಯ ಅಧಿಕಾರಿಗಳನ್ನು ಬಂಧಿಸಲಾಯಿತು. ಐಎನ್‌ಎ ಯ ಒಬ್ಬ ಹಿಂದೂ, ಒಬ್ಬ ಮುಸ್ಲಿಂ ಮತ್ತು ಒಬ್ಬ ಸಿಖ್ ಹೀಗೆ ಮೂವರು ಅಧಿಕಾರಿಗಳನ್ನು ಬಹಿರಂಗ ವಿಚಾರಣೆಗೆಂದು ಆರಿಸಲಾಯಿತು. ಈ ಬಹಿರಂಗ ವಿಚಾರಣೆಯು ದಿಲ್ಲಿಯ ಐತಿಹಾಸಿಕ ಕೆಂಪುಕೋಟೆಯಲ್ಲಿ ನಡೆಯಿತು. ಇದು ದೇಶಾದ್ಯಂತ ಬಹಳ ಕುತೂಹಲ ಕೆರಳಿಸಿತ್ತು. 1945-46ರಲ್ಲಿ ಕೇಂದ್ರ ಮತ್ತು ಪ್ರಾಂತೀಯ ಶಾಸಕಾಂಗಗಳಿಗೆ ನಡೆದ ಚುನಾವಣೆಯಲ್ಲಿ ಕಾಂಗ್ರೆಸು ಪ್ರಚಂಡ ಜಯಗಳಿಸಲು ಅದು ಪೂರಕವಾಯಿತು.

1946 ಫೆಬ್ರವರಿಯಲ್ಲಿ ರಾಯಲ್ ಇಂಡಿಯನ್‌ನೇವಿಯಲ್ಲಿ (ಭಾರತೀಯನೌಕಾಸೇನೆ) ಸೇವೆ ಸಲ್ಲಿಸುತ್ತಿದ್ದ ಕೆಲವರು ಭಾರತೀಯರು ದಂಗೆಯೆದ್ದರು. ವೇತನ ಮತ್ತು ಆಹಾರದ ವಿಷಯದಲ್ಲಾಗುತ್ತಿದ್ದ ಅಸಹನೀಯ ಸಂಕಷ್ಟ ಮತ್ತು ಅನ್ಯಾಯಗಳನ್ನು ಪ್ರತಿಭಟಿಸುವ ಉದ್ದೇಶದಿಂದ ಈ ದಂಗೆ ನಡೆಯಿತು. ಅಲ್ಲದೆ ನೌಕಾಸೇನೆಯಲ್ಲಿ ಅತ್ಯಂತ ಘೋರವಾದ ಜನಾಂಗಬೇಧವನ್ನು ಮಾಡಲಾಗುತ್ತಿತ್ತು. ಇವುಗಳನ್ನೆಲ್ಲ ಪ್ರತಿಭಟಿಸುವುದೇ ದಂಗೆಯ ಮುಖ್ಯ ಉದ್ದೇಶವಾಗಿತ್ತು. ಈ ದಂಗೆಯು ಭಾರತೀಯ ರಾಷ್ಟ್ರೀಯವಾದಿ ಆಶೋತ್ತರಗಳ ಒಂದು ಮುಖವಾಗಿತ್ತು. ಈ ಸಂಬಂಧವಾಗಿ ಮುಂಬಯಿಯಲ್ಲಿ ತೀವ್ರಗಲಭೆಗಳು ನಡೆದವು. ಕೆಲವು ದಿನಗಳ ಬಳಿಕ ವಲ್ಲಭಭಾಯಿ ಪಟೇಲರ ಸಲಹೆಯಂತೆ ದಂಗೆಗಾರರು ಶರಣಾದರು.

## 23.7 ಸ್ವಾತಂತ್ರ್ಯ ಚಳುವಳಿಗೆ ಸುಭಾಷ್‌ಚಂದ್ರಬೋಸರ ಕೊಡುಗೆ

ಬೋಸ್ ಅವರು ಸ್ವಾತಂತ್ರ್ಯ ಸಮರದಲ್ಲಿ ದೇಶಕ್ಕೆ ದೊಡ್ಡ ಸೇವೆ ಸಲ್ಲಿಸಿದ್ದರು. ಅವರು ಬಲಶಾಲಿ ರಾಷ್ಟ್ರವಾದಿಗಳಿಗೆ ನಾನಾ ರೀತಿಯಲ್ಲಿ ಸಹಾಯ ಮಾಡಿದರು. ಆರ್ಥಿಕ ಯೋಜನೆಯ ಕಲ್ಪನೆಯನ್ನು ಅವರೇ ಮುಂದಿಟ್ಟರು. ಕಾಂಗ್ರೆಸಿನ ರಾಜನೀತಿಯ ವಿರುದ್ಧ ಹೋರಾಡಲು ಅವರು ದೃಢ ಸಂಕಲ್ಪ ಮಾಡಿದ್ದರು. ಇದಕ್ಕಾಗಿ ಅವರರನ್ನು ಕಾಂಗ್ರೆಸಿನಿಂದ ಉಚ್ಚಾಟಿಸಲಾಯಿತು. ಅವರ ಆಕರ್ಷಕ ವ್ಯಕ್ತಿತ್ವ ಮತ್ತು ಸಮರ್ಥ ನಾಯಕತ್ವಕ್ಕೆ ಅವರು ಸಂಘಟಿಸಿದ ಐಎನ್‌ಎ ಸಾಕ್ಷಿಯಾಗಿದೆ. ಕಲ್ಕತ್ತದಿಂದ ಮಾಸ್ಕೊಗೆ ಮತ್ತು ಜರ್ಮನಿಯಿಂದ ಜಪಾನಿಗೆ ಅವರು ರಹಸ್ಯವಾಗಿ ಕೈಗೊಂಡ ಪ್ರಯಾಣಗಳು ಹಾಗೂ ಅವರು ಅನುಭವಿಸಿದ ಬವಣೆ ಇವು ಭಾರತೀಯ ಇತಿಹಾಸದ ಒಂದು ಸಾಹಸಮಯ ಗಾದೆಯಾಗಿದೆ. ಅದು ಶಿವಾಜಿಯು ಆಗ್ರಾ ಸೆರೆಮನೆಯಿಂದ ತಪ್ಪಿಸಿಕೊಂಡ ಸಾಹಸವನ್ನು ಹೋಲುತ್ತದೆ.

ಭಾರತೀಯ ಕಮ್ಯುನಿಸ್ಟರು ಬೋಸರನ್ನು "ದೇಶದ್ರೋಹಿ"ಎಂದು ಖಂಡಿಸಿದರು. ಬ್ರಿಟಿಷರ ಶತ್ರುಗಳ ಸಹಾಯದಿಂದ ಭಾರತವನ್ನು ಮುಕ್ತಗೊಳಿಸುವುದ ಬೋಸರ ಏಕಮಾತ್ರ ಉದ್ದೇಶವಾಗಿತ್ತು. ಬ್ರಿಟಿಷ್ ಸರಕಾರವು ಅವರನ್ನು ಬಂಧಿಸಿ ಸೆರೆಮನೆಗೆ ತಳ್ಳುವ ಮೂಲಕ ಅವರ ರಾಜಕೀಯ ಚಟುವಟಿಕೆಯನ್ನು ಹತ್ತಿಕ್ಕಿತು. ಆಗ ಅವರು ಸ್ವದೇಶದಿಂದ ಪರಾರಿಯಾಗಿ, ಪರದೇಶಕ್ಕೆ ಅನಿಶ್ಚಿತವಾಗಿತ್ತು. ಅಸಾಧಾರಣ ಧೈರ್ಯ, ಸಾಹಸ ಹಾಗೂ ಅನುಪಮ ದೇಶಭಕ್ತಿಯ ಪರಂಪರೆಯನ್ನು ಅವರು ಭಾರತೀಯರಿಗೆ ಬಿಟ್ಟುಹೋದರು.

ಬೋಸ್ ಅವರು ಸಂಘಟಿಸಿದ ಹಾಗೂ ನೇತೃತ್ವ ವಹಿಸಿದ ಐಎನ್‌ಐಗೆ ತನ್ನ ಉದ್ದೇಶವನ್ನು ಸಾಧಿಸಲಾಗಲಿಲ್ಲ ಎಂಬುದು ನಿಜ. ಆದರೂ ಭಾರತದ ಸ್ವಾತಂತ್ರ್ಯ ಸಮರದ ಇತಿಹಾಸದಲ್ಲಿ ಅದಕ್ಕೆ ವಿಶಿಷ್ಟ ಸ್ಥಾನವಿದೆ. ಭಾರತೀಯರಲ್ಲಿ ಸ್ವಾತಂತ್ರ್ಯದಾಹವನ್ನು ಉತ್ತೇಜಿಸುವಲ್ಲಿ ಐಎನ್‌ಎ ಪ್ರಮುಖಪಾತ್ರ ವಹಿಸಿತ್ತು.

## 23.8 ಘಟಕದ ಸಾರಾಂಶ

ಇವರ ಕಾಲದ ಎಲ್ಲಾ ಬದಲಾವಣೆಗಳು ಭಾರತ ಸ್ವಾತಂತ್ರ್ಯ ಚಳುವಳಿಯಲ್ಲಿ ಸುಭಾಷ್‌ಚಂದ್ರಬೋಸರು ನಿರ್ವಹಿಸಿದ ವಿವಿಧ ಮುಖಗಳ ಸೇವೆಯನ್ನು ತಿಳಿಯುತ್ತವೆ. ಕಾಂಗ್ರೆಸ್, ಫಾರ್ವರ್ಡ್ ಬ್ಲಾಕ್, ಆಜಾದ್ ಹಿಂದ್ ಫೌಜ್ ನಾಯಕರಾಗಿ ಸ್ವಾತಂತ್ರ್ಯಕ್ಕಾಗಿ ನಿರ್ವಹಿಸಿದ ಕಾರ್ಯ ಪಶಂಸನೀಯವಾದದ್ದು. ರಾಷ್ಟ್ರೀಯ ಯೋಜನೆಗೆ ಇವರ ಸೇವೆ ಬಹಳ ಅಪಾರ ಭಾರತದ ಅಭಿವೃದ್ಧಿಗೆ ಇವರ ಸೇವೆಯು ಸ್ತುತ್ಯಾರ್ಹ. ಇದರಿಂದ ಎಲ್ಲಾ ವರ್ಗದ ಜನರೂ ಅದರಲ್ಲೂ ಯುವಕರು ಉತ್ತೇಜಿತರಾಗಿ ಸ್ವಾತಂತ್ರ್ಯಕ್ಕಾಗಿ ಯಾವ ತ್ಯಾಗಕ್ಕೂ ಸಿದ್ಧರಾದರು. ಇವರ ವಿದೇಶಾಂಗ ನೀತಿ, ಪ್ರಭಲ ಪ್ರಪಂಚದ ನಾಯಕರೊಂದಿಗಿನ ಸ್ನೇಹ ಇವೆಲ್ಲವೂ ಇವರ ಮುತ್ಸದ್ದಿತನಕ್ಕೆ ಸಾಕ್ಷಿಯಾಗಿವೆ. ಇನ್ನು ಇವರ ಹೋರಾಟವು ಸಾಹಸಮಯವಾಗಿದ್ದು, ಎಲ್ಲರಿಗೂ ಆಕರ್ಷಿತರಾದರು. ದುರದಷ್ಟವಶಾತ್ ಅಪಘಾತದಲ್ಲಿ ನಿಧಾನರಾದರು. ಆದರೂ ಇವರ ಸೇವೆಯನ್ನು ಎಲ್ಲಾ ಭಾರತೀಯರೂ ಸ್ಮರಿಸುತ್ತಾರೆ.

## 23.9 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಭಾರತ ಸ್ವಾತಂತ್ರ್ಯ ಚಳುವಳಿಯಲ್ಲಿ ಸುಭಾಷ್‌ಚಂದ್ರಬೋಸರ ಪಾತ್ರ ವಿವರಿಸಿ.
2. ಸುಭಾಷ್‌ಚಂದ್ರಬೋಸರ ವಿವಿಧ ಸೇವಾಕ್ಷೇತ್ರಗಳನ್ನು ಗುರುತಿಸಿ.

## 23.10 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


1. Sumit Sarkar - Modern India
2. ನರೇಂದ್ರ ಪ್ರಸಾದ್ ಮತ್ತು ಇತರರು - ಭಾರತ ಸ್ವಾತಂತ್ರ್ಯ ಚಳುವಳಿ

# ಘಟಕ - 24  ಕ್ರಿಪ್ಸ್ ಮಿಷನ್ - ವೇವೆಲ್ ಯೋಜನೆ

*ವಿಷಯಸೂಚಿ*

## 24.0 ಉದ್ದೇಶಗಳು

ಈ ಘಟಕದ ಉದ್ದೇಶ ಭಾರತದ ಸ್ವಾತಂತ್ರ್ಯ ಚಳುವಳಿಯ ಕೊನೆಯ ಹಂತದಲ್ಲಿ ಬ್ರಿಟಿಷರು ತಮ್ಮ ಅವಶ್ಯಕತೆ, ಉಳಿವು ಮತ್ತು ಯುದ್ಧವನ್ನು ಎದುರಿಸಲು ಬುದ್ಧಿವಂತಿಕೆಯಿಂದ ಕಳಿಸಿದ ಕ್ರಿಪ್ಸ್ ಮಿಷನ್ ಮತ್ತು ಯುದ್ಧದ ನಂತರದಲ್ಲಿ ಭಾರತೀಯರ ಸ್ವಾತಂತ್ರ್ಯಕ್ಕೋಸ್ಕರ ಒಂದು ನೆಪ ಮಾಡಿ ಕಳಿಸಿದ ವೇವೆಲ್ ಯೋಜನೆಗಳ ಬಗ್ಗೆ ಇಲ್ಲಿ ಅಧ್ಯಯನ ನಡೆಸಲಾಗುವುದು. ಇವುಗಳು ಭಾರತ ಸ್ವಾತಂತ್ರ್ಯ ಗಳಿಸುವತ್ತ ಇದ್ದ ಪ್ರಮುಖ ಹಂತಗಳು ಬ್ರಿಟೀಷರು ಭಾರತೀಯರಿಂದಲ್ಲದೇ ಇತರೇ ದೇಶಗಳಿಂದ ಅಂದರೆ ಅಮೇರಿಕಾ, ಚೀನಾ ಮುಂತಾದ ದೇಶಗಳಿಂದ ತಮ್ಮ ಧೋರಣೆಯನ್ನು ಭಾರತದೊಂದಿಗೆ ಬದಲಾಯಿಸಿಕೊಳ್ಳಬೇಕೆಂದು ಒತ್ತಾಯ ತಂದಿದ್ದು ಮತ್ತು ಕ್ವಿಟ್ ಇಂಡಿಯಾ ಚಳುವಳಿಯ ತೀವ್ರತೆ ಎಲ್ಲವೂ ಸೇರಿ ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡುವ ತೀರ್ಮಾನಕ್ಕಾಗಿ ಈ ಎರಡೂ ಯೋಜನೆಗಳನ್ನು ಕಳಿಸಿದ್ದುದನ್ನು ಇಲ್ಲಿ ಅಧ್ಯಯನ ಮಾಡಲಾಗುವುದು.

## 24.1 ಪೀಠಿಕೆ

ಭಾರತದ ಸ್ವಾತಂತ್ರ್ಯ ಚಳುವಳಿಯು ತನ್ನ ತೀವ್ರತೆಯನ್ನು ಪಡೆದುಕೊಳ್ಳುತ್ತಿದ್ದು, ಬ್ರಿಟೀಷರು ಇದರಿಂದ ಆತಂಕಗೊಂಡು ತಮ್ಮ ಉಳಿವಿಗಾಗಿ ಹಲವು ಯೋಜನೆಗಳನ್ನು ತಯಾರಿಸಿ ಭಾರತಕ್ಕೆ ಕಳುಹಿಸಿಕೊಟ್ಟರು ಅವುಗಳಲ್ಲಿ ಕ್ರಿಪ್ಸ್ ಮಿಷನ್ ಮತ್ತು ವೇವೆಲ್ ಯೋಜನೆ ಪ್ರಮುಖವಾದವುಗಳು. ಇವುಗಳ ಷರತ್ತುಗಳೇನು ಇವುಗಳಿಂದ ಭಾರತೀಯರಿಗೆ ಎಷ್ಟು ಅನುಕೂಲವಿತ್ತು ಮತ್ತು ಇವುಗಳಿಂದ ಸ್ವಾತಂತ್ರ್ಯ ದೊರಕುತ್ತಿತ್ತೇ ಎನ್ನುವ ಎಲ್ಲಾ ಪ್ರಶ್ನೆಗಳಿಗೆ ಈ ಘಟಕದಲ್ಲಿ ಉತ್ತರ ಹುಡುಕುವ ಪ್ರಯತ್ನ ಮಾಡಲಾಗಿದೆ. ಈ ಎರಡೂ ಯೋಜನೆಗಳೂ ಸಹ ವಿಫಲವಾದುದು ಸಹ ತಿಳಿಯುತ್ತದೆ. ಅಂದರೆ ಭಾರತೀಯರು ತಮಗೆ ಸ್ವಾತಂತ್ರ್ಯವೇ ಬೇಕೆಂದು ಒತ್ತಾಯ ಮಾಡಿದ್ದು ಇಲ್ಲಿ ಗೊತ್ತಾಗುತ್ತದೆ. ಇದಲ್ಲದೇ ಮುಸ್ಲಿಂ ಲೀಗ್ ಪಾಕಿಸ್ತಾನದ ಸ್ಥಾಪನೆಗೆ ಒತ್ತಾಯಿಸುತ್ತಿರುತ್ತದೆ. ಈ ಎಲ್ಲಾ ಅಂಶಗಳನ್ನು ನಾವು ಈ ಘಟಕದಲ್ಲಿ ಅಧ್ಯಯನ ಮಾಡಲಿದ್ದೇವೆ.

## 24.2 ಕ್ರಿಪ್ಸ್ ಮಿಷನ್, 1942

1942, ಮಾರ್ಚ್ 11 ರಂದು ವಿನ್‌ಸ್ಟನ್ ಚರ್ಚಿಲ್, ಭಾರತದ ಏಕತಾ ಯೂನಿಯನ್ ಸ್ಥಾಪನೆಗೆ ಮತ್ತು ಜಪಾನಿನ ವಿಸ್ತರಣೆಯನ್ನು ತಡೆಗಟ್ಟಲು ಬ್ರಿಟೀಷ್ ಕ್ಯಾಬಿನೆಟ್ ಸರ್ ಸ್ಟಾಫರ್ಡ್ ಕ್ರಿಪ್ಸ್‌ನನ್ನು ವೈಯುಕ್ತಿಕವಾಗಿ ಚರ್ಚೆ ನಡೆಸಲು ಕಳಿಸಲು ತೀರ್ಮಾನವಾಯಿತೆಂದು ತಿಳಿಸಿದರು. ಈ ಕಾರ್ಯದಲ್ಲಿ ಅಮೇರಿಕಾದ ರೂಸ್‌ವೆಲ್ಟ್, ಚೀನಾದ ಚಿಯಾಂಗ್ ಕೈಷೆಕ್‌ರ ಒತ್ತಾಯವೂ ಇತ್ತೆಂಬುದು ಗೊತ್ತಾಗುತ್ತದೆ. ಇವರು ಭಾರತದ ವಿರುದ್ಧ ಬ್ರಿಟೀಷರು ತಮ್ಮ ನೀತಿಯನ್ನು ಬದಲಾಯಿಸಿಕೊಳ್ಳಲು ಸೂಚಿಸಿದರು. ಆದರೆ ಕ್ರಿಪ್ಸ್‌ವನ್ನು ಕಳುಹಿಸಲು ನಿಜವಾದ ಕಾರಣವೆಂದರೆ, ಜಪಾನಿನ ಆಕ್ರಮಣವನ್ನು ತಡೆಯಲು ಭಾರತೀಯರ ಸಹಕಾರವನ್ನು ಪಡೆಯುವ ಹವಣಿಕೆಯಾಗಿತ್ತು.

ಕ್ರಿಪ್ಸ್ ಮಾರ್ಚ್ 23 ರಲ್ಲಿ ದೆಹಲಿಗೆ ಬಂದಿಳಿದನು. ಭಾರತದ ರಾಜಕೀಯ ಸಮಸ್ಯೆಗೆ ಒಂದು ಯೋಜನೆಯನ್ನು ತೆಗೆದುಕೊಂಡು ಬಂದಿದ್ದನು. ಈ ಯೋಜನೆಯ ಉದ್ದೇಶ "ಭಾರತವು ಒಂದು ಪ್ರಾದೇಶಿಕ ರಾಜ್ಯವಾಗಿದ್ದು ಬ್ರಿಟೀಷ್ ಸರಕಾರದೊಂದಿಗೆ ಇರುತ್ತದೆ. ಇನ್ನು ಇತರೇ ಪ್ರಾದೇಶಿಕ ರಾಜ್ಯಗಳು ಬ್ರಿಟೀಷ್ ರಾಣಿಗೆ ತಮ್ಮ ಗೌರವ ಸೂಚಿಸುತ್ತಾರೆ" ಎಂಬುದಾಗಿತ್ತು.

ಈ ಯೋಜನೆಯು ಈ ಕೆಳಗಿನ ಷರತ್ತುಗಳನ್ನು ಒಳಗೊಂಡಿತ್ತು.

1. ಭಾರತವು ಸ್ವಯಂ ಸರಕಾರವನ್ನು ಸ್ಥಾಪಿಸಲು ಪ್ರಥಮವಾಗಿ ಒಂದು ಪ್ರಾದೇಶಿಕ ಸ್ವತಂತ್ರ ರಾಜ್ಯವಾಗಿದ್ದು ಎಲ್ಲಾ ಅಧಿಕಾರಗಳನ್ನು ಮತ್ತು ಸ್ಥಾನವನ್ನು ಪಡೆಯುತ್ತದೆ ಇದು ಬ್ರಿಟೀಷರ ಇತರೇ ರಾಜ್ಯಗಳಂತೆ ಇರುತ್ತದೆ. ಗೌರ್ನರ್ ಜನರಲ್ ಎಕ್ಸಿಕ್ಯೂಟಿವ್ ಕೌನ್ಸಿಲ್‌ನಲ್ಲಿ ಸದಸ್ಯರನ್ನು ಹೆಚ್ಚಿಸಿತು.

2. ಮಹಾಯುದ್ಧದ ನಂತರ ಭಾರತಕ್ಕೆ ರಾಜ್ಯಾಂಗ ಸಮಿತಿಯನ್ನು ರಾಜ್ಯಾಂಗ ರಚಿಸಲು ಸ್ಥಾಪಿಸಲಾಗುವುದು. ಭಾರತೀಯ ರಾಜ್ಯಗಳು ರಾಜ್ಯಾಂಗ ಸಮಿತಿಗೆ ತಮ್ಮ ಪ್ರತಿನಿಧಿಗಳನ್ನು ಕಳಿಸಬಹುದು.

3. ರಾಜ್ಯಾಂಗವು ಭಾರತಕ್ಕೆ ಸೇರಿದ್ದಾಗಿದೆ. ಯಾವುದಾದರೂ ರಾಜ್ಯವು ಸೇರಲು ಇಚ್ಛಿಸದಿದ್ದರೆ ಅದು ಪ್ರತ್ಯೇಕವಾಗಿ ರಾಜ್ಯಾಂಗವನ್ನು ತಯಾರಿಸಿಕೊಳ್ಳಬಹುದಾಗಿದೆ.

4. ಹೊಸ ಸಾರ್ವಜನಿಕ ಚುನಾವಣೆ ನಡೆಯುತ್ತದೆ. ಕೆಳಮನೆಗೆ ಸದಸ್ಯರನ್ನು ಆರಿಸಬೇಕು.

5. ರಾಜ್ಯಾಂಗವನ್ನು ಬರೆಯುವ ತನಕ ಭಾರತದ ರಕ್ಷಣೆಯನ್ನು ಬ್ರಿಟೀಷರು ಹೊಂದಿರುತ್ತಾರೆ.

ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ಈ ಷರತ್ತುಗಳನ್ನು ಒಪ್ಪಿಕೊಂಡರು. ಆದರೆ ಕಾಂಗ್ರೆಸ್ ಪೂರ್ಣ ಸ್ವಾತಂತ್ರ್ಯ ಭರವಸೆ ಇಲ್ಲ ಇದರಲ್ಲಿ ಎಂಬುದನ್ನು ಸೂಚಿಸಿತು ಮತ್ತು ಯಾವುದೇ ರಾಜ್ಯ ಇಷ್ಟವಿಲ್ಲದಿದ್ದಲ್ಲಿ ತಾನೇ ತನ್ನ ರಾಜ್ಯಾಂಗವನ್ನು ತಯಾರಿಸಿಕೊಳ್ಳಬೇಕು ಎಂಬುದು ಪಾಕಿಸ್ತಾನದ ಉಗಮಕ್ಕೆ ಕಾರಣವಾಗುತ್ತದೆಂದು ಅರಿತರಲ್ಲದೇ, ರಾಜ್ಯಾಂಗ ಸಮಿತಿಗೆ ಚುನಾವಣೆ ಯಾವುದೇ ಸದಸ್ಯರನ್ನು ರಾಜರಿಂದ ನೇಮಕ ಮಾಡುವುದು ಇವುಗಳನ್ನೆಲ್ಲಾ ಕಾಂಗ್ರೆಸ್ ವಿರೋಧಿಸಿತು. ಇದರಿಂದ ಭಾರತ ಸ್ವಾತಂತ್ರ್ಯಕ್ಕೆ ಭವಿಷ್ಯವಿಲ್ಲದಂತಾಯಿತು. ಮಹಾತ್ಮಾಗಾಂಧಿಯವರು ಇದನ್ನು ಪೋಸ್ಟ್ ಡೇಟೆಡ್ ಚೆಕ್‌ಗೆ ಹೋಲಿಸಿದರು. ಕಾಂಗ್ರೆಸ್ ಕ್ರಿಪ್ಸ್ ಮಿಷನ್ನನ್ನು ತಿರಸ್ಕರಿಸಿತು. ಹಿಂದೂ ಮಹಾಸಭಾ, ಸಿಖ್ಖರೂ ಸಹ ತಿರಸ್ಕರಿಸಿದರು. ಇದೆಲ್ಲವನ್ನು ನೋಡಿ ಮುಸ್ಲಿಂ ಲೀಗ್ ಸಹ ಪಾಕಿಸ್ತಾನವನ್ನು ಸ್ಥಾಪಿಸಲು ಅವಕಾಶವಿಲ್ಲವೆಂದು ಕ್ರಿಪ್ಸ್ ಮಿಷನ್ನನ್ನು ತಿರಸ್ಕರಿಸಿತು.

## 24.3 ವೇವೆಲ್ ಯೋಜನೆ

1942 ನೇ ವರ್ಷ ಕೊನೆಗೊಳ್ಳುತ್ತಿದ್ದಂತೆ ಭಾರತದ ರಾಜಕೀಯ ಪರಿಸ್ಥಿತಿ ಹೊರನೋಟಕ್ಕೆ ನಿಶ್ಚಲವಾಗಿತ್ತು. ಕಾಂಗ್ರೆಸ್ ನಾಯಕರು ಕಾರಾಗೃಹದಲ್ಲಿದ್ದರು. ರಾಜಕೀಯ ರಂಗದಲ್ಲಿ ಮುಸ್ಲಿಂ ಲೀಗ್ ಹಾಗೂ ಹಿಂದೂ ಮಹಾಸಭೆಯ ನಾಯಕರದ್ದೇ ಮೇಲುಗೈಯಾಗಿತ್ತು. ಪಾಕಿಸ್ಥಾನದ ಬೇಡಿಕೆಯೊಂದೇ ಮುಸ್ಲಿಂ ಲೀಗಿನ ಮುಂದಿದ್ದ ಪ್ರಮುಖ ಪ್ರಶ್ನೆಯಾಗಿತ್ತು. ದೇಶದ ಏಕತೆಯನ್ನು ಹೇಗಾದರೂ ಮಾಡಿ ಉಳಿಸಿಕೊಳ್ಳಬೇಕೆಂಬುದೇ ಹಿಂದೂ ಮಹಾಸಭೆಯ ಏಕೈಕ ಗುರಿಯಾಗಿತ್ತು. ಲಿನ್‌ಲಿತ್‌ಗೋ ಅವರ ಆಳ್ವಿಕೆಯ ಕೊನೆಯವರೆಗೂ ರಾಜಕೀಯ ಭಿನ್ನಾಭಿಪ್ರಾಯವು ಅನಿವಾರ್ಯವಾಗಿ ಹೀಗೆ ಮುಂದುವರಿಯಿತು.

1943 ರ ಅಕ್ಟೋಬರ್‌ನಲ್ಲಿ ಲಿನ್‌ಲಿತ್‌ಗೋ ನಿವೃತ್ತರಾದರು. ಲಾರ್ಡ್ ವೇವೆಲ್ ವೈಸರಾಯ್ ಆಗಿ ಬಂದರು. ಅವರು 1942 ರ ಕ್ಷೋಭೆಯ ಕಾಲದಲ್ಲಿ ಮಹಾದಂಡ ನಾಯಕರೂ ಆಗಿದ್ದರು. ತಮ್ಮ ಪ್ರಥಮ ಭಾಷಣದಲ್ಲಿಯೇ ಅವರು ಭಾರತಕ್ಕೆ ಸ್ವಯಂ ಪ್ರಭುತ್ವದ ಸ್ಥಾನಮಾನವನ್ನು ನೀಡುವುದು ಬ್ರಿಟಿಷ್ ಸರಕಾರದ ಧೋರಣೆಯಾಗಿದೆಯೆಂದು ಸಾರಿದರು. ಅದಕ್ಕಾಗಿ ಎಲ್ಲ ಭಾರತೀಯರಿಗೆ ಸ್ವೀಕಾರಾರ್ಹವಾದ ಸಂವಿಧಾನವೊಂದನ್ನು ರೂಪಿಸಬೇಕಾಗಿದೆ ಎಂದೂ ಅವರು ವಿವರಿಸಿದರು. ಅದರೊಂದಿಗೆ ಅವರು ಕಾಂಗ್ರೆಸು ತನ್ನ ಅಸಹಕಾರಾತ್ಮಕ ಹಾಗೂ ಪ್ರತಿಬಂಧಾತ್ಮಕ ಧೋರಣೆಯನ್ನು ಬಿಡುವವರೆಗೆ ಬಂಧನದಲ್ಲಿದ್ದ ನಾಯಕರನ್ನು ಬಿಡುಗಡೆ ಮಾಡುವುದು ಸಾಧ್ಯವಿಲ್ಲವೆಂದು ದೃಢ ನಿರ್ಧಾರ ತಾಳಿದರು.

1944 ಮೇ ತಿಂಗಳಲ್ಲಿ ಗಾಂಧೀಜಿಯವರನ್ನು ಅಸ್ವಾಸ್ಥ್ಯದ ಕಾರಣದಿಂದಾಗಿ ಬಿಡುಗಡೆ ಮಾಡಲಾಯಿತು. 1944 ಜೂನ್‌ನಲ್ಲಿ ಗಾಂಧೀಜಿಯವರು ತಮಗೆ ವೈಸರಾಯ್ ಹಾಗೂ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರನ್ನು ಕಂಡು ವಿಚಾರ ವಿನಿಮಯ ಮಾಡಲು ಅನುಮತಿ ನೀಡಬೇಕೆಂದು ವೇವೆಲ್‌ರನ್ನು ಕೇಳಿಕೊಂಡರು. ಆದರೆ ಈ ಎರಡು ವಿಜ್ಞಾಪನೆಗಳನ್ನೂ ಅವರು ತಿರಸ್ಕರಿಸಿದರು.

ಈ ಹಂತದಲ್ಲಿ ಜಿನ್ನಾ ಅವರೊಡನೆ ಮಾತುಕತೆ ನಡೆಸಿ ರಾಜಕೀಯ ಬಿಕ್ಕಟ್ಟನ್ನು ಪರಿಹರಿಸುವುದೊಂದೇ ಇನ್ನುಳಿದ ದಾರಿಯೆಂದು ಗಾಂಧೀಜಿಯವರು ಭಾವಿಸಿದರು. ಮಾತುಕತೆಗೆ ಬರಬೇಕೆಂದು ಅವರು ಸ್ವತಃ ಜಿನ್ನಾರಿಗೆ ಪತ್ರ ಬರೆದರು. ಗಾಂಧೀಜಿಯವರ ಆ ಪತ್ರ

ಕರುಣಾಜನಕ ಧಾಟಿಯಲ್ಲಿತ್ತು. ಈ ಸಂದರ್ಭದಲ್ಲಿ ಮುಸ್ಲಿಂ ಲೀಗಿಗೆ ಎಷ್ಟೊಂದು ದೊಡ್ಡ ಮಹತ್ವವನ್ನು ಕಾಂಗ್ರೆಸ್ ಹೈಕಮಾಂಡ್ ನೀಡಿತ್ತು ಎಂಬುದು ಇದರಿಂದ ಸ್ಪಷ್ಟವಾಗಿತ್ತು.

ಗಾಂಧೀಜಿ ಹಾಗೂ ಜಿನ್ನಾ ಅವರೊಳಗೆ 1944 ಸೆಪ್ಟೆಂಬರ್ 9 ರಿಂದ 27 ರವರೆಗೆ ಮಾತುಕತೆ ನಡೆಯಿತು. ಭಾರತೀಯ ಮುಸ್ಲಿಮರು ಒಂದು ಪ್ರತ್ಯೇಕ ರಾಷ್ಟ್ರಕ್ಕೆ ಸೇರಿದವರೆಂಬ ಜಿನ್ನಾರ ವಾದವನ್ನು ಗಾಂಧೀಜಿಯವರು ಒಪ್ಪಲಿಲ್ಲ. ಆದರೆ ಜಿನ್ನಾ ಅವರ ಮಟ್ಟಿಗೆ ಮುಸ್ಲಿಮ್ ಜನಾಂಗದ ಪ್ರತ್ಯೇಕ ರಾಷ್ಟ್ರೀಯತೆಯ ಕಲ್ಪನೆಯೇ ಮೂಲಭೂತವಾಗಿತ್ತು. ಈ ಕಲ್ಪನೆಯೇ ಪಾಕಿಸ್ಥಾನದ ಬೇಡಿಕೆಯ ಜೀವಾಳವಾಗಿತ್ತು. ಗಾಂಧೀಜಿಯವರ ವಿಶಾಲದೃಷ್ಟಿಯಲ್ಲಿ ಭಾರತ ದೇಶವು ಅನೇಕ ಸದಸ್ಯರಿದ್ದ ಒಂದು ಕುಟುಂಬದಂತೆ; ಮುಸ್ಲಿಮರೂ ಆ ಬೃಹತ್ ಕುಟುಂಬದ ಸದಸ್ಯರೇ ಆಗಿದ್ದಾರೆ. ಒಂದು ವೇಳೆ ಪ್ರತ್ಯೇಕ ಮುಸ್ಲಿಂ ರಾಷ್ಟ್ರವನ್ನು ರೂಪಿಸುವುದಿದ್ದರೂ, ಅದೆಲ್ಲಾ ಭಾರತ ಸ್ವಾತಂತ್ರ್ಯ ಗಳಿಸಿದ ಬಳಿಕವಷ್ಟೇ. ಆದರೆ ಜಿನ್ನಾ ಅವರು ಮುಸ್ಲಿಮರಿಗಾಗಿ ಪ್ರತ್ಯೇಕ ರಾಷ್ಟ್ರ ತಕ್ಷಣ ಸಿಗಬೇಕೆಂದು ಪಟ್ಟು ಹಿಡಿದರು. ಹೀಗಾಗಿ ಜಿನ್ನಾ ಮತ್ತು ಗಾಂಧೀಜಿಯವರೊಳಗಿನ ಮಾತುಕತೆ ಫಲಕಾರಿಯಾಗಲಿಲ್ಲ.

ಮಾತುಕತೆಯಿಂದ ಹಿಂದೂ-ಮುಸ್ಲಿಂ ಸಮುದಾಯಗಳೊಳಗಿನ ರಾಜಕೀಯ ಭಿನ್ನಾಭಿಪ್ರಾಯ ಉಲ್ಬಣಿಸಿತು. ಜಿನ್ನಾ ಅವರಿಗೆ ರಾಜಕೀಯವಾಗಿ ಅತ್ಯುನ್ನತ ಸ್ಥಾನ ಮಾನ ದೊರೆತು ಮುಸ್ಲಿಂ ಲೀಗಿಗೆ ರಾಜಕೀಯ ಶಕ್ತಿ ಕೂಡಿ ಬಂತು. ಎರಡನೆಯದಾಗಿ, ಹಿಂದೂ ಮುಸ್ಲಿಮ್ ನಾಯಕರು ಎಂದಿಗೂ ಒಮ್ಮತಕ್ಕೆ ಬರಲಾರರು ಎಂದು ವೈಸರಾಯ್ ಮನಗಂಡರು. ಆದ್ದರಿಂದ ಬ್ರಿಟಿಷ್ ಸರಕಾರವೇ ಈ ಸಮಸ್ಯೆಗೆ ಪರಿಹಾರ ಹುಡುಕಬೇಕಾಗಿದೆ ಎಂದು ವೇವೆಲ್ ಭಾವಿಸಿದರು. ಇದರಂತೆ ಅವರು ಒಂದು ಯೋಜನೆಯನ್ನು ಸಿದ್ಧಪಡಿಸಿದರು. ಕೇಂದ್ರದಲ್ಲಿ ಮಧ್ಯಾವಧಿ ಸರಕಾರವನ್ನು ಸ್ಥಾಪಿಸುವುದೇ ಈ ಯೋಜನೆಯ ಮುಖ್ಯಾಂಶವಾಗಿತ್ತು. ಸದ್ಯಕ್ಕೆ ಈಗ ಇರುವ ಸಂವಿಧಾನದ ಚೌಕಟ್ಟಿನಲ್ಲಿಯೇ ಸರಕಾರ ನಡೆಸುವುದರೊಂದಿಗೆ ಎಲ್ಲಾ ಪಕ್ಷಗಳ ಪ್ರತಿನಿಧಿಗಳನ್ನೂ ಸೇರಿಸಿ ಅವರಿಗೆ ಅಧಿಕಾರವನ್ನೂ ಜವಾಬ್ದಾರಿಯನ್ನೂ ವಹಿಸುವುದು; ಮತ್ತು ರಾಜಕೀಯ ಭಿನ್ನಾಭಿಪ್ರಾಯಗಳನ್ನು ಪರಿಹರಿಸಿ ಮುಂದೆ ಪೂರ್ಣ ಸ್ವಯಂ ಪ್ರಭುತ್ವವನ್ನು ದೇಶಕ್ಕೆ ನೀಡುವುದೇ ಈ ಯೋಜನೆಯ ಮುಖ್ಯ ಗುರಿಯಾಗಿತ್ತು.

ಈ ಯೋಜನೆಯ ಪರಿಶೀಲನೆಗಾಗಿ 1945 ಜೂನ್ 25 ರಂದು ಸಭೆಯೊಂದನ್ನು ಕರೆಯಲಾಗುವುದೆಂದು ವೇವೆಲ್ ಘೋಷಿಸಿದರು. ಮತ್ತು ಅದರಂತೆ ಸಭೆಗೆ 21 ಮಂದಿ ಪ್ರತಿನಿಧಿಗಳನ್ನು ಆಹ್ವಾನಿಸಿದರು. ಕೇಂದ್ರದಲ್ಲಿ ರಚಿಸಲಾಗುವ ಒಂದು ಹೊಸ ಕಾರ್ಯಕಾರಿ ಮಂಡಲಿಯಲ್ಲಿ ಇಬ್ಬರನ್ನು ಬಿಟ್ಟು ಉಳಿದೆಲ್ಲ ಸದಸ್ಯರು ಭಾರತೀಯರೇ ಆಗಿರುತ್ತಾರೆ ಎಂದು ತಿಳಿಸಿದರು. ಆ ಇಬ್ಬರು ಸದಸ್ಯರು ಯಾರೆಂದರೆ - ವೈಸರಾಯ್ ಮತ್ತು ಮಹಾದಂಡನಾಯಕರು. ಆಗ ಪ್ರಚಲಿತವಾಗಿದ್ದ ಸಂವಿಧಾನದ ಚೌಕಟ್ಟಿನಲ್ಲಿ ಕಾರ್ಯಕಾರಿ ಮಂಡಲಿ ಕಾರ್ಯ ನಿರ್ವಹಿಸುವುದಾದರೂ ಕೆಲವೊಂದು ವಿಶಿಷ್ಟ ಸಂದರ್ಭದಲ್ಲಿ ವೈಸರಾಯ್ ಅವರು ಮಂಡಲಿಯ ಅಭಿಪ್ರಾಯವನ್ನು ತಿರಸ್ಕರಿಸುವ ಹಕ್ಕನ್ನೂ (ವೀಟೋ) ಹೊಂದಿದ್ದರು.

ಕಾರ್ಯಕಾರಿ ಮಂಡಲಿಯ ಉದ್ದೇಶಗಳೆಂದರೆ - ಯುದ್ಧದಲ್ಲಿ ಜಪಾನನ್ನು, ಪರಿಣಾಮಕಾರಿಯಾಗಿ ಎದುರಿಸುವುದು; ಹಾಗೂ ಎಲ್ಲರಿಗೂ ಒಪ್ಪಿಗೆಯಾಗುವ ಶಾಶ್ವತ ಸಂವಿಧಾನ ಸಿದ್ಧವಾಗುವವರೆಗೆ ಸರಕಾರವನ್ನು ಹೀಗೆಯೇ ನಡೆಸುವುದು.

ವೇವೆಲ್ ಯೋಜನೆಯನ್ನು ಪತ್ರಿಕೆಗಳು ಹಾಗೂ ಭಾರತೀಯರು ಸ್ವಾಗತಿಸಿದರು. ಆದರೆ ಗಾಂಧೀಜಿಯವರು ಹಾಗೂ ಜಿನ್ನಾ ಈ ಯೋಜನೆಯ ಕೆಲವು ಅಂಶಗಳಿಗೆ ತಮ್ಮ ಆಕ್ಷೇಪವೆತ್ತಿದರು. ಕಾಂಗ್ರೆಸ್ ಪಕ್ಷ "ಮೇಲ್ಜಾತಿ ಹಿಂದುಗಳನ್ನು" ಪ್ರತಿನಿಧಿಸುತ್ತದೆ ಎಂದು ವರ್ಗೀಕರಿಸಿದ ಕುರಿತು ಗಾಂಧೀಜಿಯವರು ಆಕ್ಷೇಪವೆತ್ತಿದರು. ಕಾಂಗ್ರೆಸಿಗೂ ಮುಸ್ಲಿಮ್ ಲೀಗಿಗೂ ಸಮಾನ ಸ್ಥಾನಮಾನ ನೀಡಬೇಕೆಂಬುದೇ ಅವರ ಬಯಕೆಯಾಗಿತ್ತು. ಆದರೆ ಜಿನ್ನಾ ಅವರು ಕಾರ್ಯಕಾರಿ ಮಂಡಲಿಯ ಅರ್ಧಾಂಶ ಸದಸ್ಯರು ಮುಸ್ಲಿಂ ಲೀಗಿನಿಂದಲೇ ನಾಮಕರಣ ಮಾಡಿದವರಾಗಬೇಕೆಂದು ಒತ್ತಾಯಿಸಿದರು. ತನಗೆ ಸಿಮ್ಲಾ ಸಭೆಗೆ ಆಹ್ವಾನಿಸಲಿಲ್ಲವೆಂದು ಹಿಂದೂ ಮಹಾಸಭೆ ಸಿಡಿಮಿಡಿಗೊಂಡಿತು. ಮಾತ್ರವಲ್ಲದೆ ಕಾರ್ಯಕಾರಿ ಮಂಡಲಿಯಲ್ಲಿ 'ಮೇಲ್ಜಾತಿ ಹಿಂದೂ'ಗಳಿಗೂ ಮುಸ್ಲಿಮರಿಗೂ ಸಮಾನ ಸ್ಥಾನಮಾನ ನೀಡಿದ್ದಕ್ಕಾಗಿ ಅದು ತೀವ್ರ ಆಕ್ಷೇಪವೆತ್ತಿತು.

## 24.4 ಸಿಮ್ಲಾ ಸಭೆ

1945 ಜೂನ್ 25 ರಂದು ಸಿಮ್ಲಾದಲ್ಲಿ ಸಭೆ ಸೇರಿತು. ಅಬ್ದುಲ್ ಕಲಮ್ ಅಜಾದ್ (ಕಾಂಗ್ರೆಸ್ ಅಧ್ಯಕ್ಷ) ಮತ್ತು ಜಿನ್ನಾ ಸಹಿತ 21 ಮಂದಿ ಆಮಂತ್ರಿತರಾಗಿದ್ದರು. ಅವರಲ್ಲಿ ಸಿಖ್ಖರು, ಯುರೋಪಿಯನ್ನರು, ಪರಿಶಿಷ್ಟ ಜಾತಿಯವರು ಹಾಗೂ ಪ್ರಾಂತಗಳ ಕೆಲವು ಪ್ರಧಾನ ಮಂತ್ರಿಗಳು ಮತ್ತು ಮಾಜಿ ಮಂತ್ರಿಗಳೂ ಇದ್ದರು: ಆದರೆ ಹಿಂದೂ ಮಹಾಸಭೆಯ ಪ್ರತಿನಿಧಿಗಳನ್ನು ಆಮಂತ್ರಿಸಿರಲಿಲ್ಲ.

ಸಿಮ್ಲಾ ಸಭೆಯಲ್ಲಿ ಎರಡು ಪ್ರಶ್ನೆಗಳ ಕುರಿತು ಭಿನ್ನಾಭಿಪ್ರಾಯ ಬಗೆಹರಿಯಲೇ ಇಲ್ಲ. ಅವು ಯಾವುವೆಂದರೆ - ವೈಸರಾಯ್ ಅವರ ಆಡಳಿತ ಮಂಡಲಿ ರಚನೆ; ಮತ್ತು ವೈಸರಾಯ್ ಅವರ ವೀಟೋ ಹಕ್ಕು. ಇದನ್ನು ರದ್ದು ಮಾಡಬೇಕೆಂದು ಕಾಂಗ್ರೆಸಿನ ಬಯಕೆಯಾಗಿತ್ತು. ಆದರೆ ಅದನ್ನು ಉಳಿಸಿಕೊಳ್ಳಬೇಕೆಂಬುದು ಮುಸ್ಲಿಂ ಲೀಗಿನ ಬಯಕೆಯಾಗಿತ್ತು. ವೈಸ್‌ರಾಯ್ ಅವರ ಆಡಳಿತ ಮಂಡಲಿಯ ಸದಸ್ಯರಾಗಲು ಇಬ್ಬರು ಹಿಂದುಗಳು, ಒಬ್ಬ ಮುಸ್ಲಿಮ್, ಒಬ್ಬ ಪಾರ್ಸಿ ಮತ್ತು ಒಬ್ಬ ಭಾರತೀಯ ಕ್ರೈಸ್ತನನ್ನು ಒಳಗೊಂಡಿದ್ದ ಒಂದು ಪಟ್ಟಿಯನ್ನು ಕಾಂಗ್ರೆಸ್ ಒಪ್ಪಿಸಿತು. ಕಾಂಗ್ರೆಸ್ ನಿಜವಾದ ರಾಷ್ಟ್ರೀಯ ಸಂಘಟನೆಯೆಂಬುದು ಇದರಿಂದ ಸಿದ್ಧವಾಯಿತು. ಪಂಜಾಬಿ ಮುಸ್ಲಿಮರಿಗೆ ಒಂದು ಸ್ಥಾನ ಬೇಕೆಂಬ ಬೇಡಿಕೆಯನ್ನು ಪಂಜಾಬಿನ ಪ್ರಧಾನಮಂತ್ರಿ ಮುಂದಿಟ್ಟರು. ಜಿನ್ನಾ ಯಾವ ಪಟ್ಟಿಯನ್ನೂ ಒಪ್ಪಿಸಲಿಲ್ಲ. ವೇವೆಲ್ ತಾನೇ ಒಂದು ಪಟ್ಟಿಯನ್ನು ತಯಾರಿಸಿದರು. ಇದರಲ್ಲಿ 14 ಮಂದಿ ಸದಸ್ಯರ ಆಡಳಿತ ಮಂಡಲಿಯಲ್ಲಿ ಭಾರತದ ಮುಸ್ಲಿಮರಿಗೆ ಆರು ಸ್ಥಾನಗಳನ್ನು ನೀಡಲಾಗಿತ್ತು. (ಮುಸ್ಲಿಮರು ಒಟ್ಟು ಜನಸಂಖ್ಯೆಯ ಶೇಕಡಾ 25 ರಷ್ಟು ಮಾತ್ರ ಇದ್ದರು). ಈ ವ್ಯವಸ್ಥೆ ಕಾಂಗ್ರೆಸ್ ಹಾಗೂ ಜಿನ್ನಾ ಇಬ್ಬರಿಂದಲೂ ತಿರಸ್ಕೃತವಾಯಿತು. ವೈಸರಾಯರ ವೀಟೋವನ್ನು ಉಳಿಸಿಕೊಳ್ಳುವುದು ಮಾತ್ರವಲ್ಲದೆ ಆಡಳಿತ ಮಂಡಲಿಯ ಮುಸ್ಲಿಮ್ ಸದಸ್ಯರಿಗೆ ಕೆಲವು ಭದ್ರತೆಗಳು ಲಭಿಸಬೇಕೆಂದು ಜಿನ್ನಾ ಒತ್ತಾಯಿಸಿದರು. ಉದಾಹರಣೆಗೆ, ಎಲ್ಲಾ ಮುಸ್ಲಿಮ್ ಸದಸ್ಯರು ತನ್ನಿಂದಲೇ (ಅಂದರೆ ಮುಸ್ಲಿಂ ಲೀಗಿನಿಂದ) ನೇಮಿಸಲಾದವರಾಗಿರಬೇಕೆಂದು ಜಿನ್ನಾ ಒಂದು ಶರತ್ತು ಹಾಕಿದರು. ಇದನ್ನು ಒಪ್ಪಿಕೊಂಡರೆ ಕಾಂಗ್ರೆಸ್ ಅಧ್ಯಕ್ಷ ಅಬ್ದುಲ್ ಕಲಮ್ ಅಜಾದ್ ಕಾರ್ಯಕಾರಿ ಮಂಡಲಿಯಲ್ಲಿರುವಂತಿಲ್ಲ. ತನ್ನಿಂದ ನೇಮಿಸಲಾಗಿರುವ ಮುಸ್ಲಿಮರಿಗೆ ಆಕ್ಷೇಪಾರ್ಹವಾಗಿರುವಂತಹ ಪ್ರಸ್ತಾಪಗಳು ಅಂಗೀಕೃತವಾಗಬೇಕಾದರೆ ಮೂರನೇ ಎರಡರಷ್ಟು ಸ್ಪಷ್ಟ ಬಹುಮತ ಇರಬೇಕು ಎಂಬುದು ಜಿನ್ನಾ ಅವರ ಇನ್ನೊಂದು ಶರ್ತವಾಗಿತ್ತು.

ವೇವೆಲ್ ಈ ಯೋಜನೆಯನ್ನು ಒಪ್ಪದೆ ಕೈಬಿಟ್ಟರು. ಬಿಕ್ಕಟ್ಟು ಮುಂದುವರಿಯಿತು. ವೈಸ್‌ರಾಯ್ ಜಿನ್ನಾ ಎದುರು ಶರಣಾದನೆಂದು ಕಾಂಗ್ರೆಸ್ ದೂರಿತು. ಯಾಕೆಂದರೆ ಒಂದು ವೇಳೆ ಮುಸ್ಲಿಂ ಲೀಗ್ ಹೊರಗಿರಲು ನಿರ್ಧರಿಸಿದರೂ ವೈಸ್‌ರಾಯ್ ಕಾಂಗ್ರೆಸ್ ಸದಸ್ಯರನ್ನು ಆಡಳಿತ ಮಂಡಲಿಗೆ ತೆಗೆದುಕೊಳ್ಳಬೇಕಾಗಿತ್ತು. ಆದರೆ ವೇವೆಲ್ ಸಂಪೂರ್ಣವಾಗಿ ಕಾಂಗ್ರೆಸನ್ನು ಅವಲಂಬಿಸಿರಲು ಹಿಂಜರಿದಿದ್ದರು. ದೇಶದ ಅಂದಿನ ರಾಜಕೀಯ ಪರಿಸ್ಥಿತಿಯಲ್ಲಿ ಮುಸ್ಲಿಂ ಲೀಗಿಗೆ ಅಂಥ ರಾಜಕೀಯ ಮಹತ್ವ ನೀಡಿದ್ದು ಸಮರ್ಥನೀಯವಾಗಿರಲಿಲ್ಲ. ಯಾಕೆಂದರೆ ಮುಸ್ಲಿಂ ಲೀಗ್ ಬಂಗಾಲ ಪ್ರಾಂತದ ಹೊರತು ಯಾವ ಮುಸ್ಲಿಂ ಬಹುಸಂಖ್ಯಾತ ಪ್ರಾಂತದಲ್ಲೂ ಅಧಿಕಾರದಲ್ಲಿರಲಿಲ್ಲ. ವೇವೆಲ್ ನಿರ್ಧಾರವು ಜಿನ್ನಾ ಅವರ ಮನೋಬಲವನ್ನು ಹೆಚ್ಚಿಸಿತು. ಕ್ರಿಪ್ಸ್ ಯೋಜನೆಯನ್ನು ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ಎರಡೂ ತಿರಸ್ಕರಿಸಿದ್ದರಿಂದಾಗಿ ಅದು ವಿಫಲವಾಗಿತ್ತು. ವೇವೆಲ್ ಯೋಜನೆಯು ಮುಸ್ಲಿಂ ಲೀಗಿನಿಂದ ಮಾತ್ರವೇ ತಿರಸ್ಕೃತವಾಗಿದ್ದರೂ ವಿಫಲವಾಯಿತು.

ಏನಿದ್ದರೂ, ಸಿಮ್ಲಾ ಸಭೆಯು ಈ ದೇಶಕ್ಕೆ ದುರಸ್ತಿ ಮಾಡಲಸಾಧ್ಯವಾದ ಕೆಡುಕನ್ನು ಮಾಡಿತು. ಅದು ದೇಶ ವಿಭಜನೆಗೂ ಪಾಕಿಸ್ಥಾನದ ಸ್ಥಾಪನೆಗೂ ದಾರಿಮಾಡಿಕೊಟ್ಟಿತು. ವೇವೆಲ್ ಅವರು ಜಿನ್ನಾರಿಗೆ ಔಪಚಾರಿಕವಾಗಿ 'ವೀಟೋ'ಅಧಿಕಾರ ನೀಡಿದಂತಾಯಿತು; ಇನ್ನು ಮುಂದೆ ಸಾಂವಿಧಾನಿಕ ಮುನ್ನಡೆಯ ಯಾವ ಯೋಜನೆಯಲ್ಲೂ ಕೊನೆಯ ನಿರ್ಧಾರ ಜಿನ್ನಾ ಅವರದೇ ಆಗಿತ್ತು. ಇದು ಭಾರತೀಯ ರಾಜಕಾರಣದ ಒಂದು ದುರಂತ ಸತ್ಯವಾಗಿತ್ತು. ಭಾರತೀಯ ರಾಷ್ಟ್ರೀಯ ಕಾಂಗ್ರೆಸು ಅಪಾರ ಭಾರತೀಯರನ್ನು ಪ್ರತಿನಿಧಿಸುವ ಸಂಸ್ಥೆಯೆಂದು ಕ್ರಿಪ್ಸ್ ಪರಿಗಣಿಸಿದ್ದ. ಹಾಗಾಗಿ ಕಾಂಗ್ರೆಸಿಗೆ ಪ್ರಮುಖ ಸ್ಥಾನಮಾನ ನೀಡಿದ್ದ. ಆದರೆ ವೇವೆಲ್ ಈ ಸತ್ಯವನ್ನು ಕಡೆಗಣಿಸಿದರು. ವೇವೆಲ್ ನಿರ್ಮಿಸಿದ ರಾಜಕೀಯ ಪರಿಸ್ಥಿತಿಯನ್ನು ಜಿನ್ನಾ ತನ್ನ ಉದ್ದೇಶ ಸಾಧನೆಗಾಗಿ ಚೆನ್ನಾಗಿ ಶೋಷಣೆ ಮಾಡಿದರು. ತನಗೆ ದೊರೆತ ವೀಟೋ ಅಧಿಕಾರವನ್ನು ತನ್ನ ಗುರಿ ಸಾಧಿಸಲು ಬಲು ಯುಕ್ತಿಯಿಂದ ಬಳಸಿದರು.

ವೇವೆಲ್ ಪ್ರತ್ಯೇಕತಾವಾದಿ ಮುಸ್ಲಿಮರಿಗೆ ಇನ್ನೊಂದು ರೀತಿಯಲ್ಲಿ ಪರೋಕ್ಷವಾಗಿ ನೆರವಾದರು. ಸಿಮ್ಲಾ ಸಭೆಯ ವೈಫಲ್ಯದಿಂದ ಮುಸ್ಲಿಂ ಲೀಗ್ ತುಂಬಾ ಬಲಶಾಲಿಯಾಯಿತು. ಮುಸ್ಲಿಂ ಲೀಗಿನ ವೇದಿಕೆಯನ್ನು ಬಿಟ್ಟರೆ ಮುಸ್ಲಿಮ್ ರಾಜಕಾರಣಿಗಳು ಅನಾಥರಾಗುವ ಪರಿಸ್ಥಿತಿ ನಿರ್ಮಾಣವಾಯಿತು. ಮುಸ್ಲಿಂ ಲೀಗ್ ಭಾರತೀಯ ಮುಸ್ಲಿಮರ ಏಕೈಕ ಪ್ರತಿನಿಧಿ ಸಂಸ್ಥೆಯೆಂದು ಅಧಿಕೃತವಾಗಿ ಸರಕಾರ ಒಪ್ಪಿದಂತಿತ್ತು. ಪರಿಣಾಮವಾಗಿ ಹೆಚ್ಚಿನ ಮುಸ್ಲಿಮ್ ರಾಜಕಾರಣಿಗಳು ಮುಸ್ಲಿಮ್ ಲೀಗಿನತ್ತ ವಾಲಿದರು. ಜಿನ್ನಾ ಇದನ್ನೇ ಬಯಸಿದ್ದರು.

## 24.5 ಘಟಕದ ಸಾರಾಂಶ

ಈ ಘಟಕದ ಅಧ್ಯಯನದಲ್ಲಿ ನಾವು

* ಬ್ರಿಟೀಷರು ವಿಧಿಯಿಲ್ಲದೇ ಕಳಿಸಿಕೊಟ್ಟ ಕ್ರಿಪ್ಸ್ ಮಿಷನ್ ಮತ್ತು ಅದರ ಕೆಲವು ಷರತ್ತುಗಳು ಹೇಗೆ ಅನುಕೂಲ ಸಿಂಧುವಾಗಿರದೇ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್‌ನಿಂದ ತಿರಸ್ಕರಿಸಲ್ಪಟ್ಟಿತು ಎಂಬುದನ್ನು ತಿಳಿದುಕೊಂಡೆವು.

* ಬ್ರಿಟೀಷರು ಕಳಿಸಿದ ವೇವೆಲ್ ಯೋಜನೆಯು ಕಾಂಗ್ರೆಸ್ಸ್‌ನವರಿಗೆ ಒಪ್ಪಿಗೆಯಾದರೂ ಕೂಡಾ ಮುಸ್ಲಿಂ ಲೀಗ್ ಮತ್ತು ಜಿನ್ನಾರಿಂದ ತಿರಸ್ಕೃತವಾಗಿದ್ದು ವಿಫಲತೆಯನ್ನು ಹೊಂದಿರುವ ವಿಷಯವನ್ನು ಸಹ ಈ ಘಟಕದಲ್ಲಿ ತಿಳಿದುಕೊಳ್ಳಲಾಯಿತು.

* ಇದರಿಂದಾಗಿ ಬ್ರಿಟೀಷರು ಮತ್ತೊಂದು ತೀರ್ಮಾನ ತೆಗೆದುಕೊಳ್ಳಲು ಸಿದ್ಧತೆ ಮಾಡಿಕೊಂಡಿದ್ದನ್ನೂ ಸಹ ಇಲ್ಲಿ ಅಧ್ಯಯನ ಮಾಡಿದೆವು.

## 24.6 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಕ್ರಿಪ್ಸ್ ಮಿಷನ್ ಮತ್ತು ವೇವೆಲ್ ಯೋಜನೆಗಳ ಮಹತ್ವವನ್ನು ತಿಳಿಸಿ.
2. ಕ್ರಿಪ್ಸ್ ಮಿಷನ್ ಮತ್ತು ವೇವೆಲ್ ಯೋಜನೆಗಳ ಷರತ್ತುಗಳನ್ನು ಕುರಿತು ಚರ್ಚಿಸಿ.

## 24.7 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು

1. Sumit Sarkar : Modern India
2. Prasad .L.P. : Constitutional History of India.

# ಘಟಕ - 25 ಮೌಂಟ್ ಬ್ಯಾಟನ್ ಯೋಜನೆ

*ವಿಷಯಸೂಚಿ*

## 25.0 ಉದ್ದೇಶಗಳು

ಈ ಘಟಕದ ಅಧ್ಯಯನದ ನಂತರ ಮತ್ತು ಭಾರತ ಸ್ವಾತಂತ್ರ್ಯವನ್ನು ಪಡೆಯುವ ನಿಟ್ಟಿನಲ್ಲಿ ಬ್ರಿಟೀಷರು ಸ್ವಾತಂತ್ರ್ಯವನ್ನು ನೀಡಬೇಕೆಂದು ತೀರ್ಮಾನಿಸಿ, ಮೌಂಟ್ ಬ್ಯಾಟನ್ ಯೋಜನೆಯನ್ನ ಮುಂದಿಟ್ಟು, ಪಂಜಾಬ್, ಬಂಗಾಳ ಮತ್ತು ಇತರೆ ಪ್ರದೇಶಗಳ ವಿಭಜನೆ ಮತ್ತು ಅವುಗಳ ಮುಂದಿನ ಭವಿಷ್ಯ ಇವುದಶನ್ನು ನಿರ್ಧರಿಸುವ ಯೋಜನೆಯಾಗಿದ್ದು ಇದನ್ನು ಕಾಂಗ್ರೆಸಂ ಮತ್ತು ಮುಸ್ಲಿಂ ಲೀಗ್ ಹೇಗೆ ಸ್ವೀಕರಿಸಿದರು ಎಂಬುದನ್ನು ತಿಳಿಯುವುದು ಈ ಘಟಕದ ಉದ್ದೇಶವಾಗಿದೆ.

## 25.0 ಪೀಠಿಕೆ

ಬ್ರಿಟೀಷರು ಭಾರತಕ್ಕೆ ಸ್ವಾತಂತ್ರ್ಯವನ್ನು ನೀಡಲು ತೀರ್ಮಾನಿಸಿದರು ಭಾರತವು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದು ಅವುಗಳ ನಿವಾರಣೆಗೆ ಈ ಮೌಂಟ್ ಬ್ಯಾಟನ್ ಯೋಜನೆಯನ್ನು ಮುಂದಿಟ್ಟ, ಸಮಸ್ಯೆಗಳನ್ನು ಹೀಗೆ ತೀರ್ಮಾನ ಮಾಡಿ ಭಾರತದ ವಿಭಜನೆ ಮತ್ತು ಸ್ವಾತಂತ್ರ್ಯವನ್ನು ನೀಡಿದ ವಿಷಯದ ಬಗ್ಗೆ ಈ ಘಟಕದಲ್ಲಿ ಅಧ್ಯಯನ ಮಾಡಲಾಗಿದೆ.

## 25.2 ಮೌಂಟ್ ಬ್ಯಾಟನ್ ಯೋಜನೆ (1947)

1946 ರ ಡಿಸೆಂಬರ್‌ನಲ್ಲಿ ಮುಸ್ಲಿಂ ಲೀಗ್ ಸಂವಿಧಾನ ಸಭೆಯನ್ನು ಬಹಿಷ್ಕರಿಸಲು ದೃಢ ಸಂಕಲ್ಪ ಮಾಡಿತು. ಕಾಂಗ್ರೆಸ್ ಮತ್ತು ಲೀಗ್ ಸದಸ್ಯರ ನಡುವಿನ ಭಿನ್ನಾಭಿಪ್ರಾಯದಿಂದಾಗಿ ಮಧ್ಯಾವಧಿ ಸರಕಾರದಲ್ಲಿ ಒಳ ಜಗಳಗಳಾಗುತ್ತಿದ್ದವು. ಇದು ತೀವ್ರ ರಾಜಕೀಯ ಬಿಕ್ಕಟ್ಟನ್ನುಂಟುಮಾಡಿತು.

ಲಾರ್ಡ್ ಲೂಯಿ ಮೌಂಟ್ ಬ್ಯಾಟನ್ ಬ್ರಿಟಿಷ್ ಪ್ರಧಾನಿ ಅಟ್ಲಿಯವರ ಹೊಸ ನೀತಿಯನ್ನು ಆಚರಣೆಗೆ ತರಲು ನೇಮಿಸಿದ 34 ನೆಯ ಹಾಗೂ ಕೊನೆಯ ಗವರ್ನರ್ ಜನರಲ್ ಹಾಗೂ ವೈಸ್‌ರಾಯ್. 1947 ಮಾರ್ಚ್ 22 ರಂದು ದಿಲ್ಲಿಗೆ ಆಗಮಿಸಿ ಅಧಿಕಾರ ವಹಿಸಿಕೊಂಡರು. "ಜೂನ್ ಮೂರು ಯೋಜನೆ" ಯನ್ನು ಬಹು ವೇಗದಲ್ಲಿ ಜಾರಿಗೊಳಿಸಿದರು. ಮೌಂಟ್‌ಬ್ಯಾಟನ್ ಭಾರತಕ್ಕೆ ವೈಸರಾಯ್ ಆಗಿ ಬರುವ ವೇಳೆಗೆ ಕಾಂಗ್ರೆಸ್ ನಾಯಕರು ಭಾರತದ ಅಖಂಡತೆಯನ್ನು ಉಳಿಸಿಕೊಳ್ಳಬೇಕೆಂಬ ತಮ್ಮ ವಾದವನ್ನು ಬಿಟ್ಟಿದ್ದರು. ಆದ್ದರಿಂದ ಭಾರತದ ವಿಭಜನೆಗೆ ಅವರನ್ನು ಒಪ್ಪಿಸಲು ಮೌಂಟ್ ಬ್ಯಾಟನ್‌ರಿಗೆ ಏನೂ ಕಷ್ಟವಾಗಲಿಲ್ಲ.

ಭಾರತಕ್ಕೊಂದು ಹೊಸ ನೀತಿಯನ್ನು ರೂಪಿಸಬೇಕು ಮತ್ತು ಅದನ್ನು ಆಚರಣೆಗೆ ತರಲು ಒಬ್ಬ ಹೊಸ ವೈಸಾರಯ್ ಬೇಕು ಎಂದು ಬ್ರಿಟಿಷ್ ಪ್ರಧಾನಿ ಎಟ್ಲಿಯವರು ಮನಗಂಡರು. ಅಂತೆಯೇ 1947 ರ ಫೆಬ್ರವರಿ 20 ರಂದು ಅವರು ಲಾರ್ಡ್ ವೇವೆಲ್‌ನ ಸ್ಥಾನಕ್ಕೆ ಲಾರ್ಡ್ ಲೂಯಿ ಮೌಂಟ್ ಬ್ಯಾಟನ್ ಅವರನ್ನು ಕಳುಹಿಸಲು ನಿರ್ಧರಿಸಿದರು.

ಕ್ಯಾಬಿನೆಟ್ ಮಿಶನ್ ಯೋಜನೆಯು ಸಾಂಗವಾಗಿ ಆಚರಣೆಗೆ ಬರುವ ಅವಕಾಶ ನಿಜವಾಗಿಯೂ ಇರಲಿಲ್ಲ. ಕಾಂಗ್ರೆಸ್-ಲೀಗ್ ಒಪ್ಪಂದಕ್ಕೋಸ್ಕರ ಅನಿರ್ದಿಷ್ಟವಾಗಿ ಕಾಯುವ ಬದಲು ಅಧಿಕಾರದ ಹಸ್ತಾಂತರಕ್ಕೆ ದಿನವನ್ನು ನಿರ್ಧರಿಸಬೇಕು ಮತ್ತು ಒಪ್ಪಂದ ಮಾಡಿಕೊಳ್ಳುವ ಜವಾಬ್ದಾರಿಯನ್ನು ನೇರವಾಗಿ ಎರಡು ಪಕ್ಷಗಳ ಮೇಲೂ ಹೊರಿಸಬೇಕೆಂದು ಎಟ್ಲಿ ಯೋಚಿಸಿದರು. ಅಧಿಕಾರದ ಹಸ್ತಾಂತರವನ್ನು ಮುಂದಕ್ಕೆ ಹಾಕಿದರೆ ಬ್ರಿಟನ್ನಿನ ಮೇಲೆ ಭಾರತಕ್ಕಿರುವ ವಿಶ್ವಾಸ ಕಡಿಮೆಯಾಗಿ ಮುಂದೆ ಎರಡು ದೇಶಗಳ ನಡುವಿನ ಸಂಬಂಧ ಕೆಟ್ಟುಹೋಗಬಹುದೆಂದು ಅವರು ಹೆದರಿದ್ದರು. ನಿಜವಾದ ಕಾರಣವೇನೆಂದರೆ ಬ್ರಿಟಿಷರಿಗೆ ಇಲ್ಲಿ ಆಡಳಿತವನ್ನು ಸಮರ್ಪಕವಾಗಿ ನಡೆಸುವ ಸಾಮರ್ಥ್ಯ ಇಲ್ಲದಿದ್ದದ್ದು. ಬ್ರಿಟನ್ನಿನ ಆರ್ಥಿಕ ಕೊರತೆ ಮತ್ತು ಸೈನಿಕ ಸಂಪನ್ಮೂಲಗಳು ಬರಿದಾಗಿದ್ದುದರಿಂದ ಭಾರತದಲ್ಲಿನ ಪರಿಸ್ಥಿತಿಯನ್ನು ನಿಯಂತ್ರಿಸಲು ಬ್ರಿಟನ್ ಅಸಮರ್ಥವಾಗಿತ್ತು. ಭಾರತೀಯ ಸಿವಿಲ್ ಸರ್ವಿಸಿಗೆ ಆಯ್ಕೆಯನ್ನು ಯುದ್ಧದ ಸಮಯದಲ್ಲಿ ನಿಲ್ಲಿಸಲಾಗಿತ್ತು. ತತ್ಪರಿಣಾಮವಾಗಿ ಭಾರತದಲ್ಲಿ ಭದ್ರವಾಗಿದ್ದ ಬ್ರಿಟಿಷ್ ಪ್ರಭುತ್ವದ ತಳಪಾಯವು ದುರ್ಬಲವಾಗಿತ್ತು. ಭಾರತದಲ್ಲಿ ಬ್ರಿಟಿಷ್ ಸೈನಿಕರ ಸಂಖ್ಯೆಯನ್ನು ಯುದ್ಧಕಾಲದಲ್ಲಿದ್ದ ಪ್ರಮಾಣದಿಂದ ತೀವ್ರವಾಗಿ ಇಳಿಸಲಾಯಿತು. ಬ್ರಿಟಿಷ್ ಸೇನೆಯಲ್ಲಿದ್ದ ಭಾರತೀಯರು ಸುಭಾಸ್‌ಚಂದ್ರ ಬೋಸರು ಸಂಘಟಿಸಿದ್ದ ಹಾಗೂ ನೇತೃತ್ವ ವಹಿಸಿದ್ದ ಅಜಾದ್ ಹಿಂದ್ ಫೌಜ್ ಇದರ ಮಾದರಿಯನ್ನು

ಅನುಸರಿಸುವ ಸಂಭವವಿತ್ತು. ಆದ್ದರಿಂದ ಬ್ರಿಟಿಷರು ಭಾರತದ ಆಡಳಿತವನ್ನು ಬಿಟ್ಟುಕೊಡುವ ಅಂತಿಮ ಗಡುವನ್ನು ನಿರ್ಣಯಿಸುವುದು ಅವಶ್ಯವಾಗಿತ್ತು.

1947 ರ ಫೆಬ್ರವರಿ 20 ರಂದು ಎಟ್ಲಿಯವರು ಒಂದು ಹೇಳಿಕೆಯನ್ನಿತ್ತರು. 1948 ಜೂನಿಗಿಂತ ಮೊದಲು ಅಧಿಕಾರವನ್ನು ಹೊಣೆಗಾರಿಕೆಯುಳ್ಳ ಭಾರತೀಯರ ಕೈಗೆ ಹಸ್ತಾಂತರಿಸುವ ನಿರ್ಧಾರವೇ ಈ ಹೇಳಿಕೆಯ ಮುಖ್ಯಾಂಶವಾಗಿತ್ತು. ಬ್ರಿಟಿಷ್ ಭಾರತದ ಆಡಳಿತದ ಅಧಿಕಾರವನ್ನು ಯಾವುದಾದರೊಂದು ಮಾದರಿಯ ಕೇಂದ್ರ ಸರಕಾರಕ್ಕೆ ಅಥವಾ ಭಾರತದ ಕೆಲವು ಪ್ರದೇಶಗಳಲ್ಲಿ ಆಗ ಇದ್ದ ಪ್ರಾಂತೀಯ ಸರಕಾರಗಳಿಗೆ ಹಸ್ತಾಂತರಿಸಲಾಗುವುದೆಂಬ ಸೂಚನೆ ಆ ಹೇಳಿಕೆಯಲ್ಲಿತ್ತು. ದೇಶ ವಿಭಜನೆಯ ಸ್ಪಷ್ಟವಾದ ಪೂರ್ವ ಸೂಚನೆಯೂ ಈ ಹೇಳಿಕೆಯಲ್ಲಿ ಅಂತರ್ಗತವಾಗಿತ್ತು.

ಎಟ್ಲಿಯವರ ಈ ಬಹು ಮುಖ್ಯವಾದ ಘೋಷಣೆಯು ಮುಸ್ಲಿಂ ಲೀಗನ್ನುಳಿದು ಭಾರತಾದ್ಯಂತ ಉತ್ಸಾಹದ ಅಲೆಗಳನ್ನೆಬ್ಬಿಸಿತು. ಲೀಗ್ ಮಾತ್ರ ಪುನಃ ನೇರ ಕ್ರಮಕ್ಕೆ ಇಳಿಯಿತು. ಇಡೀ ಪಂಜಾಬಿನಲ್ಲಿ ದೊಂಬಿ ಸ್ಫೋಟವಾಗಿ ಶೀಘ್ರವೇ ವಾಯುವ್ಯ ಗಡಿನಾಡು ಪ್ರಾಂತಕ್ಕೂ ಅದು ಹಬ್ಬಿತು. ಹೆಚ್ಚಿನ ಭಾಗಗಳಲ್ಲಿ ಕೊಳ್ಳೆ, ಬೆಂಕಿ, ಕೊಲೆ ಹಾಗೂ ಹಿಂಸಾಚಾರಗಳು ವಿಜೃಂಭಿಸಿದವು. ಸತತವಾಗಿ ನಡೆದ ಈ ಕೋಮು ವಿದ್ವೇಷದ ಪರಿಣಾಮವು ದುರದೃಷ್ಟದ್ದಾಗಿತ್ತು. ಅದುವರೆಗೆ ಅಖಂಡ ಭಾರತವನ್ನು ಬೆಂಬಲಿಸುತ್ತಿದ್ದ ಹಿಂದುಗಳು ಮತ್ತು ಸಿಖ್ಖರಿಗೆ ಅದು ಕಾರ್ಯ ಸಾಧ್ಯವಲ್ಲವೆಂದು ನಿಧಾನವಾಗಿ ಮನವರಿಕೆಯಾಗತೊಡಗಿತು. ಮುಸ್ಲಿಮರು ಸಂವಿಧಾನ ಸಭೆಯನ್ನು ಸೇರಲು ನಿರಾಕರಿಸಿದಲ್ಲಿ ಪಂಜಾಬ್ ಮತ್ತಬಂಗಾಲವನ್ನು ವಿಭಜಿಸಬೇಕೆಂದು ಅವರು ಕೇಳಿಕೊಂಡರು.

## 25.3 ಲಾರ್ಡ್ ಲೂಯಿ ಮೌಂಟ್ ಬ್ಯಾಟನ್ ಅವರ ಅಧಿಕಾರ

ಬ್ರಿಟಿಷ್ ಪ್ರಧಾನಿ ಎಟ್ಲಿಯವರು ನೇಮಿಸಿದ ಹೊಸ ವೈಸರಾಯ್ ಮೌಂಟ್ ಬ್ಯಾಟನ್ನರು 1947 ಮಾರ್ಚ್ 22 ರಂದು ದಿಲ್ಲಿಗೆ ಆಗಮಿಸಿ ಅಧಿಕಾರ ವಹಿಸಿಕೊಂಡರು. ಬ್ರಿಟಿಷ್ ಭಾರತದ ಆಡಳಿತವನ್ನು ಆದಷ್ಟು ಬೇಗನೆ ಭಾರತೀಯರಿಗೆ ವರ್ಗಾಯಿಸುವ ಕುರಿತು ಸಮಗ್ರ ರೂಪುರೇಷೆಗಳನ್ನು ತಯಾರಿಸಲು ಅವರಿಗೆ ವಿಶೇಷ ಅಧಿಕಾರ ನೀಡಲಾಗಿತ್ತು. ಮೌಂಟ್ ಬ್ಯಾಟನ್ನರು ಭಾರತದ 34 ನೆಯ ಹಾಗೂ ಕೊನೆಯ ಗವರ್ನರ್ ಜನರಲ್ ಹಾಗೂ ವೈಸರಾಯ್ ಆಗಿದ್ದರು. ಅಧಿಕಾರ ವಹಿಸಿದ ಕೂಡಲೇ ಅವರು ಬ್ರಿಟಿಷ್ ಪ್ರಧಾನಿಯವರಿತ್ತ ಸೂಚನೆಗಳಿಗನುಸಾರವಾಗಿ ಕಾರ್ಯಪ್ರವೃತ್ತರಾದರು.

ಮೌಂಟ್‌ಬ್ಯಾಟನ್ ಎರಡು ತಿಂಗಳುಗಳನ್ನು ಸಂಧಾನಕ್ಕಾಗಿ ಕಳೆದರು. ಅನಂತರ ಒಂದು ಯೋಜನೆಯನ್ನು ತಯಾರಿಸಿದರು. ಆ ಯೋಜನೆಯನ್ನು ಕಾಂಗ್ರೆಸ್ ನಾಯಕರು ಮತ್ತು ಜಿನ್ನಾ 1947 ಜೂನ್ ಎರಡರಂದು ಅಂಗೀಕರಿಸಿದರು. ಮರುದಿನ ಎಟ್ಲಿಯವರು ಅದನ್ನು ಬ್ರಿಟನ್ನಿನ ಹೌಸ್ ಆಫ್ ಕಾಮನ್ಸ್‌ನಲ್ಲಿ ಪ್ರಕಟಿಸಿದರು. ಆದ್ದರಿಂದ ಅದು "ಜೂನ್ ಮೂರರ ಯೋಜನೆ" ಎಂದು ಪ್ರಸಿದ್ಧವಾಯಿತು.

ಭಾರತದ ವಿಭಜನೆಯೇ ಈ ಜೂನ್ ಮೂರರ ಯೋಜನೆಯ ಸಾರಸರ್ವಸ್ವವಾಗಿತ್ತು. ಭಾರತಕ್ಕೊಂದು ಪ್ರತ್ಯೇಕ ಹಾಗೂ ಅಂತಿಮ ಸಂವಿಧಾನವನ್ನು ರೂಪಿಸುವ ಉದ್ದೇಶ ಬ್ರಿಟಿಷರಿಗಿರಲಿಲ್ಲ ಅಥವಾ ಆಗ ನಡೆಯುತ್ತಿದ್ದ ಸಂವಿಧಾನ ಸಭೆಯ ಕಾರ್ಯವನ್ನು ತಡೆಯುವ ಉದ್ದೇಶವೂ ಇರಲಿಲ್ಲ. ಪ್ರಕೃತ ಇರುವ ಸಭೆಯು ರೂಪಿಸಿದ ಸಂವಿಧಾನವು ಭಾರತದ ಕೆಲವು ಪ್ರದೇಶಗಳ ಜನರಿಗೆ ಒಪ್ಪಿಗೆಯಾಗಿರದ ಕಾರಣ ಅಂಥ ಪ್ರದೇಶಗಳ ಜನಾಭಿಪ್ರಾಯವನ್ನು ಅರಿಯುವುದು ಅಗತ್ಯವಾಗಿತ್ತು. ಅಂಥವರಿಗಾಗಿ ಪ್ರತ್ಯೇಕ ಸಂವಿಧಾನವನ್ನು ರೂಪಿಸಬೇಕೆ? ಮತ್ತು ಅಂಥ ಹೊಸ ಸಂವಿಧಾನ ರಚನೆಗೆ ಈಗಿರುವ ಸಭೆಯೆ ಸಾಕೆ? ಅಥವಾ ಹೊಸ ಸಭೆಯನ್ನು ರಚಿಸಬೇಕೆ? ಎಂಬ ಕುರಿತು ಅಮೂಲಾಗ್ರವಾಗಿ ಚಿಂತಿಸಬೇಕಾಗಿತ್ತು. ಅದಕ್ಕಾಗಿ ಈ ಕೆಳಗಿನ ಕ್ರಮಗಳನ್ನು ಅನುಸರಿಸಬೇಕಾಗಿತ್ತು.

### *25.3.1 ಪಂಜಾಬ್ ಮತ್ತು ಬಂಗಾಲ*

ಬಂಗಾಲ ಮತ್ತು ಪಂಜಾಬಿನ ಪ್ರಾಂತೀಯ ಶಾಸನ ಸಭೆಗಳೆರಡೂ ಎರಡು ಭಾಗಗಳಲ್ಲಿ ಸಭೆ ಸೇರುವುವು. ಒಂದು ಸಭೆಯು ಮುಸ್ಲಿಂ ಬಹುಸಂಖ್ಯಾತ ಜಿಲ್ಲೆಗಳನ್ನು (ಬಂಗಾಲದಲ್ಲಿ 16 ಮತ್ತು ಪಂಜಾಬಿನಲ್ಲಿ 17) ಪ್ರತಿನಿಧಿಸುವ ಸಭೆ; ಇನ್ನೊಂದು ಉಳಿದ ಜಿಲ್ಲೆಗಳನ್ನು ಪ್ರತಿನಿಧಿಸುವ ಸಭೆ. ಈ ಎರಡು ಪ್ರಾಂತಗಳ ಶಾಸನ ಸಭೆಯ ಸದಸ್ಯರು ಪ್ರತ್ಯೇಕವಾಗಿ ಸಭೆ ಸೇರಿ ಆ ಪ್ರಾಂತವನ್ನು ವಿಭಜಿಸಬೇಕೆ? ಬೇಡವೇ? ಎಂಬುದನ್ನು ಮತದಾನದ ಮೂಲಕ ನಿರ್ಧರಿಸುವರು. ತಮ್ಮ ಪ್ರಾಂತವನ್ನು ವಿಭಜಿಸಲು ನಿರ್ಧರಿಸುವ ಸಂದರ್ಭದಲ್ಲಿ, ಆ ಪ್ರಾಂತದ ಪ್ರತಿಯೊಂದು ಭಾಗಕ್ಕೆ ಸೇರಿದ ಶಾಸನ ಸಭಾ ಸದಸ್ಯರು ತಾವು ಆಗ ಸೇರುತ್ತಿದ್ದ ಸಂವಿಧಾನ ಸಭೆಯಲ್ಲಿ ಪಾಲ್ಗೊಳ್ಳಬೇಕೇ ಅಥವಾ ಪ್ರತ್ಯೇಕ ಹೊಸ ಸಂವಿಧಾನ ಸಭೆಯಲ್ಲಿ ಪಾಲ್ಗೊಳ್ಳಬೇಕೇ ಎಂಬುದನ್ನೂ ನಿರ್ಧರಿಸಬೇಕು.

### *25.3.2 ಇತರೆ ರಾಜ್ಯಗಳು*

ಬಂಗಾಲ ಮತ್ತು ಪಂಜಾಬ್ ವಿಭಜನೆಯಿಂದ ಉದ್ಭವಿಸುವ ಗಡಿ ಪ್ರಶ್ನೆಯನ್ನು ಗವರ್ನರ್ ಜನರಲ್ ನೇಮಿಸುವ "ಸೀಮಾ ಆಯೋಗ" ವು ತೀರ್ಮಾನಿಸುವುದು.

ಸಿಂಧಿನ ಶಾಸನಸಭೆಯು ತಾನು ಎರಡು ಸಂವಿಧಾನ ಸಭೆಗಳಲ್ಲಿ (ಹಾಲಿ ಯಾ ಪ್ರತ್ಯೇಕ) ಯಾವುದರೊಂದಿಗೆ ಸೇರಬೇಕೆಂಬುದನ್ನು ಆರಿಸಿಕೊಳ್ಳುವುದು.

ವಾಯುವ್ಯ ಗಡಿನಾಡು ಪ್ರಾಂತದ ಜನರು ಈ ವಿಷಯದಲ್ಲಿ ತಾವೇ ನೇರವಾಗಿ ಸರ್ವಪ್ರಜಾ ನಿರ್ಣಯದ (ಪ್ಲೆಬಿಸೈಟ್) ಮೂಲಕ ತಮ್ಮ ಆಯ್ಕೆಯನ್ನು ನಿರ್ಧರಿಸುವರು.

ಬಲೂಚಿಸ್ಥಾನವು ಎರಡು ಸಂವಿಧಾನ ಸಭೆಗಳ ಪೈಕಿ ಒಂದನ್ನು ಯಾವ ವಿಧಾನದಿಂದ ಆರಿಸಿಕೊಳ್ಳಬೇಕೆಂಬುದನ್ನು ಗವರ್ನರ್ ಜನರಲ್ ತೀರ್ಮಾನಿಸುವರು.

ಸಿಲ್ಹಟ್ ಜಿಲ್ಲೆಯು ಅಸ್ಸಾಮ್ ಪ್ರಾಂತದೊಳಗಿದ್ದ ಮುಸ್ಲಿಂ ಬಹು ಸಂಖ್ಯಾಕ ಬಂಗಾಲಿ ಭಾಷಾ ಪ್ರದೇಶವಾಗಿತ್ತು. ಸಿಲ್ಹಟ್ ಜಿಲ್ಲೆಯು ಬಂಗಾಲದ ಮುಸ್ಲಿಂ ಬಹುಸಂಖ್ಯಾಕ ಭಾಗಕ್ಕೆ ತಾಗಿರುವ ಪ್ರದೇಶವಾಗಿತ್ತು. ಬಂಗಾಲವನ್ನು ವಿಭಜಿಸಬೇಕಾದರೆ ಸಿಲ್ಹಟ್ ಜಿಲ್ಲೆಯಲ್ಲಿ ಸರ್ವಪ್ರಜಾ ನಿರ್ಣಯ ತಿಳಿದು, ಸಿಲ್ಹಟ್ ಅಸ್ಸಾಮಿನ ಭಾಗವಾಗಿ ಮುಂದುವರಿಯಬೇಕೇ? ಅಥವಾ ಅದನ್ನು ಬಂಗಾಲದ ಮುಸ್ಲಿಮ್ ಬಹುಸಂಖ್ಯಾಕ ಜಿಲ್ಲೆಗಳನ್ನು ಒಟ್ಟುಗೂಡಿಸಿ ರಚಿಸಲಾಗುವ ಹೊಸ ಪ್ರಾಂತದಲ್ಲಿ ಸೇರಿಸಬೇಕೇ ಎಂದು ನಿರ್ಧರಿಸಲಾಗುವುದು.

ಬಂಗಾಲ ಹಾಗೂ ಪಂಜಾಬಿನ ಎರಡು ಭಾಗಗಳಲ್ಲಿ ಮತ್ತು ಸಿಲ್ಹಟ್‌ನಲ್ಲಿ ಆಯಾ ಸಂವಿಧಾನ ಸಭೆಗಳ ಪ್ರತಿನಿಧಿಗಳ ಆಯ್ಕೆಗೆ ಹೊಸ ಚುನಾವಣೆ ನಡೆಸಬೇಕು.

ಭಾರತದ ಅರಸೊತ್ತಿಗೆಯ ರಾಜ್ಯಗಳು: ಯಾವ ಅರಸೊತ್ತಿಗೆಯ ರಾಜ್ಯಕ್ಕೂ ಬ್ರಿಟಿಷ್ ಸಿಂಹಾಸನದಿಂದ ಸಾರ್ವಭೌಮತ್ವ ವರ್ಗಾವಣೆಯಾಗದು.

ಭಾರತದಲ್ಲಿ ಬ್ರಿಟಿಷ್ ಚಕ್ರಾಧಿಪತ್ಯದ ಉತ್ತರಾಧಿಕಾರಿಯಾಗಿ, ಸ್ವಯಂ ಆಡಳಿತದ ಸ್ಥಾನಮಾನದ (ಡೊಮಿನಿಯನ್ ಸ್ಟೇಟಸ್) ಒಂದು ಅಥವಾ ಹೆಚ್ಚು ರಾಜ್ಯಗಳನ್ನು ಈ ದೇಶದಲ್ಲಿ ಸ್ಥಾಪಿಸಲು ಹಾಲಿ ವರ್ಷದಲ್ಲಿ ಬ್ರಿಟಿಷ್‌ಸಂಸತ್ತಿನಲ್ಲಿ ಶಾಸನವನ್ನು ಮಂಡಿಸಲಾಗುವುದು.

## 25.4 ಮೌಂಟ್ ಬ್ಯಾಟನ್ ಯೋಜನೆಯ ಅನುಷ್ಠಾನ

ಈ ಯೋಜನೆಯನ್ನು ಬಹು ವೇಗದಲ್ಲಿ ಜಾರಿಗೊಳಿಸಲಾಯಿತು. ಬಂಗಾಲ ಮತ್ತು ಪಂಜಾಬ್ ಶಾಸನ ಸಭೆಗಳು ತಮ್ಮ ಪ್ರಾಂತಗಳನ್ನು ವಿಭಜಿಸಲು ನಿರ್ಧರಿಸಿದವು. ಸಿಂಧ್ ಮತ್ತು ಬಲೂಚಿಸ್ಥಾನಗಳು ಪ್ರತ್ಯೇಕ, ಹೊಸ ಸಂವಿಧಾನ ಸಭೆಯಲ್ಲಿ ಭಾಗವಹಿಸಲು ನಿರ್ಧರಿಸಿದವು. ವಾಯುವ್ಯ ಗಡಿನಾಡು ಪ್ರಾಂತದಲ್ಲಿ ಖಾನ್ ಅಬ್ದುಲ್ ಗಫಾರ್ ಖಾನ್‌ರ ಅನುಯಾಯಿಗಳು ಸರ್ವಪ್ರಜಾ ನಿರ್ಣಯವನ್ನು ತಿರಸ್ಕರಿಸಿ, ಮತದಾನ ಮಾಡಲಿಲ್ಲ. ಇದರ ಪರಿಣಾಮವಾಗಿ ಕೇವಲ ಶೇಕಡ 50.49 ಮಂದಿ ಮತದಾರರು ಅದರಲ್ಲಿ ಪಾಲುಗೊಂಡರು. ಅವರು ಹೊಸ, ಪ್ರತ್ಯೇಕ ಸಂವಿಧಾನ ಸಭೆಗೆ ಸೇರುವುದನ್ನು ಬೆಂಬಲಿಸಿದರು. ಸಿಲ್ಹಟ್ ಬಂಗಾಲದ ಮುಸ್ಲಿಂ ಬಹುಸಂಖ್ಯಾಕ ಪ್ರಾಂತದಲ್ಲಿ ಸೇರ್ಪಡೆಯಾಗಲು ನಿರ್ಧರಿಸಿತು.

ಇವೆಲ್ಲ ಕಡೆಗಳಲ್ಲಿ ಮತದಾನದ ವಿಧಿಯು 1947 ರ ಜುಲೈ ಮಧ್ಯಭಾಗದೊಳಗೆ ಪೂರ್ಣವಾಯಿತು. ಸರ್ ಸಿರಿಲ್ ರ್‍ಯಾಡ್‌ಕ್ಲಿಫ್ ಅವರೊಬ್ಬರೇ ಅಧ್ಯಕ್ಷರಾಗಿದ್ದ ಎರಡು ಸೀಮಾ ಆಯೋಗಗಳು ವಿಭಜನೆಯಾಗುವ ಪಂಜಾಬಿನ ಹಾಗೂ ಬಂಗಾಲದ ಎರಡು ಭಾಗಗಳ ನಡುವಿನ ಅಂತರಾಷ್ಟ್ರೀಯ ಗಡಿಗಳನ್ನು ನಿರ್ಧರಿಸಿದವು. ಆದರೆ ಸೀಮಾ ಆಯೋಗದ ತೀರ್ಪು 1947 ಆಗಸ್ಟ್ 17 ರಂದು (ಅಂದರೆ ಎರಡು ರಾಜ್ಯಗಳು ಅಸ್ತಿತ್ವಕ್ಕೆ ಬಂದ ಬಳಿಕ) ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ನಾಯಕರಿಗೆ ದೊರೆಯಿತು. ಆಯೋಗದ ತೀರ್ಪನ್ನು ಅನಿವಾರ್ಯವಾಗಿ ಕಾಂಗ್ರೆಸ್ ನಾಯಕರು ಒಪ್ಪಲೇ ಬೇಕಾಯಿತು.

ಸೇನಾ ಪಡೆಗಳನ್ನು ಭಾರತ ಮತ್ತು ಪಾಕಿಸ್ಥಾನಗಳೊಳಗೆ ಹಂಚಲಾಯಿತು. ಬ್ರಿಟಿಷ್ ಭಾರತ ಸರಕಾರದಲ್ಲಿ ಕೆಲಸ ಮಾಡುತ್ತಿದ್ದ ಹೆಚ್ಚಿನ ಯೂರೋಪಿಯನ್ನರು ತಮಗೆ ಸಿಗಬೇಕಾಗಿದ್ದ ಸೇವಾ ಪರಿಹಾರವನ್ನು ಸ್ವೀಕರಿಸಿ ನಿವೃತ್ತರಾದರು. ಸರಕಾರಿ ಸೇವೆಯಲ್ಲಿದ್ದ ವಸ್ತುತಃ ಎಲ್ಲ ಮುಸ್ಲಿಮರು ಪಾಕಿಸ್ಥಾನದಲ್ಲಿ ಸರಕಾರಿ ಸೇವೆಯನ್ನು ಮಾಡಲು ಇಚ್ಛಿಸಿದರು. ಅಂತೆಯೇ ಎಲ್ಲ ಮುಸ್ಲಿಮೇತರ ಸರಕಾರಿ ನೌಕರರು ಭಾರತದಲ್ಲಿ ತಮ್ಮ ಸೇವೆಯನ್ನು ಆರಿಸಿಕೊಂಡರು.

## 25.5 ಘಟಕದ ಸಾರಾಂಶ

ಈ ಘಟಕದ ಅಧ್ಯಯನದಿಂದ ನಾವು

* ಭಾರತ ಸ್ವಾತಂತ್ರ್ಯ ಚಳುವಳಿಯ ಅಂತಿಮ ಹಂತದಲ್ಲಿ ಭಾರತಕ್ಕೆ ಸ್ವಾತಂತ್ರ್ಯ ನೀಡಲು ಬ್ರಿಟೀಷರು ಇಚ್ಛಿಸಿದ್ದನ್ನು ತಿಳಿದುಕೊಂಡೆವು.
* ಇದೇ ಸಮಯದಲ್ಲಿ ಮುಸ್ಲಿಂ ಲೀಗ್ ಭಾರತ ವಿಭಜನೆಯಾಗಬೇಕೆಂದು ಒತ್ತಾಯಿಸಿದಾಗ ಈ ಎಲ್ಲಾ ವಿಷಯಗಳನ್ನು ಸಹಕರಿಸಲು ಬ್ರಿಟೀಷ್ ಸರ್ಕಾರವು ಲಾರ್ಡ್ ಮೌಂಟ್ ಬ್ಯಾಟನ್‌ರವರನ್ನು ಭಾರತಕ್ಕೆ ಕಳುಹಿಸಿದರು. ಮೌಂಟ್ ಬ್ಯಾಟನ್ ತನ್ನದೇ ಆದಂತಹ ಒಂದು ಯೋಜನೆಯನ್ನು ತಯಾರಿಸಿ, ಭಾರತೀಯರ ಮುಂದಿಟ್ಟನು.
* ಇದನ್ನು ಒಪ್ಪಿಕೊಂಡರೆ ಸ್ವಾತಂತ್ರ್ಯ ನೀಡಲು ಸಿದ್ದರಿದ್ದೇವೆ ಎಂದು ತಿಳಿಸಿದನು.
* ಸ್ವಯಂ ಆಡಳಿತದ ಸ್ಥಾನಮಾನಕ್ಕೆ ಭಾರತ ಒಪ್ಪಿತು. ಮುಸ್ಲಿಂ ಲೀಗ್ ಭಾರತದ ವಿಭಜನೆಗೆ ಒಪ್ಪಿತು.
* ಇದರಿಂದಾಗಿ 15, ಆಗಸ್ಟ್ 1947 ರಂದು ಭಾರತ ಮತ್ತು ಪಾಕಿಸ್ತಾನಕ್ಕೆ ಸ್ವಾತಂತ್ರ್ಯ ನೀಡಲು ಒಪ್ಪಿದರು.

## 25.6 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಭಾರತದ ಸ್ವಾತಂತ್ರ್ಯ ಪಡೆಯುವಲ್ಲಿ ಮೌಂಟ್ ಬ್ಯಾಟನ್ ಯೋಜನೆಯ ಮಹತ್ವವನ್ನು ವಿವರಿಸಿ.
2. ಮೌಂಟ್ ಬ್ಯಾಟನ್ ಯೋಜನೆಯ ಷರತ್ತುಗಳನ್ನು ಮತ್ತು ಅವುಗಳ ಪರಿಣಾಮಗಳನ್ನು ವಿವರಿಸಿ.

## 25.7 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


1. A.C. Choudhary : History of Modern India

2. Prasad .L.P. : History of Indian National Movement

# ಘಟಕ -26 ಭಾರತದ ವಿಭಜನೆ

*ವಿಷಯಸೂಚಿ*

## 26.0 ಉದ್ದೇಶಗಳು

ಈ ಘಟಕದ ಉದ್ದೇಶ ಭಾರತಕ್ಕೆ ಸ್ವಾತಂತ್ರ್ಯ ಕೊಡಲು ನಿರ್ಧರಿಸಿದ ಬ್ರಿಟೀಷರ ಮುಂದೆ ಮುಸ್ಲಿಂ ಲೀಗ್ ಭಾರತವನ್ನು ವಿಭಜನೆ ಮಾಡಿ ನಮಗೆ ಪ್ರತ್ಯೇಕ ರಾಷ್ಟ್ರ ಮತ್ತು ಸ್ವಾತಂತ್ರ್ಯವನ್ನು ನೀಡಿರೆಂದು ಕೇಳಿದಾಗ, ಇಲ್ಲಿ ಹಲವಾರು ಸಮಸ್ಯೆಗಳಿದ್ದು ಅವುಗಳನ್ನು ತೀರ್ಮಾನಿಸಲು, ಭಾರತ ಮತ್ತು ಪಾಕಿಸ್ತಾನವನ್ನು ವಿಂಗಡಣೆ ಮಾಡಿದಲ್ಲಿ ಗಡಿರೇಖೆ ನಿರ್ಧಾರವಾಗಬೇಕು ಮತ್ತು ಹಲವು ವಿಷಯಗಳಲ್ಲಿ ವಿಭಜನೆಯಾಗಬೇಕು ಎನ್ನುವ ದೃಷ್ಟಿಯಿಂದ ರ್‍ಯಾಡ್‌ಕ್ಲಿಪ್ ಆಯೋಗ ರಚಿಸಿದರು. ಇದರ ವರದಿಯನ್ನು ಅನುಸರಿಸಿ ಭಾರತವನ್ನು ವಿಭಜಿಸಿ ಭಾರತ ಮತ್ತು ಪಾಕಿಸ್ತಾನವೆಂದು ಎರಡು ದೇಶಗಳಾಗಿ ವಿಂಗಡಿಸಿದರು. ಈ ಎಲ್ಲಾ ಕಾರ್ಯಗಳ ವಿಷಯವನ್ನು ಈ ಘಟಕದಲ್ಲಿ ಅಧ್ಯಯನ ಮಾಡಲಾಗುವುದು.

## 26.1 ಪೀಠಿಕೆ

ಭಾರತವನ್ನು ಬಿಟ್ಟುಹೋಗುವುದು ಮತ್ತು ಅವರಿಗೆ ಸ್ವಾತಂತ್ರ್ಯ ನೀಡುವುದೆಂದು ತೀರ್ಮಾನವಾದಾಗ ಮುಸ್ಲಿಮರು ತಮಗೆ ಪ್ರತ್ಯೇಕ ರಾಷ್ಟ್ರಬೇಕೆಂದು ಒತ್ತಾಯ ಮಾಡಿದಾಗ ಅದು ಬಹಳ ದೊಡ್ಡ ಸಮಸ್ಯೆಯಾಗುವುದೆಂದು ತಿಳಿದ ಬ್ರಿಟೀಷರು ರ್‍ಯಾಡ್‌ಕ್ಲಿಪ್ ನೇತೃತ್ವದಲ್ಲಿ ಒಂದು ಆಯೋಗವನ್ನು ರಚಿಸಿದರು. ಇದರ ವರದಿಯು ಹಿಂದೂ-ಮುಸ್ಲಿಂ ಜನಾಂಗವನ್ನು ಪಂಜಾಬ್, ಬಂಗಾಳ ಮತ್ತು ಇತರೇ ಪ್ರದೇಶಗಳಲ್ಲಿ ವಿಭಜನೆ ಮಾಡಬೇಕಾಗಿದ್ದಿತು ಮತ್ತು ಗಡಿರೇಖೆಯನ್ನು ಗುರುತಿಸಬೇಕಾಗಿತ್ತು. ರ್‍ಯಾಡ್‌ಕ್ಲಿಪ್ ವರದಿ ಬಂದು ಅದನ್ನು ಅನುಷ್ಠಾನಗೊಳಿಸಿದಾಗ ಆದಂತಹ ಸಾವುನೋವು, ಆಘಾತ, ಮಾನಸಿಕ ಕ್ಷೋಭೆ ಮುಂತಾದ ವಿಷಯಗಳ ಚಿತ್ರಣ ಈ ಘಟಕದಲ್ಲಿದೆ ಇದೆಲ್ಲವನ್ನು ಹೇಗೆ ಗಾಂಧೀಜಿಯವರು ಶಾಂತಗೊಳಿಸಿದರು ಮತ್ತು ಎರಡೂ ದೇಶಗಳಲ್ಲಿ ಯಾರು ಸರ್ಕಾರವನ್ನು ಸ್ಥಾಪಿಸಿದರು ಎಂಬಿವೇ ಮುಂತಾದ ವಿಷಯಗಳನ್ನು ಈ ಘಟಕದಲ್ಲಿ ತಿಳಿಯಲಾಗುವುದು.

## 26.2 ರ್‍ಯಾಡ್‌ಕ್ಲಿಪ್ ಆಯೋಗದ ವರದಿ ಮತ್ತು ಅನುಷ್ಠಾನ

ಲಾರ್ಡ್ ಮೌಂಟ್ ಬ್ಯಾಟನ್ ಯೋಜನೆ ಪ್ರಕಾರ ಬ್ರಿಟೀಷ್ ಪ್ರಾಂತ್ಯಗಳು ಭಾರತ ಅಥವಾ ಪಾಕಿಸ್ತಾನ ಸೇರುವ ಬಯಕೆಯನ್ನು ಶಾಸನ ಸಭೆಯಲ್ಲಿ ತೀರ್ಮಾನಿಸಬಹುದಾಗಿತ್ತು. ಪಂಜಾಬ್ ಮತ್ತು ಬಂಗಾಳಗಳಲ್ಲಿ ಹಿಂದೂ-ಮುಸ್ಲಿಮರ ಜನಸಂಖ್ಯೆ ಸಮಾನವಾಗಿದ್ದು ಗಡಿ ಭಾಗಗಳನ್ನು ನಿರ್ಧರಿಸಲು ಸರ್ ಸಿರಿಲ್ ರ್‍ಯಾಡ್‌ಕ್ಲಿಪ್‌ರ ನೇತೃತ್ವದಲ್ಲಿ ಗಡಿ ಆಯೋಗವನ್ನು ನಿರ್ಮಿಸಲಾಯಿತು. ಪಾಕಿಸ್ತಾನದಲ್ಲಿ ಹಿಂದೂಗಳಿದ್ದಂತೆ ಪಂಜಾಬ್‌ನಲ್ಲಿ ಮುಸ್ಲಿಮರಿದ್ದರು. ಇವೆರಡೂ ಜನಾಂಗಗಳನ್ನು ಸರಿಯಾಗಿ ವಿಂಗಡಣೆ ಮಾಡುವುದು ಕಷ್ಟದ ಕೆಲಸವಾಗಿತ್ತು. ಆದರೆ ಕೇವಲ ಎರಡು ತಿಂಗಳಲ್ಲೆ ಆಯೋಗ ತನ್ನ ಕೆಲಸ ಮುಗಿಸಿ ವರದಿಯನ್ನು 1947 ರ ಜುಲೈ 17 ರಂದು ಪ್ರಕಟಿಸಿದರು. ಗಡಿ ರೇಖೆಯನ್ನು ನಿರ್ಧರಿಸಿ ಮನೆ, ಕೃಷಿ, ನಾಲೆ, ಕೃಷಿಭೂಮಿ, ತೋಟ ಮುಂತಾದವುಗಳನ್ನು ವಿಭಜಿಸಲಾಯಿತು. ಕುಟುಂಬಗು, ಪವಿತ್ರ ಸ್ಥಳಗಳು ವಿಂಗಡಣೆಯಾದವು. ಪಾಕಿಸ್ತಾನದಿಂದ ಸಿಖ್ಖರು ಮತ್ತು ಹಿಂದೂಗಳು ಭಾರತದಿಂದ ಮುಸ್ಲಿಮರು ಗಡಿ ದಾಟುವಲ್ಲಿ ಉಂಟಾದ ಗಲಭೆ ಉದ್ರೇಕದ ಕ್ಷೋಭೆ ಭುಗಿಲೆದ್ದಿತು. 50,000 ಗಡಿ ಸೇನೆಯಿದ್ದರೂ ಹತ್ತು ಮಿಲಿಯನ್ ನಿರಾಶ್ರಿತರ ಹಾಹಾಕಾರದ ಹತೋಟಿ ಪರಿಣಾಮಕಾರಿಯಾಗಿರಲಿಲ್ಲ. ರೈಲು, ಎತ್ತಿನಗಾಡಿ ಮತ್ತು ಕಾಲ್ನಡಿಗೆಯಲ್ಲಿ ತಮ್ಮ ತಮ್ಮ ಮನೆ ಮಾಡುಗಳನ್ನು ತೊರೆದು ಪಾಕಿಸ್ತಾನದಿಂದ ಭಾರತಕ್ಕೂ, ಭಾರತದಿಂದ ಪಾಕಿಸ್ತಾನಕ್ಕೂ ಸ್ಥಳಾಂತರಿಸಿದ ಜನರ ಸ್ಥಿತಿ ಬಹುದಾರುಣವಾಗಿತ್ತು. ಕೊಲೆ, ಸುಲಿಗೆ, ದರೋಡೆ ನಿತ್ಯದ ಸಾಧಾರಣ ದೃಶ್ಯವಾಗಿದ್ದು, ಸ್ತ್ರೀಯರು ಮತ್ತು ಮಕ್ಕಳನ್ನು ಚಿತ್ರಹಿಂಸೆಗೊಳಪಡಿಸಿ ಕೊಲ್ಲಲಾಯಿತು. ಹಿಂಸಾಕೃತ್ಯ, ಅತ್ಯಾಚಾರ, ಅಪಹರಣ, ರಕ್ತಪಾತ ಅಮಾನುಷವಾಗಿತ್ತು. ಈ ವಾರ್ತೆ ತಿಳಿದ ಗಾಂಧೀಜಿ ಅಮರಣಾಂತ ಉಪವಾಸ ಪ್ರಾರಂಭಿಸಿ ಶಾಂತಿ ನೆಲೆಸಿತು. ನಂತರ ಗಾಂಧೀಜಿ ಪಂಜಾಬ್‌ನತ್ತ ಧಾವಿಸಿ, ದೆಹಲಿಯ ನೆಹರೂ ಸರ್ಕಾರ ನಿರಾಶ್ರಿತರ ಸಮಸ್ಯೆಯನ್ನು ಎದುರಿಸುತ್ತಿದ್ದು, ಜಯಶಾಲಿಯಾಯಿತು.

ಪಾಕಿಸ್ತಾನದಿಂದ ಹೊರ ಬಂದ ಹಿಂದೂಗಳ ದಾರುಣ ಸ್ಥಿತಿಗೆ ಕೆರಳಿದ ಹಿಂದೂ ಸಂಘಗಳು ಪ್ರತೀಕಾರದಲ್ಲಿ ತೊಡಗಿದವು. ಆದರೆ ಅವರನ್ನು ಗಾಂಧೀಜಿ ಶಾಂತಗೊಳಿಸಿದರು. ಭಾರತ ಸರ್ಕಾರ ವಿಭಜನೆ ಒಪ್ಪಂದದ ಪ್ರಕಾರ ಪಾಕಿಸ್ತಾನಕ್ಕೆ ಕೊಡಬೇಕಾಗಿದ್ದ

550 ಮಿಲಿಯನ್ ರೂಪಾಯಿಗಳನ್ನು ತಡೆಹಿಡಿಯಲಾಗಿದ್ದಿತು. ಅದರ ವಿರುದ್ಧ ಗಾಂಧೀಜಿ ಉಪವಾಸವಾಗಿದ್ದು ಕೊನೆಗೆ ಸರ್ದಾರ್ ಪಟೇಲರು ಸಂಧಾಯ ಮಾಡಲು ಒಪ್ಪಿ ಹಿಂದೂ ಮುಸ್ಲಿಂ ಮುಖಂಡರು ಶಾಂತಿಪಾಲನೆ ಒಪ್ಪಂದಕ್ಕೆ ಸ್ವತಂತ್ರ ಭಾರತದ ಪ್ರಧಾನಮಂತ್ರಿಯಾಗಿ ನೆಹರೂ ಪ್ರಥಮ ಗೌರ್ನರ್ ಜನರಲ್ ಆಗಿ ಮೌಂಟ್ ಬ್ಯಾಟನ್ ಮತ್ತು ಪಾಕಿಸ್ತಾನದ ಪ್ರಧಾನಿಯಾಗಿ ಲಿಯಾಖತ್ ಆಲಿಖಾನ್ ಗವರ್ನರ್ ಜನರಲ್ ಆಗಿ ಜಿನ್ನಾ ಅಧಿಕಾರ ವಹಿಸಿಕೊಂಡರು.

ರ್‍ಯಾಡ್ ಕ್ಲಿಫ್ ಗಡಿ ವರದಿ ಪ್ರಕಟವಾದಾಗ ಅವರೇ ತಿಳಿಸುವಂತೆ ಪಂಜಾಬ್‌ನ್ನು ವಿಭಜಿಸುವಾಗ ಎದುರಾದ ಬಹುದೊಡ್ಡ ಸಮಸ್ಯೆ ಎಂದರೆ ಜನಾಂಗವನ್ನು ವಿಭಜಿಸುವುದು. ಸಿಖ್ ಜನಾಂಗದ ಹಣ, ಕೌಶಲ ಮತ್ತು ಬೆವರಿನಿಂದ ಐದು ನದಿಗಳ ನೀರನ್ನು ಬಸಿ ಬೆಳೆಸಿದ ನೀರಾವರಿ ಕಾಲುವೆ ವ್ಯವಸ್ಥೆಯನ್ನು ವಿಭಜಿಸುವುದಾಗಿತ್ತು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಪಂಜಾಬ್‌ನ ಬಹುಪ್ರಮುಖ ಕೇಂದ್ರಸ್ಥಳವಾಗಿದ್ದ ಲಾಹೋರ್ ನಗರವನ್ನು ಪಾಕಿಸ್ತಾನಕ್ಕೆ ನೀಡಿದ್ದು ಮುಸ್ಲಿಮೇತರರಿಗೆ ಬಲವಾದ ಹೊಡೆತ ಉಂಟಾಯಿತು. ಪಂಜಾಬ್‌ನ ವಿಭಜನೆಯಿಂದ ಪೂರ್ವ ಪಂಜಾಬ್ ಐದು ನದಿಗಳಲ್ಲಿ ಮೂರು ನದಿಗಳ ಮೇಲೂ ಹತೋಟಿ ಪಡೆಯಿತು. ಪಂಜಾಬ್‌ನ ಮುಸ್ಲಿಮೇತರರು ಅದರಲ್ಲೂ ಸಿಖ್ಖರು ಈ ತೀರ್ಪಿನಿಂದ ಬಹಳ ಕಷ್ಟಕ್ಕೊಳಗಾದರು. ಸಿಖ್ಖರು ಗಡಿ ನಿರ್ಣಯ, ಮಾಡು ನಾಲೆಗಳು, ನೀರಾವರಿ ಮುಂತಾದವುಗಳನ್ನು ಆಧಾರವಾಗಿಟ್ಟುಕೊಳ್ಳಬೇಕೆಂದು ಆಯೋಗದ ಮುಂದೆ ಬೇಡಿಕೆ ಸಲ್ಲಿಸಿದರೂ ರ್‍ಯಾಡ್ ಕ್ಲಿಫ್ ತನ್ನ ತೀರ್ಪಿನಲ್ಲಿ ಯಾವ ಬೇಡಿಕೆಯನ್ನು ಈಡೇರಿಸಲಿಲ್ಲ. ಇದರಿಂದ ಸಿಖ್ಖರ ಅನೇಕ ಪ್ರಮುಖ ಪುಣ್ಯಕ್ಷೇತ್ರಗಳು ಹಾಗೂ ಅನುಕೂಲ ಪ್ರದೇಶಗಳು ಕೈಬಿಟ್ಟು ಹೋದವು.

## 26.3 ಭಾರತದ ವಿಭಜನೆ

ಮೌಂಟ್ ಬ್ಯಾಟನ್ ಭಾರತಕ್ಕೆ ವೈಸರಾಯ್ ಆಗಿ ಬರುವ ವೇಳೆಗೆ ಕಾಂಗ್ರೆಸ್ ನಾಯಕರು ಭಾರತದ ಅಖಂಡತೆಯನ್ನು ಉಳಿಸಿಕೊಳ್ಳಬೇಕೆಂಬ ತಮ್ಮ ವಾದವನ್ನು ಬಿಟ್ಟಿದ್ದರು. ಆದ್ದರಿಂದ ಭಾರತದ ವಿಭಜನೆಗೆ ಅವರನ್ನು ಒಪ್ಪಿಸಲು ಮೌಂಟ್ ಬ್ಯಾಟನ್‌ರಿಗೆ ಏನೂ ಕಷ್ಟವಾಗಲಿಲ್ಲ. 1947 ರ ಮಾರ್ಚ್ 8 ರಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ಕೈಗೊಂಡ ನಿರ್ಣಯದಲ್ಲಿ ಎಟ್ಲಿಯವರು ಘೋಷಣೆಗೆ ಏನೂ ಪ್ರತಿಕ್ರಿಯೆ ಇರಲಿಲ್ಲ; ಕೆಲವು ಪ್ರದೇಶಗಳಲ್ಲಿ ಅಧಿಕಾರವನ್ನು ಹಾಲಿ ಪ್ರಾಂತೀಯ ಸರ್ಕಾರಗಳಿಗೆ ಹಸ್ತಾಂತರಿಸಬಹುದೆಂದು ಎಟ್ಲಿ 1947 ರ ಫೆಬ್ರವರಿ 2 ರಂದೇ ಘೋಷಿಸಿದ್ದರು. ಅದರ ಬದಲಿಗೆ ಕಾರ್ಯಕಾರಿ ಸಮಿತಿಯು ಸಂವಿಧಾನ ಸಭೆಯು ರೂಪಿಸುವ ಸಂವಿಧಾನವು ಅದನ್ನು ಒಪ್ಪುವಂತಹ ಪ್ರದೇಶಗಳಿಗೆ ಮಾತ್ರ ಅನ್ವಯಿಸುವುದು ಎಂದು ಹೇಳಿತು. ವಿಭಜನೆಯ ತತ್ವವನ್ನು ಕಾಂಗ್ರೆಸ್ ಒಪ್ಪಿಕೊಂಡಿದೆ ಎಂಬುದು ಇದರಿಂದ ಸ್ಪಷ್ಟವಿತ್ತು.

ಚಲೇ ಜಾವ್ ಚಳುವಳಿ ವಿಫಲವಾದ ಬಳಿಕ ಕಾಂಗ್ರೆಸ್ ಒಂದು ಕ್ರಾಂತಿಕಾರಿ ಸಂಘಟನೆಯಾಗಿ ಉಳಿದಿರಲಿಲ್ಲ. 1945 ರಲ್ಲಿ ಸೆರೆಮನೆಯಿಂದ ಬಿಡುಗಡೆಯಾದ ಬಳಿಕ ಕಾಂಗ್ರೆಸ್ ನಾಯಕರು ಅಧಿಕಾರವನ್ನು ಶಾಂತವಾಗಿ ಕೂಡಲೇ ಹಸ್ತಾಂತರ ಮಾಡಿಸಿಕೊಳ್ಳಲು ಕಾತುರರಾದರು. ಸಂಘರ್ಷ ನಡೆಸುವುದು ಅವರ ಧೋರಣೆಯಾಗಿರಲಿಲ್ಲ. 1945 ರಲ್ಲಿ ವೇವೆಲ್ ಯೋಜನೆಯು ವಿಫಲವಾದ ಬಳಿಕ ಕಾಂಗ್ರೆಸು ನೇರ ಕ್ರಮ ಕೈಗೊಳ್ಳುವ ಎಲ್ಲ ಯೋಜನೆಗಳನ್ನು ಕೈಬಿಟ್ಟಿತು. ನಾಯಕರು ಅಧಿಕಾರವನ್ನು ಶಾಂತವಾಗಿ ಕೂಡಲೇ ಹಸ್ತಾಂತರ ಮಾಡಿಸಿಕೊಳ್ಳಲು ಕಾತರರಾದರು. ಸಂಘರ್ಷ ನಡೆಸುವುದು ಅವರ ಧೋರಣೆಯಾಗಿರಲಿಲ್ಲ. 1945ರಲ್ಲಿ ವೇವೆಲ್ ಯೋಜನೆಯು ವಿಫಲವಾದ ಬಳಿದ ಕಾಂಗ್ರೆಸು ನೇರ ಕ್ರಮ ಕೈಗೊಳ್ಳುವ ಎಲ್ಲ ಯೋಜನೆಗಳನ್ನು ಕೈಬಿಟ್ಟಿತು.

ಗಾಂಧೀಜೀಯವರ ಕಾರ್ಯದರ್ಶಿ ಹಾಗೂ ಅವರ ಜೀವರ ಚರಿತಕಾರ ಬಾಬೂ ಪ್ಯಾರೇಲಾಲ್ ಅವರು ಕಾಂಗ್ರೆಸ್ ನಾಯಕರು ವಿಭಜನೆಯನ್ನು ಯಾಕೆ ಒಪ್ಪಿದರೆಂಬುದಕ್ಕೆ ಹೀಗೆ ವಿವರಣೆ ನೀಡುತ್ತಾರೆ. " ಅವರು (ಕಾಂಗ್ರೆಸ್ ನಾಯಕರು) ತಮ್ಮ ಯೌವನವನ್ನು ದಾಟಿ ಜೀವನದ ಇಳಿವಯಸ್ಸಿನಲ್ಲಿದ್ದರು. ತಾವು ಪಡೆಯಬೇಕೆಂದಿದ್ದ ಸ್ವರ್ಗ ಅವಕ ಕಣ್ಣ ಮುಂದೆಯೇ ಇತ್ತು. ಈಗ ಬಿಟ್ಟರೆ ಕೈಗೆ ಬಂದ ಸ್ವಾತಂತ್ರ್ಯವು ಜಾರಿ ಹೋಗಬಹುದೆಂದು ಅವರು ಭಾವಿಸಿದರು. ಅವರು ಯೌವನದಲ್ಲಿದ್ದಾಗಲೇ ಈ ಮಹಾ ನಿರ್ಧಾರಕೈಗೊಳ್ಳುವ ಕ್ಷಣ ಬಂದಿದ್ದರೆ ಅವರು ವಿಭಜನೆಯನ್ನು ತಿರಸ್ಕರಿಸುತ್ತಿದ್ದರೇನೊ.

ಮುಸ್ಲಿಮ್ ಲೀಗ್ ಮಧ್ಯಾವಧಿ ಸರ್ಕಾರದೊಂದಿಗಿದ್ದುಕೊಂಡು ಎಸಗುತ್ತಿದ್ದ ಕುತಂತ್ರಗಳಿಂದ ವಲ್ಲಭಭಾಯಿ ಪಟೇಲರಿಗೆ ರೋಸಿ ಹೋಗಿತ್ತು. ಲೀಗಿನೊಂದಿಗೆ ಯಾವ ರೀತಿಯಲ್ಲಿ ಕೆಲಸ ಮಾಡಿದರೂ ಅದರ ಹಿಂದೆ ಕೊನೆಯಿಲ್ಲದ ಕುಯುಕ್ತಿಗಳು ಮತ್ತು ತಕರಾರುಗಳೇ ಕಾಣಿಸುತ್ತಿದ್ದವು. ಆದ್ದರಿಂದ ಪ್ರತಿದಿನವೂ ಈ ತಕರಾರುಗಳನ್ನು ಎದುರಿಸುವ ಬದಲಿಗೆ ಬೇರ್ಪಡುವುದೇ ಒಳ್ಳೆಯದೆಂದು ಪಟೇಲ್ ಭಾವಿಸಿದರು. ಜವಾಹರಲಾಲ್ ನೆಹರೂ ಅವರಿಗೂ ಮುಸ್ಲಿಂ ಲೀಗಿನೊಂದಿಗೆ ಪ್ರತಿಯೊಂದು ವ್ಯವಸ್ಥೆಯಲ್ಲೂ ಜೊತೆಗೂಡಿ ಕೆಲಸ ಮಾಡುವ ಆಸೆ ಕಡಿದು ಹೋಗಿತ್ತು. ಲೀಗ್ ಯಾವ ವಿಷಯದಲ್ಲೂ ಕಾಂಗ್ರೆಸ್‌ನೊಂದಿಗೆ ಸಹಮತ ತೋರಲಿಲ್ಲ. ಹೀಗೆ ಹತಾಶರಾದ ಅವರು ವಿಭಜನೆಯಲ್ಲದೆ ಅನ್ಯ ಮಾರ್ಗವಿಲ್ಲವೆಂದು ಭಾವಿಸಿದರು. ರಾಜೇಂದ್ರ ಪ್ರಸಾದರೂ ಇದೇ ರೀತಿ ಅಭಿಪ್ರಾಯ ಪಟ್ಟರು.

"ಜವಾಹರಲಾಲ್ ನೆಹರೂ ಮೊದಲು ವಿಭಜನೆಯನ್ನು ಉಗ್ರವಾಗಿ ವಿರೋಧಿಸಿದರು. ಆದರೆ ನಿಧಾನವಾಗಿ ವಿಭಜನೆಯ ಯೋಜನೆಗೆ ಹೊಂದಿಕೊಂಡರು. ಅವರು ವಲ್ಲಭಭಾಯಿ ಪಟೇಲರಿಂದ ಮತ್ತು ಲಾರ್ಡ್ ಹಾಗೂ ಲೇಡಿ ಮೌಂಟ್‌ಬ್ಯಾಟನ್‌ರಿಂದ ಪ್ರಭಾವಿತರಾಗಿದ್ದರೆಂದು ಆಜಾದ್ ಹೇಳುತ್ತಾರೆ". (ನೋಡಿ ರಾಜೇಂದ್ರ ಪ್ರಸಾದ್ , ಎಟ್ ದಿ ಫೀಟ್ ಆಫ್ ಮಹಾತ್ಮಾ ಗಾಂಧಿ. ಪುಟ 183-84) . ಆದರೆ ಪಂಡಿತ್ ನೆಹರೂ 1960ರಲ್ಲಿ ಮೊಸ್ಲೇ ಅವರೊಂದಿಗೆ ಮಾತಾಡುತ್ತಿದ್ದಾಗ, "ಸತ್ಯ ಹೇಳಬೇಕೆದಂರೆ ನಾವೆಲ್ಲ ಬಳಲಿ ಹೋಗಿದ್ದೆವು. ನಮಗೆ ಸಾಕಷ್ಟು ವಯಸ್ಸೂ ಆಗಿತ್ತು. ಪುನಃ ಸೆರೆಮನೆಗೆ ಹೋಗುವ ಶಕ್ತಿ ನಮ್ಮಲ್ಲಿ ಯಾರಿಗೂ ಇರಲಿಲ್ಲ. ನಾನು ಬಯಸಿದ ಅಖಂಡ ಭಾರತಕ್ಕೋಸ್ಕರ ಪಟ್ಟು ಹಿಡಿಯುತ್ತಿದ್ದರೆ ನಾನು ಸೆರೆಮನೆಗೆ ಹೋಗಲೇ ಬೇಕಾಗಿ ಬರುತ್ತಿತ್ತೆಂಬುದು ಖಂಡಿತ, ಪಂಜಾಬಿನಲ್ಲಿ ಹರಡಿದ್ದ ಅಗ್ನಿಜ್ವಾಲೆಯನ್ನು ನಾವು ನೋಡಿದೆವು. ಅಂತೆಯೇ ನಿತ್ಯವೂ ನಿರ್ದಯ ಕೊಲೆಗಳು ನಡೆಯುತ್ತಿದ್ದುದನ್ನು ಕೇಳಿದೆವು. ವಿಭಜನೆಯ ಮಾರ್ಗವೊಂದೇ ಇದಕ್ಕೆ ಪರಿಹಾರವಾಗಿತ್ತು. ನಾವು ಅದನ್ನು ಅನಿವಾರ್ಯವಾಗಿ ಒಪ್ಪಿದೆವು", ಎಂದು ನುಡಿದಿದ್ದರು. ಈ ಮಾತುಗಳು ಬಹುಮಟ್ಟಿಗೆ ಸತ್ಯ.

ಅಖಿಲ ಭಾರತ ಕಾಂಗ್ರೆಸ್ ಸಮಿತಿಯು "(ಎ.ಐ.ಸಿ.ಸಿ.) ಈ ಕುರಿತು ಸಮಾಲೋಚನೆ ನಡೆಸಲು ಜೂನ್ 14-15ರಂದು ದಿಲ್ಲಿಯಲ್ಲಿ ಸಭೆ ಸೇರಿತು. ಗೋವಿಂದವಲ್ಲಭ ಪಂತರು ಜೂನ್ ಮೂರರ ಯೋಜನೆಯನ್ನು ಅಂಗೀಕರಿಸುವ ನಿರ್ಣಯವನ್ನು ಮಂಡಿಸಿದರು. ದೇಶಕ್ಕೆ ಸ್ವಾತಂತ್ರ್ಯವನ್ನು ಸಾಧಿಸಲು ಈ ಯೋಜನೆಯೊಂದೇ ದಾರಿಯಾಗಿದೆ ಎಂದು ಅವರು ಹೇಳಿದರು. ಜಗತ್ ನಾರಾಯಣ ಲಾಲ್ ಅವರು, ಅಖಿಲ ಭಾರತ ಕಾಂಗ್ರೆಸ್ ಸಮಿತಿಯು ವಿಭಜನೆಯ ಯಾವುದೇ ಯೋಜನೆಯನ್ನು ವಿರೋಧಿಸುವುದೆಂದು 1942ರಲ್ಲಿಯೇ ಘೋಷಣೆ ಮಾಡಿರುವುದನ್ನು ಸಭೆಯ ಗಮನಕ್ಕೆ ತಂದರು ಅಂದಿನ ನಿರ್ಣಯದಿಂದ ಈಗ ಹಿಂದೆ ಸರಿಯಲು ಸಾಧ್ಯವಿಲ್ಲವೆಂದು ಸಾರಿದರು. ಕಾಂಗ್ರೆಸ್ಸಿನಲ್ಲಿದ್ದ ಸಮಾಜವಾದಿಗಳೂ ಅದುವರೆಗೆ ವಿಭಜನೆಯನ್ನು ಉಗ್ರವಾಗಿ ವಿರೋಧಿಸಿದ್ದರು. ಆದರೆ ಅಂದಿನ ಸಭೆಯಲ್ಲಿ ಅವರು ಚಕಾರ ಎತ್ತಲಿಲ್ಲ. ಉನ್ನತ ನಾಯಕರ ಪೈಕಿ ಬಾಬೂ ಪುರುಷೋತ್ತಮದಾಸ ಟಂಡನ್ ಮಾತ್ರ ಕೊನೆಯವರೆಗೂ ನಿರ್ಣಯವನ್ನು ದೃಢವಾಗಿ ವಿರೋಧಿಸಿದನು. ಟಂಡನ್ ಅವರ ಭಾಷಣಕ್ಕೆ ಭಾರೀ ಚಪ್ಪಾಳೆಗಳ ಸುರಿಮಳೆಯಾಯಿತು. ಕಾಂಗ್ರೆಸ್ ನಾಯಕರಿಗೆ ಇದರಿಂದ ದಿಗಿಲಾಯಿತು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಗಾಂಧೀಜಿಯವರು ಮಧ್ಯೆ ಪ್ರವೇಶಿಸಿದರು. ಆ ಪರಿಸ್ಥಿತಿಯನ್ನು ಆಚಾರ್ಯ ಕೃಪಾಲಾನಿ ಹೀಗೆ ವಿವರಿಸಿದ್ದಾರೆ : "ವಿಭಜನೆಯ ನಿರ್ಣಯಕ್ಕೆ ಸಭೆಯಲ್ಲಿ ಪುರುಷೋತ್ತಮದಾಸ ಟಂಡನ್ ಮತ್ತು ಅವರ ಅನುಯಾಯಿಗಳು ಪ್ರಭಲ ವಿರೋಧವು ಪ್ರಕಟವಾಯಿತು. ಆದರೆ ಸ್ವತಃ ಗಾಂಧೀಜಿಯವರು ಕಾರ್ಯಕಾರಿ ಸಮಿತಿಯ ನಿರ್ಣಯದಿಂದ ಕೊಂಚವೂ ಒಳಿತಾಗದೆಂಬ ಅಭಿಪ್ರಾಯವುಳ್ಳವರಾಗಿದ್ದರೂ ಅದನ್ನು ಅಂಗೀಕರಿಸುವಂತೆ ಸದಸ್ಯರಿಗೆ ಸಹಲೆಯಿತ್ತರು. ತಮ್ಮ ನಾಯಕರಲ್ಲಿ ವಿಶ್ವಾಸವಿರುಸುವಂತೆ ಅವರು ಕೇಳಿಕೊಂಡರು. ಗಾಂದೀಜಿಯವರು ಇಂಥ ಸಲಹೆ ನೀಡದಿರುತ್ತಿದ್ದರೆ ನಿರ್ಣಯವು ಅಂಗೀಕೃತವಾಗುತ್ತಿರಲಿಲ್ಲ". (ನೋಡಿ ಜೆ.ಬಿ. ಕೃಪಾಲಾನಿ - ಗಾಂಧಿ, ಹಿಸ್ ಲೈಫ್ ಎಂಡ್ ಥಾಟ್, ಪುಟ 288), 1960ರಲ್ಲಿ ಪಂಡಿತ್ ನೆಹರೂ ಮೋಸ್ಲೇಗೆ ಹೀಗೆ ಹೇಳಿದರು : "ಆದರೆ ಗಾಂಧೀಜೀ ಹಾಗೆ ಹೇಳದಿರುತ್ತಿದ್ದರೆ ನಾವು ಹೋರಾಡುತ್ತಾ ಇರುತ್ತಿದ್ದವು. ಕಾಯುತ್ತಿದ್ದೆವು, ಆದರೆ ನಾವು ಒಪ್ಪಿದೆವು. ತಾತ್ಕಾಲಿಕವಾಗಿ ವಿಭಜನೆಯಾಗಬಹುದು. ಆದರೆ ಪಾಕಿಸ್ತಾನವು ಮರಳಿ ನಮ್ಮೊಂದಿಗೆ ಬಂದೆ ಬರುತ್ತದೆ ಎಂದು ನಾವು ಯೋಚಿಸಿದೆವು. ಇಷ್ಟೊಂದು ಕೊಲೆಗಳಾಗಬಹುದು ಮತ್ತು ಕಾಶ್ಮೀರಕ್ಕೆ ಸಂಬಂಧಿಸಿದ ಬಿಕ್ಕಟ್ಟು ನಮ್ಮೊಳಗಿನ ಸಂಬಂಧವನ್ನು ಕೆಡಿಸಬಹುದು ಎಂದು ನಾವು ಯಾರೂ ಯೋಚಿಸಲಿಲ್ಲ".

(ನೋಡಿ: ಲಿಯೊನಾರ್ಡ್ ಮೋಸ್ಲೇ, ದ ಲಾಸ್ಟ್, ದ ಲಾಸ್ಟ್ ಡೇಸಂ ಆಫ್ ದಿ ಬ್ರಿಟಿಷ್ ರಾಜ್, ಪುಟ 284)

ನಿಜವಾದಿ ಗಾಂಧೀಜಿಯವರು ಹೀಗೆ ಸಾರಿದ್ದರು : ಕಾಂಗ್ರೆಸ್, ಭಾರತ ವಿಭಜನೆ ಸಮ್ಮತಿಸುವುದಾದರೆ ಅದು ನನ್ನ ಹೆಣ ಬಿದ್ದ ಮೇಲೆ ಮಾತ್ರ ಸಾಧ್ಯಸ ಎಲ್ಲಿಯವರೆಗೆ ನಾನು ಜೀವಂತವಾಗಿರುವೆನೊ ಅಲ್ಲಿಯವರೆಗೂ ಭಾರತದ ವಿಭಜನೆಗೆ ಒಪ್ಪಲಾರೆ". ಆದರೆ ಅವರು ಮೌಂಟ್‌ಬ್ಯಾಟನರೊಂದಿಗೆ ಮಾತನಾಡಿದ ಬಳಿಕ ಮನಸ್ಸು ಬದಲಾಯಿಸಿದರು ಮತ್ತು ವಿಭಜನೆ ಅನಿವಾರ್ಯ ಎಂಬ ಅಭಿಪ್ರಾಯಕ್ಕೆ ಅವರು ಬಂದರು. ಕೂಡಲೇ ಎಲ್ಲರೂ ಶರಣಾದರು. ಯಾವೊಬ್ಬನೂ ತಮ್ಮ ಕೊನೆಯ ಉಸಿರು ಇರುವ ತನಕ ಹೋರಾಡುವ ಮನಸ್ಸು ಮಾಡಲಿಲ್ಲ. ಆಜಾದ್ ಒಬ್ಬರು ಮಾತ್ರ ಎರಡು ಮೂರು ವರ್ಷ ಕಾಯಲು ಸಿದ್ಧರಿದ್ದರು. ಅಷ್ಟರೊಳಗೆ ಮುಸ್ಲಿಂ ಲೀಗಿಗೆ ಒಪ್ಪಂದಕ್ಕೆ ಬರುವುದು ಅನಿವಾರ್ಯವಾದೀತೆಂದು ಅವರು ಆಶಿಸಿದ್ದರು. ಆದರೆ ಅವರನ್ನು ಯಾರೂ ಬೆಂಬಲಿಸಲಿಲ್ಲ. ಸಂಘರ್ಷ ರಹಿತ ನೀತಿಯ ಕಾಂಗ್ರೆಸಿನ ಅಲಿಖಿತ ಧ್ಯೇಯವಾಗಿತ್ತು.

ಅಖಿಲ ಭಾರತ ಕಾಂಗ್ರೆಸ್ ಸಮಿತಿಯು 1947 ಜೂನ್ 15ರಂದು ಸಭೆ ಸೇರಿ ನಾಯಕರ ನಿರ್ಣಯವನ್ನು ಮತಗಣನೆಗೆ ಹಾಕಿ ವಿಧ್ಯುಕ್ತವಾಗಿ ಅದನ್ನು ದೃಢೀಕರಿಸಿತು. 157 ಮತಗಳು ನಿರ್ಣಯದ ಪರವಾಗಿಯೂ 29 ಮತಗಳು ವಿರೋಧವಾಗಿಯೂ ವಿಭಜನೆಯ ವಿರುದ್ಧ ಟೀಕೆಯನ್ನು ದುರ್ಬಲಗೊಳಿಸಲು ಗಾಂಧೀಜಿಯವರ ವೈಯಕ್ತಿಕ ಹಸ್ತಕ್ಷೇಪ ಅವಶ್ಯವಾಗಿತ್ತು. ವಿಭಜನೆಯನ್ನು ಒಪ್ಪಲು ಶಿಫಾರಸು ಮಾಡುತ್ತಾ ಗಾಂಧೀಜಿಯವರು, ಕೆಲವೊಮ್ಮೆ ತಪ್ಪುಗಳಿಂದಲೂ ಒಳ್ಳೆಯದಾಗುತ್ತದೆ. ಶ್ರೀರಾಮಚಂದ್ರ ತನ್ನ ತಂದೆ ಮಾಡಿದ ತಪ್ಪಿಗಾಗಿ ವನವಾಸಕ್ಕೆ ಹೋದ. ಅವನ ವನವಾಸದಿಂದಾಗಿಯೇ ಕೊನೆಗೆ ರಾಕ್ಷಸನಾದ ರಾವಣನ ವಧೆಯಾಯಿತು",ಎಂದರು. 1947ರ ಅನಂತರ ಭಾರತ ಮತ್ತು ಪಾಕಿಸ್ತಾನದ ನಡುವೆ ಬೆಳೆದು ಬಂದ ರಾಜಕೀಯ ಸಂಬಂಧವನ್ನು ನೋಡುವಾಗ ಮಹಾತ್ಮರ ಆಶೆ ಕೇವಲ ಒಂದು ಸಾತ್ವಿಕ ಬಯಕೆಗಾಗಿ ಉಳಿಯತು. ಲೀಗಿನ ಭಯೋತ್ಪಾದಕ ತಂತ್ರ. ಬ್ರಿಟಿಷ್ ಸಾಮ್ರಾಜ್ಯವಾದಿಗಳ ಕುತಂತ್ರ ಮತ್ತು ಕಾಂಗ್ರೆಸ್ಸಿನ ಸಂತ್ರಪ್ತ ವೃದ್ಧರ ಅನ್ಯಥಾ ಶರಣಾಗತಿ- ಇವು ಮುಪ್ಪುರಿಗೊಂಡು ನಮ್ಮ ಮಾತೃಭೂಮಿಯ ವಿಭಜನೆಯಾಯಿತು.

## 26.4 ಘಟಕದ ಸಾರಾಂಶ

ಈ ಘಟಕದ ಅಧ್ಯಯನದ ನಂತರ ನಾವು

* ಭಾರತದ ವಿಭಜನೆಯು ನಿಶ್ಚಿತವೆಂದೂ
* ಭಾರತದ ವಿಭಜನೆಯು ಭಾರತ ಮತ್ತು ಪಾಕಿಸ್ತಾನವೆಂದೂ ವಿಭಜನೆಯಾಗಬೇಕೆಂದು
* ಈ ಎರಡೂ ರಾಷ್ಟ್ರಗಳು ವಿಭಜನೆಯಾಗಲು ಒಂದು ಗಡಿರೇಖೆಯನ್ನು ನಿಗಧಿ ಮಾಡಬೇಕೆಂದು ಅದಕ್ಕಾಗಿ ರ್‍ಯಾಡ್ ಕ್ಲಿಪ್ ಆಯೋಗವನ್ನು ರಚಿಸಿ ಅದರ ನಿರ್ಧಾರ ಮತ್ತು ವರದಿಯ ಪ್ರಕಾರ ಗಡಿರೇಖೆಯನ್ನು ನಿಗಧಿ ಮಾಡಿ ಭಾರತದ ವಿಭಜನೆ ಮಾಡಿದ್ದು
* ಗಾಂಧೀಜಿಯವರ ಶಾಂತಿ ಕಾಪಾಡಲು ಕರೆ ಮುಂತಾದ ಎಲ್ಲಾ ವಿಷಯಗಳನ್ನು ಈ ಘಟಕದ ಅಧ್ಯಯನದಲ್ಲಿ ತಿಳಿದುಕೊಂಡೆವು.

## 26.5 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಭಾರತದ ವಿಭಜನೆಯ ಅನಿವಾರ್ಯತೆ ಮತ್ತು ಅದರ ಅನುಷ್ಠಾನವನ್ನು ವಿವರಿಸಿ.
2. ಭಾರತದ ವಿಭಜನೆಯಲ್ಲಿ ರ್‍ಯಾಡ್ ಕ್ಲಿಪ್ ಆಯೋಗದ ಪಾತ್ರ.

## 26.6 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


1. Sumit Sarkar : Modern India
2. Prasad .L.P. : History of Indian National Movement
3. ನರೇಂದ್ರ ಪ್ರಸಾದ್ ಮತ್ತು ಇತರರು : ಭಾರತ ಸ್ವಾತಂತ್ರ್ಯ ಚಳುವಳಿ

## ಘಟಕ - 27 1947 ರ ಭಾರತ ಸ್ವಾತಂತ್ರ್ಯ ಕಾಯ್ದೆ ಮತ್ತು ಭಾರತದ ಸ್ವಾತಂತ್ರ್ಯ

*ವಿಷಯಾನುಕ್ರಮಣಿಕೆ*

## 27.0 ಉದ್ದೇಶಗಳು

ಈ ಘಟಕದ ಅಧ್ಯಯನದಲ್ಲಿ ನಾವು

* ಭಾರತದ ಸ್ವಾತಂತ್ರ್ಯ ಕಾಯ್ದೆಯ (1947) ಬಗ್ಗೆ ತಿಳಿಯುವೆವು.
* ಸ್ವಾತಂತ್ರ್ಯ ಕಾಯ್ದೆಯ ಪ್ರಮುಖ ಅಂಶಗಳನ್ನು ತಿಳಿಯುವೆವು.
* ಸ್ವಾತಂತ್ರ್ಯಕ್ಕಿಂತ ಮೊದಲು ಭಾರತದ ವಿಭಜನೆಯು ನಿಶ್ಚಿತವಾಗಿ ಗಡಿರೇಖೆಯನ್ನು ಗುರುತಿಸಲು ರ್ಯಾಡ್ ಕ್ಲಿಪ್ ಆಯೋಗ ರಚಿಸಿದರು. ಅದರ ವರದಿಯನ್ನು ತಿಳಿಯುವೆವು.
* ಭಾರತ ಸ್ವಾತಂತ್ರ್ಯ ಕಾಯ್ದೆ ಹಾಗೂ ರ್ಯಾಡ್ ಕ್ಲಿಪ್‌ರ ವರದಿಯನ್ನನುಸರಿಸಿ ಭಾರತದ ವಿಭಜನೆ ಮತ್ತು ಅದರ ಪರಿಣಾಮಗಳನ್ನು ತಿಳಿಯುವೆವು.
* ಇವುಗಳ ಮಧ್ಯೆ ಭಾರತ ಆಗಸ್ಟ್ 15, 1947 ರಂದು ಸ್ವಾತಂತ್ರ್ಯವನ್ನು ಹೊಂದಿದ ಬಗ್ಗೆಯೂ ಸಹ ತಿಳಿದುಕೊಳ್ಳುವೆವು.

## 27.1 ಪೀಠಿಕೆ

ಭಾರತ ಸ್ವಾತಂತ್ರ್ಯ ಚಳುವಳಿಯು ತನ್ನ ತೀವ್ರತೆಯನ್ನು ಹೆಚ್ಚಿಸಿಕೊಂಡಾಗ ಬ್ರಿಟೀಷರು ಅದರ ಬಿಸಿಯನ್ನು ತಾಳಲಾರದೇ ಭಾರತಕ್ಕೆ ಸ್ವಾತಂತ್ರ್ಯ ನೀಡಲು ಮುಂದಾಗಿ ಬ್ರೀಟಿಷರು ಸರ್ಕಾರದ ವತಿಯಿಂದ 1947 ರ ಸ್ವಾತಂತ್ರ್ಯ ಕಾಯ್ದೆಯನ್ನು ಹೊರಡಿಸಿದರು. ಇದರ ಪ್ರಕಾರ ಭಾರತ ಸ್ವಾತಂತ್ರ್ಯ ಪಡೆಯುವುದೆಂದು ಘೋಷಿಸಿತು. ಆದರೆ ಮುಸ್ಲಿಂ ಲೀಗ್ ಮತ್ತು ಜಿನ್ನಾರವರ ಒತ್ತಾಯದಿಂದ ಭಾರತದ ವಿಭಜನೆಯಾಗಬೇಕೆಂದು ಪಟ್ಟು ಹಿಡಿದು ಕುಳಿತಾಗ ಬ್ರಿಟೀಷ್ ಸರ್ಕಾರವು ರ್ಯಾಡ್ ಕ್ಲಿಪ್ ಆಯೋಗವನ್ನು ರಚಿಸಿ, ಭಾರತ ಮತ್ತು ಪಾಕಿಸ್ತಾನಗಳ ಗಡಿ ರೇಖೆಯನ್ನು ಗುರುತಿಸಿ ವರದಿ ಸಲ್ಲಿಸಲು ಸೂಚಿಸಿತು. ಈ ಆಯೋಗ ತನ್ನ ವರದಿಯನ್ನು ಸಲ್ಲಿಸಿತು. ಇದರ ಪ್ರಕಾರ ಭಾರತ ವಿಭಜನೆಯಾಯಿತು. ಭಾರತ ಮತ್ತು ಪಾಕಿಸ್ತಾನಗಳೆರಡೂ ಸ್ವತಂತ್ರ ರಾಷ್ಟ್ರಗಳಾದ ವಿಷಯಗಳೆಲ್ಲವನ್ನು ಈ ಘಟಕದಲ್ಲಿ ವಿಸ್ತಾರವಾಗಿ ಅಧ್ಯಯನ ಮಾಡುವ ಪ್ರಯತ್ನ ಮಾಡಲಾಗಿದೆ.

## 27.2 ಭಾರತೀಯ ಸ್ವಾತಂತ್ರ್ಯ ಕಾಯದೆ, 1947

1947ರಲ್ಲಿ ಬ್ರಿಟಿಷ್ ಸಂಸತ್ತು ಭಾರತೀಯ ಸ್ವಾತಂತ್ರ್ಯ ಕಾಯದೆಯನ್ನು ಅಂಗೀಕರಿಸಿತು. ಈ ಕಾಯದೆಯ ಅಧಿಕಾರ ಹಸ್ತಾಂತರಕ್ಕೆ ಕಾನೂನುಬದ್ಧವಾದ ರೀತಿಯಲ್ಲಿ ದಾರಿ ಮಾಡಿಕೊಟ್ಟಿತು.

ಈ ಕಾಯದೆಯು 1947 ಆಗಸ್ಟ್ 15ರಂದು ಅನುಕ್ರಮವಾಗಿ ಭಾರತ ಮತ್ತು ಪಾಕಿಸ್ತಾನ ಎಂಬ ಹೆಸರಿನ ಎರಡು ಪ್ರತ್ಯೇಕ ಸ್ವಯಂ ಆಡಳಿತದ ಸ್ಥಾನಮಾನದ ರಾಜ್ಯಗಳ (ಡೋಮಿನಿಯ್ ಸ್ಟೇಟ್ಸ್) ಸ್ಥಾಪನೆಗೆ ಅವಕಾಶ ಮಾಡಿಕೊಟ್ಟಿತು ಪಶ್ಚಿಮ ಪಂಜಾಬ್, ಬಲೂಚಿಸ್ತಾನ, ವಾಯುವ್ಯ ಗಡಿನಾಡು ಪ್ರಾಂತ, ಸಿಂಧ್ ಮತ್ತು ಪೂರ್ವ ಬಂಗಾಲ - ಈ ಪ್ರದೇಶಗಳು ಪಾಕಿಸ್ತಾನಕ್ಕೆ ಸೇರುವುವು. ಬ್ರಿಟಿಷ್ ಭಾರತದ ಇನ್ನುಳಿದ ಪ್ರದೇಶಗಳು ಭಾರತಕ್ಕೆ ಸೇರುವವು. ಭಾರತದ ಅರಸೊತ್ತಿಗೆಯ ರಾಜ್ಯಗಳು ಭಾರತ ಅಥವಾ ಪಾಕಿಸ್ತಾನದೊಡನೆ ವಿಲೀನಗೊಳ್ಳಬಹುದಾಗಿತ್ತು.

ಭಾರತದ ಮತ್ತು ಪಾಕಿಸ್ತಾನ ಇವೆರಡೂ ರಾಜ್ಯಗಳಲ್ಲಿ ಬ್ರಿಟಿಷ್ ದೊರೆಯಿಂದ ನೇಮಕಗೊಳ್ಳುವ ಒಬ್ಬ ಗವರ್ನರ್ ಜನರಲ್ ಇರುವರು. ಆದರೆ ಈ ಎರಡು ನೂತರ ರಾಜ್ಯಗಳ ಮೇಲೆ ಬ್ರಿಟಿಷ್ ಸಂಸತ್ತಿನ ಶಾಸನಾತ್ಮಕ ನಿಯಂತ್ರಣವಿರದು.

ಭಾರತದ ಅರಸೊತ್ತಿಗೆಯ ರಾಜ್ಯಗಳ ಮೇಲೆ ಇನ್ನು ಮುಂದೆ ಬ್ರಿಟಿಷ್ ಚಕ್ರಾಧಿಪತ್ಯದ ನಿಯಂತ್ರಣವಿರದು. ಅವುಗಳಿಗೆ ಸಂಬಂಧಪಟ್ಟ ಎಲ್ಲ ಒಪ್ಪಂದಗಳು ಅಂತ್ಯವಾಗುವುವು.

ಭಾರತ ಮತ್ತು ಪಾಕಿಸ್ತಾನ ಸರ್ಕಾರಗಳ ಆಡಳಿತಕ್ಕೆ ಸಂಬಂಧಪಟ್ಟಂತೆ ಕೆಲವು ತಾತ್ಕಾಲಿಕ ವ್ಯವಸ್ಥೆಗಳನ್ನು ಮಾಡಲಾಗುವುದು. ಭಾರತದ ಸಂವಿಧಾನ ಸಭೆಯು ಭಾರತಕ್ಕೆ ಸಂಬಂಧಪಟ್ಟ ಶಾಸನವನ್ನು ರೂಪಿಸುವ ಅಧಿಕಾರವನ್ನೂ ಹೊಂದಿರುತ್ತದೆ. ಪಾಕಿಸ್ತಾನದಲ್ಲಿ ಒಂದು ಹೊಸ ಸಂವಿಧಾನ ಸಂಭೆಯನ್ನು ರಚಿಸಲಾಗುವುದು. ಅದು ಪಾಕಿಸ್ತಾನಕ್ಕೆ ಸಂಬಂಧಪಟ್ಟ ಶಾಸನವನ್ನು ರೂಪಿಸುವ ಅಧಿಕಾರವನ್ನು ಹೊಂದಿರುತ್ತದೆ. ಭಾರತ ಮತ್ತು ಪಾಕಿಸ್ತಾನಗಳ ಸಂವಿಧಾನ ಸಭೆಗಳು ಇತರ ಅವಕಾಶಗಳನ್ನು ಒದಗಿಸುವ ತನಕ ಈ ಎರಡು ದೇಶಗಳಲ್ಲಿ ಹಾಗೂ ಅವುಗಳ ಪ್ರಾಂತಗಳಲ್ಲಿ 1935ರ ಕಾಯದೆಯ ಅನುಸಾರವಾಗಿ ಸರಕಾರವನ್ನು ನಡೆಸಲಾಗುವುದು.

## 27.3 ಭಾರತ ಸ್ವಾತಂತ್ರ್ಯ ಕಾಯ್ದೆ ಮುಖ್ಯ ಅಂಶಗಳು

* ಬ್ರಿಟೀಷ್ ಕ್ರೌನ್ ಎರಡು ರಾಷ್ಟ್ರಗಳಿಗೂ ಗವರ್ನರ್ ಜನರಲ್‌ನನ್ನು ನೇಮಿಸಿತು. ಎರಡೂ ದೇಶಗಳೂ ಒಪ್ಪಿದರೆ ಒಬ್ಬನೇ ಗವರ್ನರ್ ಜನರಲ್‌ನನ್ನು ನೇಮಿಸಬಹುದಿತ್ತು.
* ಭಾರತದ ಮೇಲಿನ ಬ್ರಿಟೀಷ್ ಸಾರ್ವಭೌಮತ್ವವನ್ನು ತೆಗೆದುಹಾಕಲಾಯಿತು ಮತ್ತು ಭಾರತೀಯ ರಾಜ್ಯಗಳು ಭಾರತ ಅಥವಾ ಪಾಕಿಸ್ತಾನಕ್ಕೆ ಸೇರುವ ಮುಕ್ತ ಸ್ವಾತಂತ್ರ್ಯವಿತ್ತು.
* ಹೊಸ ಸಂವಿಧಾನವನ್ನು ರಚಿಸಲು ಸಂವಿಧಾನದ ರಚನಾ ಸಮಿತಿಗಳನ್ನು ನೇಮಿಸಿ ಆಯಾ ರಾಷ್ಟ್ರಕ್ಕೆ ಹೊಂದುವಂತಹ ಕಾನೂನುಗಳನ್ನು ರಚಿಸಿಕೊಳ್ಳುವುದು ಮತ್ತು ಭಾರತೀಯ ಸೇನಾ ಪಡೆಗಳನ್ನು ಎರಡು ದೇಶಗಳಿಗೂ ವಿಭಾಗಿಸಿ ಸೇನೆಯ ಮೇಲ್ವಿಚಾರಣೆಯನ್ನು ಹಾಗೂ ರಾಜ್ಯಾಡಳಿತವನ್ನು ನಿರ್ವಹಿಸುವ ಏರ್ಪಾಡು ಮಾಡಲಾಯಿತು.
* ಬ್ರಿಟೀಷ್ ಸರ್ಕಾರಕ್ಕೆ 1947 ರ ಆಗಸ್ಟ್ 15 ರನಂತರ ಈ ಸ್ವತಂತ್ರ ರಾಷ್ಟ್ರಗಳ ಮೇಲೆ ಯಾವುದೇ ಕಾರಣಕ್ಕೂ ನಿಯಂತ್ರಿಸುವ ಅಧಿಕಾರವಿರುವುದಿಲ್ಲ ಮತ್ತು ಬ್ರಿಟೀಷ್ ಚಕ್ರವರ್ತಿ ಭಾರತದ ಸಾರ್ವಭೌಮ ಎಂಬುದಾಗಿ ಹೊಂದಿದ್ದ ಬಿರುದನ್ನು ರದ್ದುಗೊಳಿಸಲಾಯಿತು.
* ಪ್ರಾಂತ್ಯಗಳ ಯಾವುದೇ ಮಸೂದೆಗೆ ಚಕ್ರವರ್ತಿಯ ಆಜ್ಞೆಗೆ ಕಾಯಬೇಕಾಗಿಲ್ಲ ಮತ್ತು ಸೆಕ್ರೆಟರಿ ಆಫ್ ಸ್ಟೇಟ್ ಪಾಕ್ ಇಂಡಿಯಾ ಪದವಿಯನ್ನು ಕಿತ್ತು ಈ ಪದವಿಯನ್ನು ಕಾಮನ್‌ವೆಲ್ತ್ ರಾಷ್ಟ್ರಗಳ ಕಾರ್ಯದರ್ಶಿ ನೋಡಿಕೊಳ್ಳಲಾರಂಭಿಸಿದನು.

1947 ರ ಆಗಸ್ಟ್ 15 ರಂದು ಬ್ರಿಟೀಷ್ ಆಳ್ವಿಕೆ ಕೊನೆಗೊಂಡು ಭಾರತ ಸ್ವತಂತ್ರ ರಾಷ್ಟ್ರವಾಯಿತು. 1947 ರ ಈ ದಿನ ಒಂದು ಐತಿಹಾಸಿಕ ದಿನವಾಯಿತು. ಈ ಸ್ವಾತಂತ್ರ್ಯ ಗಳಿಸಲು ನಡೆದು ಬಂದ ಹಾದಿಯಲ್ಲಿ ಲಕ್ಷಾಂತರ ಜನ ಬಿತ್ಯಾಗ ಹೋರಾಟಗಳು ಸ್ವಾತಂತ್ರ್ಯ ಹೋರಾಟದ ಇತಿಹಾಸದ ಪುಟಗಳಲ್ಲಿ ಮರೆಯಲಾರದ ಚಿರಕ್ಷಣಗಳಾಗಿವೆಯೆನ್ನಬಹುದು.

## 27.4 ರ್‍ಯಾಡ್‌ಕ್ಲಿಪ್ ಆಯೋಗ

ರ್‍ಯಾಡ್‌ಕ್ಲಿಪ್ ಆಯೋಗವು ಎರಡು ತಿಂಗಳ ಕಾಲ ಅಧ್ಯಯನ ಮಾಡಿ ಭಾರತೀಯರನ್ನು ಸಂದರ್ಶನ ಮಾಡಿ ಅವರ ಅಹವಾಲುಗಳನ್ನು ಕೇಳಿ ತನ್ನ ವರದಿಯನ್ನು ಸಲ್ಲಿಸಿತು. ಇದರ ಪ್ರಕಾರ ಭಾರತ ಮತ್ತು ಪಾಕಿಸ್ತಾನವನ್ನು ಬೇರ್ಪಡೆ ಮಾಡಿ ಒಂದು ಗಡಿರೇಖೆಯನ್ನು ನಿರ್ಧರಿಸಲಾಯಿತು. ಇದರ ಪ್ರಕಾರ ಪಂಜಾಬ್, ಬಂಗಾಳ, ವಾಯುವ್ಯ ಸರಹದ್ದಿನ ಕೆಲವು ರಾಜ್ಯಗಳಲ್ಲಿ ಭಾರತ ಮತ್ತು ಪಾಕಿಸ್ತಾನದ ಗಡಿರೇಖೆಯನ್ನು ನಿರ್ಧರಿಸಲಾಯಿತು. ಇದಲ್ಲದೇ ಈ ಗಡಿರೇಖೆಯಲ್ಲಿಯ ಹಿಂದೂ-ಮುಸ್ಲಿಮರು ತಮಗೆ ನಿಗಧಿಪಡಿಸಿದ ರಾಜ್ಯಗಳಿಗೆ ವಲಸೆ ಹೋಗಲು ತಿಳಿಸಲಾಯಿತು.

## 27.5 ಭಾರತದ ವಿಭಜನೆ

1947 ರ ಭಾರತ ಸ್ವಾತಂತ್ರ್ಯ ಕಾಯ್ದೆ ಮತ್ತು ರ್‍ಯಾಡ್ ಕ್ಲಿಫ್ ಆಯೋಗದ ವರದಿ ಅನುಸರಿಸಿ ಭಾರತ ವಿಭಜನೆ ಮಾಡಲಾಗಿ ಎರಡೂ ರಾಷ್ಟ್ರಗಳು ಅಂದರೆ ಭಾರತ ಪಾಕಿಸ್ತಾನಗಳು ಸರ್ವತಂತ್ರ ಸ್ವತಂತ್ರ ರಾಷ್ಟ್ರಗಳಾದವು. ಆದರೆ ವಿಭಜನೆಯು ಸರ್ವಸಿದ್ಧವಾಯಿತು. ಹಿಂದೂ ಮುಸ್ಲಿಮರು ತಮಗೆ ನಿಗಧಿ ಪಡಿಸಿದ್ದ ಸ್ಥಳಗಳಿಗೆ ಹೋಗಲಾರಂಭಿಸಿದರು. ಈ ವಿಭಜನೆಯ ಕಾಲದಲ್ಲಿ ಆದಂತಹ ನೋವು, ಸಂಕಟ ಪ್ರಾಣಹಾನಿ, ರಕ್ತಪಾತ ಮುಂತಾದವುಗಳು ಭಾರತದ ಇತಿಹಾಸದಲ್ಲಿ ಕಪ್ಪು ಚುಕ್ಕೆಗಳಾಗಿ ಪರಿಣಮಿಸಿವೆ. ಆದರೂ ಸಹ ವಿಭಜನೆಯ ಕಾರ್ಯ ನಡೆಯಿತು. ಗಾಂಧೀಜಿಯವರು ಶಾಂತರಾಗಿರಲು ಹೇಳಿಕೆ ನೀಡಿದರು. ಹೇಗೊ ವಿಭಜನೆ ಕಾರ್ಯವು ಪೂರ್ಣಗೊಂಡಿತು.

## 27.6 ಭಾರತದ ಸ್ವಾತಂತ್ರ್ಯ

ವಿಭಜನೆ ಕಾರ್ಯ ಪೂರ್ಣಗೊಂಡ ನಂತರ ಭಾರತದ ಸ್ವಾತಂತ್ರ್ಯ ಕಾಯ್ದೆಯನ್ನನುಸರಿಸಿ ಭಾರತದ ಸ್ವಾತಂತ್ರ್ಯವನ್ನು ಬ್ರಿಟೀಷರು ಘೋಷಿಸಿದರು. ರಾಜ್ಯಾಂಗ ಸಮಿತಿಯನ್ನು ರಚಿಸಿ, ಪ್ರತ್ಯೇಕ ಸಂವಿಧಾನದ ರಚನೆಗೆ ಅವಕಾಶ ಮಾಡಿಕೊಟ್ಟರು. 1947 ಆಗಸ್ಟ್ 15 ರಂದು ಭಾರತ ದೇಶವು ಸ್ವತಂತ್ರ ರಾಷ್ಟ್ರವಾಗಿ ಮಾರ್ಪಟ್ಟಿತು.

## 27.7 ಘಟಕದ ಸಾರಾಂಶ

ಈ ಘಟಕದ ಅಧ್ಯಯನದಿಂದ ನಾವು

* ಭಾರತದ ಸ್ವಾತಂತ್ರ್ಯ ನೀಡುವತ್ತ ಹಲವು ಹಂತಗಳನ್ನು ಅಧ್ಯಯನ ಮಾಡಿದೆವು.
* ಭಾರತದ ಸ್ವಾತಂತ್ರ್ಯ ಕಾಯ್ದೆಯನ್ನು ಜಾರಿಗೊಳಿಸಲಾಯಿತು.
* ಭಾರತದ ವಿಭಜನೆಯನ್ನು ಮಾಡಲಾಯಿತು.
* ಭಾರತದ ಸ್ವಾತಂತ್ರ್ಯವನ್ನು ಘೋಷಿಸಲಾಯಿತು.
* ಭಾರತವು ತನ್ನದೇ ಆದ ಸಂವಿಧಾನವನ್ನು ರಚಿಸಿಕೊಳ್ಳಲು ಒಂದು ಉಚ್ಛಾಂಗ ಸಮಿತಿಯನ್ನು ರಚಿಸಲಾಯಿತು.

ಈ ಎಲ್ಲಾ ಕಾರ್ಯಗಳ ವಿಧಿ ವಿಧಾನಗಳನ್ನು ಮತ್ತು ಅವುಗಳ ಬಾರಿಯನ್ನು ಸಹ ಈ ಘಟಕದಲ್ಲಿ ಅಧ್ಯಯನ ಮಾಡಲಾಯಿತು.

## 27.8 ಸ್ವಯಂ ಪರಿಶೀಲನಾ ಪ್ರಶ್ನೆಗಳು

1. ಭಾರತದ ಸ್ವಾತಂತ್ರ್ಯ ಕಾಯ್ದೆ; 1947, ಭಾರತದ ವಿಭಜನೆ ಮತ್ತು ಭಾರತ ಸ್ವಾತಂತ್ರ್ಯಕ್ಕೆ ನೀಡಿದ ಅವಕಾಶಗಳನ್ನು ವಿವರಿಸಿ.
2. ಇವುಗಳಿಗೆ ಟಿಪ್ಪಣಿ ಬರೆಯಿರಿ.
   1. ಭಾರತ ಸ್ವಾತಂತ್ರ್ಯ ಕಾಯ್ದೆ 1947
   2. ರ್‍ಯಾಡ್‌ಕ್ಲಿಫ್ ಆಯೋಗ

## 27.9 ಹೆಚ್ಚಿನ ಅಧ್ಯಯನಕ್ಕೆ ಗ್ರಂಥಗಳು


1. Sumit Sarkar : Modern India
2. Prasad .L.P. : History of Modern India



ಆದೇಶ ಸಂಖ್ಯೆ : ಕರಾಮುವಿ/ಅಸಾವಿ/4–398/2015–16 ದಿನಾಂಕ 21–01–2016
ಮುದ್ರಕರು : ರಾಜಾ ಪ್ರಿಂಟರ್ಸ್, ಬೆಂಗಳೂರು–560 027 ಪ್ರತಿಗಳು : 4500
ಒಳಪುಟ ಕಾಗದ : 60 ಜಿ.ಎಸ್.ಎಂ. ವೆಸ್ಟ್‌ಕೋಸ್ಟ್ ಮ್ಯಾಪ್‌ಲಿಥೋ ಪೇಪರ್, ರಕ್ಷಾಪುಟಕ್ಕೆ : 220 ಜಿ.ಎಸ್.ಎಂ. ಫಾರಿನ್ ಮ್ಯಾಟ್ ಆರ್ಟ್ ಕಾರ್ಡ್



# ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

ಮುಕ್ತಗಂಗೋತ್ರಿ, ಮೈಸೂರು–೫೭೦ ೦೦೬

ಉನ್ನತ ಶಿಕ್ಷಣದ ಅವಕಾಶಗಳನ್ನು ವೃದ್ಧಿಸಿ ಶಿಕ್ಷಣವನ್ನು ಪ್ರಜಾತಾಂತ್ರಿಕರಿಸುವ ಸಾಧನವಾಗಿ ಮುಕ್ತ ವಿಶ್ವವಿದ್ಯಾನಿಲಯ ವ್ಯವಸ್ಥೆಯನ್ನು ಅನಾವರಣಗೊಳಿಸಲಾಗಿದೆ.

*ರಾಷ್ಟ್ರೀಯ ಶಿಕ್ಷಣ ನೀತಿ ೧೯೮೬*




♣ ಪ್ರಾದೇಶಿಕ ಕೇಂದ್ರಗಳು

ಬೆಂಗಳೂರು
ದಾವಣಗೆರೆ
ಗುಲ್ಬರ್ಗಾ
ಧಾರವಾಡ
ಶಿವಮೊಗ್ಗ
ಮಂಗಳೂರು
ತುಮಕೂರು
ಹಾಸನ
ಚಾಮರಾಜನಗರ
ಬಳ್ಳಾರಿ
ಮಂಡ್ಯ
ಕೋಲಾರ
ಬಿಜಾಪುರ
ಬೆಳಗಾಂ
ರಾಮನಗರ
ಬೆಂಗಳೂರು (ಮತ್ತೊಂದು)
ಚಿಕ್ಕಮಗಳೂರು
ಉಡುಪಿ
ಕಾರವಾರ
ಬೀದರ್
ಮೈಸೂರು

- ಮುಖ್ಯಕಚೇರಿಗಳು
- ★ ಒಟ್ಟು ಅಧ್ಯಯನ ಕೇಂದ್ರಗಳು: ೧೨೩
- ♣ ಪ್ರಾದೇಶಿಕ ಕೇಂದ್ರಗಳು: ೨೧
- ❄ ಬಿ ಎಡ್ ಅಧ್ಯಯನ ಕೇಂದ್ರಗಳು: ೧೦
- ✦ ಎಂ ಎಡ್ ಅಧ್ಯಯನ ಕೇಂದ್ರಗಳು: ೦೬

